# ವಿವಿಧ ಕಲಾವಿದರ ಕುಂಚದಲ್ಲಿ ಗಾಂಧೀಜಿ















ಸತ್ಯ, ಶಾಂತಿ, ಸೌಹಾರ್ದತೆ, ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ
ಹಲ್ಲೆ, ಹತ್ಯೆಯಾದಾಗಲೆಲ್ಲಾ ಗಾಂಧಿ ನೆನಪಾಗುತ್ತಾರೆ.
ಮತೀಯವಾದಿಗಳಿಂದ ಹತ್ಯೆಯಾದ ಶಾಂತಿಪ್ರಿಯ ಗಾಂಧಿ,
ದುಷ್ಕೃತ್ಯಗಳಾದಾಗಲೆಲ್ಲ ಜನಮನದಲ್ಲಿ ಜನ್ಮತಳೆಯುತ್ತಾರೆ.
ದೇಶಪ್ರೇಮ, ಧರ್ಮಾಭಿಮಾನದ ಮುಖವಾಡದಲ್ಲಿ
ಹತ್ಯಾಸಂಸ್ಕೃತಿಯನ್ನು ವೈಭವೀಕರಿಸುವ
ಮತಾಂಧ ಶಕ್ತಿಗಳನ್ನು ನಿರ್ಮೂಲನೆ ಮಾಡುವುದೇ
ಗಾಂಧಿ ಸ್ಮರಣೆಯ ಆಶಯವಾಗಬೇಕು.







# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ?




**ಚಿತ್ರಗಳು :** ಷಣ್ಮುಖ, ವಿ. ಗೋಪಾಲ್, ಕಮಲಂ ಅರಸು, ಶ್ರೀಹರಿ ದೇಶಪಾಂಡೆ, ಜಿಎಂಬೊ, ರಾಂಚಂದ್ರ ಕೊಪ್ಪಲು, ಗೋಪಿ

**ಮುಖಪುಟ :** ಡಾ॥ ಎಂ. ಎಂ. ಕಲಬುರ್ಗಿ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ





ಇತ್ತೀಚೆಗೆ ಕೋಬ್ರಪೋಸ್ಟ್‌ನ ಒಂದು ಕುಟುಕು ಕಾರ್ಯಾಚರಣೆಯಲ್ಲಿ ರಣವೀರ ಸೇನೆಯ ಆರು ಮಂದಿ ಕೊಲೆಗಾರರು ತಾವು ಎಸಗಿದ ಅಪರಾಧಗಳನ್ನು ಒಪ್ಪಿಕೊಂಡು ಮಾಜಿ ಪ್ರಧಾನಿ ದಿವಂಗತ ಚಂದ್ರಶೇಖರ್, ಬಿಜೆಪಿ ನಾಯಕರಾದ ಯಶ್ವಂತ್ ಸಿನ್ಹಾ, ಮುರಳಿ ಮನೋಹರ ಜೋಷಿ ಮತ್ತು ಸುಶೀಲ್ ಸಿಂಗ್ ಮೋಡಿ ತಮ್ಮ ಸೇನೆಗೆ ಸಹಾಯ ನೀಡಿದ್ದರೆಂಬ ಆತಂಕಕಾರಿ ಮಾಹಿತಿಯನ್ನು ಹೊರಗೆಡಹಿದ್ದಾರೆ. ಬಿಹಾರದಲ್ಲಿ ಇನ್ನೂ ಅರೆ–ಊಳಿಗಮಾನ್ಯ ವ್ಯವಸ್ಥೆಯ ಪಳೆಯುಳಿಕೆಗಳಿವೆ. ಮೇಲ್ವರ್ಗದ ಜಮೀನುದಾರರಿಂದ ದಲಿತ ಮತ್ತು ಇತರ ಕೆಳವರ್ಗಗಳ ಕೃಷಿ ಕೂಲಿಕಾರರ ಮೇಲೆ ಆಕ್ರಮಣಗಳು ಆಗಾಗ್ಗೆ ಜರುಗುತ್ತಿರುತ್ತವೆ.

ಸುಮಾರು ಮೂರು ದಶಕಗಳ ಹಿಂದೆ ನಕ್ಸಲೀಯರು ಮತ್ತು ಸಿಪಿಐ (ಎಂ.ಎಲ್.) ಪಕ್ಷದ ಕಾರ್ಯಕರ್ತರು ಇಂತಹ ಕೃಷಿಕೂಲಿಕಾರರನ್ನು ಶೋಷಣೆಯ ವಿರುದ್ಧ ಸಂಘಟಿಸಲು ಪ್ರಯತ್ನಿಸಿದರು. ಇದಕ್ಕೆ ಪ್ರತಿಯಾಗಿ ಭೂಮಾಲೀಕರು 'ರಣವೀರ ಸೇನೆ' ಎಂಬ ಖಾಸಗಿ ಸೈನ್ಯ ಪಡೆಯನ್ನು ೧೯೯೪ರಲ್ಲಿ ಸ್ಥಾಪಿಸಿದರು. ಬ್ರಹ್ಮೇಶ್ವರ ಸಿಂಗ್ ಮುಖಿಯ ಎಂಬ ಭೂಮಾಲೀಕ ಈ ಪಡೆಯನ್ನು ಒಂದು ಮಾರಣಯಂತ್ರವನ್ನಾಗಿ ಪರಿವರ್ತಿಸಿದ. ಅಂದಿನಿಂದ ರಕ್ತದ ಕೋಡಿ ಹರಿಯಲು ಶುರುವಾಯಿತು. ಸುಮಾರು ಆರು ವರ್ಷಗಳಲ್ಲಿ ೩೦೦ ದಲಿತರನ್ನು ಬರ್ಬರವಾಗಿ ಹತ್ಯೆ ಮಾಡಲಾಯಿತು. ಲಕ್ಷ್ಮಣಪುರ ಬಥೆ ಎಂಬ ಸ್ಥಳದಲ್ಲಿ ಜರುಗಿದ ಸಾಮೂಹಿಕ ಹತ್ಯೆಯಲ್ಲಿ ಈ ಸೇನೆಯಿಂದ ೫೮ ದಲಿತರನ್ನು ನಿರ್ದಯವಾಗಿ ಕೊಲ್ಲಲಾಯಿತು. ಅವರಲ್ಲಿ ೨೭ ಮಹಿಳೆಯರು ಮತ್ತು ೧೬ ಮಕ್ಕಳು ಇದ್ದರು. ಈ ಹತ್ಯಾಕಾಂಡದಲ್ಲಿ ಆಪಾದಿತನಾಗಿದ್ದ ಪ್ರಮೋದ್ ಸಿಂಗ್ ಎಂಬುವನು ಮಾಜಿ ಕೇಂದ್ರ ಸಚಿವ ಯಶ್ವಂತ್ ಸಿನ್ಹಾ ಆಗಾಗ್ಗೆ ಸೇನೆಯ ಮುಖ್ಯಸ್ಥನಾಗಿದ್ದ ಮುಖಿಯನನ್ನು ಭೇಟಿ ಮಾಡುತ್ತಿದ್ದರು ಹಾಗೂ ರೂ. ೫.೫ ಲಕ್ಷ ಹಣವನ್ನು ನೀಡಿದ್ದರೆಂದು ಕುಟುಕು ಕಾರ್ಯಾಚರಣೆಯ ಸಮಯದಲ್ಲಿ ತಿಳಿಸಿದ್ದಾನೆ !

ಬಿಹಾರಿನ ಮುಖ್ಯಮಂತ್ರಿ ನಿತೀಶ್ ಕುಮಾರ್ ೨೦೦೫ರಲ್ಲಿ ರಣವೀರ ಸೇನೆಯ ಸಾಮೂಹಿಕ ಹತ್ಯೆಗಳಿಗೆ ಸಂಬಂಧಿಸಿದಂತೆ ಜರುಗುತ್ತಿದ್ದ ವಿಚಾರಣೆಯನ್ನು ಮೊಟಕುಗೊಳಿಸಿದರು. ಹೀಗೆ ಆಜ್ಞೆಯನ್ನು ಹೊರಡಿಸಿದ್ದರ ಹಿಂದೆ ಕೆಲವು ಬಿಜೆಪಿ ನಾಯಕರನ್ನು ರಕ್ಷಿಸುವ ಇರಾದೆಯಿತ್ತು ! ಈ ಸೇನೆಯನ್ನು ಬಿಹಾರ ಸರ್ಕಾರ ಒಂದು ಭಯೋತ್ಪಾದಕ ಗುಂಪೆಂದು ಪರಿಗಣಿಸಿತ್ತು. ಕೇಂದ್ರ ಸರ್ಕಾರ ಕೂಡ ಇದನ್ನು ನಿಷೇಧಿಸಿತ್ತು. ಹೀಗಿರಬೇಕಾದರೆ, ದೇಶದ ಪ್ರಮುಖ ಪಕ್ಷಗಳಲ್ಲಿ ಮುಂಚೂಣಿಯಲ್ಲಿರುವ ಬಿಜೆಪಿಯ ಕೆಲವು ನಾಯಕರು ತಮ್ಮ ಬೇಳೆ ಬೇಯಿಸಿಕೊಳ್ಳಲು ಇಂತಹ "ಸ್ನೇಹದ" ಜೊತೆ ಕೈಜೋಡಿಸುತ್ತಾರೆಂದರೆ ಕ್ರಿಮಿನಲ್‌ಗಳು ಮತ್ತು ರಾಜಕಾರಣಿಗಳ ನಡುವೆ ಎಂತಹ "ಸ್ನೇಹದ" ನಂಟಿರುತ್ತದೆಯೆಂದು ತಿಳಿದುಬರುತ್ತದೆ. "ನಮ್ಮದು ಭಿನ್ನ ಪಕ್ಷ, ಇತರ ಪಕ್ಷಗಳಂತಲ್ಲ" ಎಂದೆಲ್ಲ ಟಾಂಟಾಂ ಮಾಡುವ ಬಿ.ಜೆ.ಪಿ.ಯವರಿಂದ ಇಂತಹ ವರಸೆಯೇ ? ಅವರ ಕಪಾಟಿನಲ್ಲಿ ಇನ್ನೂ ಇಂತಹ ಎಷ್ಟು ಅಸ್ಥಿಪಂಜರಗಳಿವೆಯೋ ? ಸಮಕಾಲೀನ ಸಂಬಂಧಗಳನ್ನು ಬಲ್ಲವರಾರು ?

✶ ✶ ✶

ಯಾವುದೋ ನಿಯೋಜಿತ ಹಂತಕರ ಗುಂಡೇಟಿಗೆ ಬಲಿಯಾಗಿ ಸೆಪ್ಟೆಂಬರ್ ೩ರಂದು ಡಾ॥ ಎಂ. ಎಂ. ಕಲಬುರ್ಗಿಯವರು ಹತಾತ್ಮರಾದರು. ಹೀಗೆ ಹಂತಕರೊಡನೆ ನೇರ ಸಂಪರ್ಕ ಇರಿಸಿಕೊಂಡಿರುವ ದುಷ್ಟಕೂಟವು ನಮ್ಮ ರಾಜ್ಯದಲ್ಲಿ ಎಲ್ಲೋ ತಲೆಮರೆಸಿಕೊಂಡು ಜನರನ್ನು ಕೊಲ್ಲುವ ಕಾಯಕದಲ್ಲಿ ನಿರತವಾಗಿದೆ. ಇದು ಪರಮ ಅನೀತಿಯ, ಅಮಾನವೀಯ, ನಾಚಿಕೆಗೇಡಿನ ಸಂಗತಿ. ಒಂದು ಕಡೆ ಸಂಸ್ಕೃತಿಯ ಉಪದೇಶ ನೀಡುವುದು, ಇನ್ನೊಂದೆಡೆ ಅತಿನಿಕೃಷ್ಟ ಸಂಸ್ಕೃತಿಯ ಹೀನಕೃತ್ಯಗಳನ್ನೆಸಗುವುದು ನಮ್ಮ


(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೭ ಸಂಚಿಕೆ-೩ ಅಕ್ಟೋಬರ್ ೨೦೧೫



■ **ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

■ **ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**



# ಸಂಪಾದಕೀಯ

## ಮನೆಗೆ ಮಾರಿಯಾದ ಮನದ ಮಾತು

**ನ**ಮ್ಮ ದೇಶದ ಪ್ರಧಾನಿ ನರೇಂದ್ರ ಮೋದಿ ಅವರು ವಿವಿಧ ಮಾಧ್ಯಮಗಳ ಮೂಲಕ ಮನದ ಮಾತು ಹೇಳುತ್ತಿದ್ದಾರೆ. ಮನದ ಮಾತಿಗೆ ಪ್ರತಿಕ್ರಿಯೆಯ ರೂಪದಲ್ಲಿ ಸಾವಿರಾರು ಪತ್ರಗಳು ಬರುತ್ತಿವೆ, ಅವುಗಳನ್ನೋದಿ ರೋಮಾಂಚನಗೊಂಡಿರುವೆ, ಆ ಪತ್ರಗಳಿಂದ ಬಹಳ ವಿಷಯ ಕಲಿತಿದ್ದೇನೆ ಎಂದು ಹೇಳಿದ್ದಾರೆ. ಆದರೆ ಈವರೆಗೂ ಪ್ರಧಾನಿಯವರು ಯಾವುದೇ ಮಾಧ್ಯಮದ ಮೂಲಕ ದೇಶದ ಜನರ ಜೊತೆ ಸಂವಾದಕ್ಕಿಳಿದ ಉದಾಹರಣೆಯಿಲ್ಲ. ರೇಡಿಯೋ, ಟಿ.ವಿ.ಗಳ ಮೂಲಕ ತಮ್ಮ ಮಾತು ಹಾಗೂ ದೇಹ ಭಾಷೆಯ ಮೂಲಕ ಅಧಿಕಾರಕ್ಕೆ ಬಂದ ದಿನದಿಂದ ತಮ್ಮ ಕನಸುಗಳನ್ನು ಹಂಚುತ್ತಲೇ ಇದ್ದಾರೆ. ಇದೆಲ್ಲ ಏಕಮುಖಿ ಸಂವಹನ. ಬಹುಶಃ ಯಾವುದಾದರೂ ವೇದಿಕೆಯಲ್ಲಿ ಈ ದೇಶದ ಚಿಂತಕರು, ವಿವಿಧ ಕ್ಷೇತ್ರಗಳ ತಜ್ಞರ ಜೊತೆ ಕೂತು ತಮ್ಮ ಮನದ ಮಾತಿನ ಬದಲಾಗಿ, ಆಡಿದ ಮಾತುಗಳ ಕುರಿತು ಚಿಂತನ-ಮಂಥನ, ವಾದ-ಸಂವಾದ ನಡೆಸಿದರೆ ಮುಂದಿನ ಅವಧಿಯಲ್ಲಿ ಏನು ಮಾಡಬೇಕೆಂಬುದು ಅರಿವಿಗೆ ಬರುತ್ತದೆ. ಮೋದಿಯವರ ಚುನಾವಣಾ ಘೋಷಣೆಗಳಲ್ಲಿ 'ಮನೆಗೊಂದು ಉದ್ಯೋಗ' ಎಂದು ಹೇಳಿದ್ದರು. ಆ ಕುರಿತು ಅವರಿಗೆ ಯಾರೂ ಪತ್ರ ಬರೆದಿಲ್ಲವೇನೋ. ಹೋಗಲಿ ಮೋದಿಯವರಿಗೆ ಈ ದೇಶದ ನಿರುದ್ಯೋಗ ಹೋಗಲಾಡಿಸುವ ಕುರಿತು ಏನಾದರೂ ಕಾಳಜಿ ಇದ್ದರೆ ಇತ್ತೀಚಿನ ಎರಡು ವರದಿಗಳನ್ನು ಅವರು ಗಮನಿಸುವುದು ಒಳಿತು. ಛತ್ತೀಸ್‌ಗಡ ರಾಜ್ಯದಲ್ಲಿ ಮೂವತ್ತು ಪ್ಯೂನ್ ಪೋಸ್ಟ್‌ಗಳಿಗೆ ಸಂದರ್ಶನ ಕರೆಯಲಾಗಿತ್ತಂತೆ. ಆ ಮೂವತ್ತು ಸ್ಥಾನಗಳಿಗೆ ಅರ್ಜಿ ಹಾಕಿದ ಉದ್ಯೋಗಾಕಾಂಕ್ಷಿಗಳ ಸಂಖ್ಯೆ ೭೫೦೦೦. ಅದೇರೀತಿ ಮಧ್ಯಪ್ರದೇಶ ರಾಜ್ಯದಲ್ಲಿಯೂ ಪ್ಯೂನ್ ಸ್ಥಾನಗಳಿಗೆ ಅರ್ಜಿ ಹಾಕಲು ಕೋರಲಾಗಿತ್ತಂತೆ. ಅಲ್ಲಿನ ಸ್ಥಾನಗಳ ಸಂಖ್ಯೆ ಮೂರು ನೂರಾ ಅರವತ್ನಾಲ್ಕು ಆದರೆ, ಕೆಲಸಕ್ಕೆ ಅರ್ಜಿ ಹಾಕಿದವರ ಸಂಖ್ಯೆ ಹದಿನೈದು ಲಕ್ಷ. ಈ ಪ್ಯೂನ್ ಕೆಲಸಕ್ಕೆ ಅರ್ಜಿ ಹಾಕಿದವರಲ್ಲಿ ೨೨೭ ಜನ ಪಿಎಚ್.ಡಿ. ಪದವೀಧರರು ಇದ್ದರಂತೆ. ಸಂದರ್ಶನ ನಡೆಸಲೂ ಸಾಧ್ಯವಾಗದೆ ಸಂದರ್ಶನವನ್ನೇ ರದ್ದುಮಾಡಿದ ಘಟನೆ ನಡೆದಿದೆ. ಸ್ಥಾನ ಯಾವುದಾದರೇನು ಕಾಯಕ ಮುಖ್ಯ. ಆದರೆ ಪ್ರಧಾನಿ ಮೋದಿಯವರಿಗೆ ತಾವೇ ಆಡಿದ ಮಾತುಗಳನ್ನು ಜಾರಿಗೆ ತರುವ ಮನಸ್ಸಿದ್ದರೆ ಈ ಮೇಲಿನ ಘಟನೆಗಳ ಕುರಿತು ತಮ್ಮ ಮನದ ಮಾತುಗಳ ಮೂಲಕ ದೇಶದ ಜನರಿಗೆ ಉತ್ತರ ಕೊಡಬೇಕು.

ಗುಜರಾತ್ ರಾಜ್ಯ ಒಂದು ಮಾದರಿ ರಾಜ್ಯ ಎಂದು ಮೋದಿಯವರು ಹಾಗೂ ಬಿ.ಜೆ.ಪಿ.ಯವರು, ಅವರ ಬೆಂಬಲಿತ ಬುದ್ಧಿಜೀವಿಗಳು, ಕೆಲವು ಮಾಧ್ಯಮದವರು ಹೇಳುತ್ತಲೇ ಇದ್ದರು. ಇಂದಿಗೂ ಅದೇ ಮಾತನ್ನು ಹೇಳುತ್ತಾರೆ. ಆದರೆ ಅದೇ ರಾಜ್ಯದಲ್ಲಿ ಪಟೇಲ್ ಸಮುದಾಯದವರು ನಮಗೂ ಮೀಸಲಾತಿ ಕೊಡಿ, ಉದ್ಯೋಗ ಕೊಡಿ ಎಂಬ ಚಳುವಳಿ ಆರಂಭಿಸಿದ್ದಾರೆ. ಸಬಲ ಜನಾಂಗಕ್ಕೂ ಮೀಸಲಾತಿ ಕೇಳಿ, ಅದು ಸಿಗದೇ ಇದ್ದರೆ ಯಾರಿಗೂ ಮೀಸಲಾತಿ ಬೇಡ ಎನ್ನುವ 'ಮೀಸಲಾತಿ' ವಿರೋಧಿ ಹುನ್ನಾರ ಈ ಘೋಷಣೆ ಮತ್ತು ಚಳುವಳಿಯ ಹಿಂದಿದೆ ಎನ್ನುವುದು ಎಲ್ಲರಿಗೂ ತಿಳಿದ ವಿಷಯ. ಆದರೆ ಮೋದಿಯವರ ಮೇಕ್ ಇನ್ ಇಂಡಿಯಾದ ಪ್ರಯೋಗಶಾಲೆಯಲ್ಲಿಯೇ ನಮಗೂ ಮೀಸಲಾತಿ ಕೊಡಿ, ಆ ಮೂಲಕ ಉದ್ಯೋಗ ನೀಡಿ ಎಂಬ ಘೋಷಣೆ ಬಂದದ್ದು ಮೋದಿಯವರ, ಸಂಘಪರಿವಾರದ ಗುಪ್ತಕಾರ್ಯಸೂಚಿಯೋ ಅಥವಾ ಮೇಕ್ ಇನ್ ಇಂಡಿಯಾ ಘೋಷಣೆಯ ವೈಫಲ್ಯವೋ ಎಂಬುದನ್ನು ಮನದಮಾತಿನ ಮಲ್ಲ ಮೋದಿ ಮೌನಮುರಿದು ಹೇಳಬೇಕು.

ಪ್ರಧಾನಿ ಮೋದಿಯವರಿಗೇನಾದರೂ ದೇಶದ ಬಗ್ಗೆ, ದೇಶದ ಕಾಯಕಾಂಕ್ಷಿಗಳ ಬಗ್ಗೆ ನಿಜವಾದ ಗೌರವವಿದ್ದರೆ ಈಗಾಗಲೇ ದೇಶ ಎದುರಿಸುತ್ತಿರುವ ನಿರುದ್ಯೋಗ ಸಮಸ್ಯೆ ಕುರಿತು ದೇಶದ ಯುವಕರೊಂದಿಗೆ ಸಂವಾದಕ್ಕಿಳಿಯಲಿ. ಅದಕ್ಕೂ ಮುಂಚೆ ೨೦೧೩-೧೪ರ ಅಂಕಿಸಂಖ್ಯೆಯಂತೆ ದೇಶದ ಒಟ್ಟು ಆಂತರಿಕ ಉತ್ಪನ್ನದಲ್ಲಿ ಕೃಷಿ ಹಾಗೂ ಕೃಷಿ ಸಂಬಂಧಿತ ಕ್ಷೇತ್ರದ ಪಾಲು ಕೇವಲ ಪ್ರತಿಶತ ೧೩ ಎಂಬುದನ್ನು ಗಮನಿಸಲಿ. ಇದರಿಂದಾಗಿ ಭಾರತದ ಗ್ರಾಮೀಣ ಪ್ರದೇಶದ ಮಾನವ ಸಂಪನ್ಮೂಲ ಉದ್ಯೋಗವಿಲ್ಲದೆ, ಉತ್ಪಾದನೆಯಿಲ್ಲದೆ, ಹಸಿವು-ನಿರುದ್ಯೋಗದಿಂದ ಬಳಲುತ್ತಿದೆ ಎಂಬುದನ್ನು ಗಮನಿಸಲಿ. ಗ್ರಾಮೀಣ ಭಾಗದ ಇಂಥ ಯುವಕ ಯುವತಿಯರೇ ಇಂದು ಸರಕಾರಗಳು 'ಡಿ' ದರ್ಜೆಯ ಉದ್ಯೋಗಕ್ಕಾಗಿ ಕರೆಯುವ ಸಂದರ್ಶನಗಳಿಗೆ ಸಾವಿರ, ಸಾವಿರ ಸಂಖ್ಯೆಯಲ್ಲಿ ಬಂದು ಸರತಿಸಾಲಿನಲ್ಲಿ ನಿಲ್ಲುತ್ತಿರುವುದು. ಕೃಷಿಕ್ಷೇತ್ರದಲ್ಲಿ ಶೇ. ೪೯ರಷ್ಟು ಉದ್ಯೋಗಗಳನ್ನು ಒದಗಿಸಬಹುದು. ಆದರೆ ಕೃಷಿಕನೇ ಕೃಷಿಯಿಂದ ಹೊರಬಿದ್ದು ಆತ್ಮಹತ್ಯೆಯ ದಾರಿ ಹಿಡಿದಿರುವಾಗ ಆ ಕ್ಷೇತ್ರದ ಉದ್ಯೋಗವನ್ನು ಯಾರು

ನೆಚ್ಚಿಕೊಳ್ಳುತ್ತಾರೆ. ಮೋದಿಯವರ ಮನದ ಸ್ಕ್ಯಾನಿಂಗ್ ಮಾಡಿದರೆ ಅಲ್ಲಿ ಕೃಷಿಕ್ಷೇತ್ರವನ್ನು ಬಹುರಾಷ್ಟ್ರೀಯ ಕಂಪನಿಗಳಿಗೆ ಮುಕ್ತವಾಗಿಸಿ, ಕಾರ್ಪೊರೇಟ್ ಕೃಷಿ, ಗುತ್ತಿಗೆ ಕೃಷಿಗೆ ಅನುಕೂಲ ಮಾಡಿಕೊಡುವ ನೀಲ ನಕ್ಷೆಗಳು ಗೋಚರಿಸುತ್ತವೆ. ಈ ನೀಲನಕ್ಷೆಗಳು ಮೋದಿಯವರ ಭೂಸ್ವಾಧೀನ ಕಾನೂನಿಗಾಗಿ ತಂದ ಸುಗ್ರೀವಾಜ್ಞೆಯಲ್ಲಿದ್ದವು. ಸದ್ಯಕ್ಕೆ ಬಹುರಾಷ್ಟ್ರೀಯ ಕಂಪನಿಗಳಿಗೆ ಭೂಮಿ ಒದಗಿಸಿ ಉದ್ದಿಮೆ, ಕೃಷಿ ಉದ್ದಿಮೆ ಬೆಳೆಸುವ ಮೋದಿಯವರ ಮನದಾಸೆಗೆ ಹಿನ್ನಡೆಯಾಗಿದೆ. ಗ್ರಾಮೀಣ ಭಾಗದಲ್ಲಿ ಇರುವ ಕೃಷಿಯನ್ನೂ ಬಹುರಾಷ್ಟ್ರೀಯ ಕಂಪನಿಗಳಿಗೆ ಕೊಟ್ಟು ಕೃಷಿಕರನ್ನು, ಕೃಷಿಕರ ಮಕ್ಕಳನ್ನು ಕೃಷಿಕಾರ್ಮಿಕರನ್ನು ಭೂಮಿಯಿಂದ ಹೊರತಳ್ಳಿದರೆ ಮಧ್ಯಪ್ರದೇಶ, ಛತ್ತೀಸ್‌ಗಡದಲ್ಲಿ ಈಗ ಪ್ಯೂನ್ ಸ್ಥಾನಕ್ಕೆ ಮುಗಿಬಿದ್ದ ಉದ್ಯೋಗಾಕಾಂಕ್ಷಿಗಳಂತೆ ದೇಶದಾದ್ಯಂತ ಬಹುರಾಷ್ಟ್ರೀಯ ಕಂಪನಿಗಳ ವಾಚ್‌ಮನ್, ಕಸಗುಡಿಸುವ ಕೆಲಸಕ್ಕೆ ಲಕ್ಷಾಂತರ ಯುವಕರು ಮುಗಿಬೀಳಬಹುದು. ಇದರರ್ಥ ಪ್ಯೂನ್, ವಾಚ್‌ಮನ್ ಕೆಲಸಗಳು ಕೀಳು ಎನ್ನುವುದಲ್ಲ. ಈ ದೇಶಕ್ಕೆ ಮೇಕ್ ಇನ್ ಇಂಡಿಯಾದಡಿ ಬರುವ ಕೈಗಾರಿಕೆಗಳು ಸಂಪತ್ತನ್ನು ಹೆಚ್ಚಿಸಿ ಲೂಟಿ ಮಾಡುತ್ತವೆ. ಆದರೆ ಸಂಪತ್ತಿನ ಉತ್ಪಾದನಾ ಕ್ರಿಯೆಯಲ್ಲಿ ಮಾನವ ಶಕ್ತಿಯನ್ನು ಅತ್ಯಂತ ಕಡಿಮೆ ಬಳಸಿ ಸಂಪತ್ತಿನಲ್ಲಿ ಹೆಚ್ಚಳವನ್ನು ತೋರಿಸುತ್ತವೆ. ಕಳೆದ ೨೦೧೨ರ ಅಂಕಿಅಂಶಗಳನ್ನೇ ನೋಡಿದರೆ ಜಿಡಿಪಿ ಬೆಳವಣಿಗೆ ೭.೪ರಷ್ಟಿದ್ದರೆ ಉದ್ಯೋಗದ ಬೆಳವಣಿಗೆ ಕೇವಲ ೧.೪ರಷ್ಟಿದೆ. ಅಂದರೆ ಉದ್ಯೋಗವಿಲ್ಲದ ಅಭಿವೃದ್ಧಿ. ಉದ್ಯೋಗವೇನಾದರೂ ಹೆಚ್ಚಿದರೆ ಅದು ‘ಡಿ’ ದರ್ಜೆಯಲ್ಲಿ ಹೆಚ್ಚಿರುತ್ತದೆ. ಇದಕ್ಕೆ ‘ಮೇಕ್ ಇನ್ ಇನ್‌‘ಡಿ’ಯಾ...’ ಎನ್ನಬಹುದು. ನಮ್ಮಲ್ಲಿ ಕೋಟ್ಯಧಿಪತಿಗಳ ಸಂಖ್ಯೆ ಹೆಚ್ಚುತ್ತಿದೆ. ಆದರೆ ಅದರ ಸಾವಿರಪಟ್ಟು ಬಡವರ, ನಿರುದ್ಯೋಗಿಗಳ ಸಂಖ್ಯೆ ಹೆಚ್ಚುತ್ತಿದೆ. ಸದ್ಯ ದೇಶದಲ್ಲಿ ೯೦ ಜನ ಬಿಲಿಯನೇರ್‌ಗಳಿದ್ದಾರೆ ಎಂದು ಹೇಳಲಾಗಿದೆ. ದೇಶದ ಒಟ್ಟು ಸಂಪತ್ತಿನ ಅರ್ಧದಷ್ಟು ಭಾಗ ಪ್ರತಿಶತ ೧ರಷ್ಟು ಜನರ ಕೈಯಲ್ಲಿದೆ. ಇದಕ್ಕೆ ನಿದರ್ಶನವೆಂಬಂತೆ ಮುಖೇಶ್ ಅಂಬಾನಿ ನಾಲ್ಕು ಲಕ್ಷ ಚದರಡಿಯ, ಇಪ್ಪತ್ತೇಳು ಅಂತಸ್ತಿನ, ಕೇವಲ ೪೭೦೦ ಕೋಟಿ ಖರ್ಚಿನಲ್ಲಿ ಒಂದು ಮನೆ ಕಟ್ಟಿಸಿದ್ದಾನೆ. ಮೋದಿಯವರು ವಿದೇಶ ಪ್ರವಾಸಕ್ಕೆ ಹೋಗುವಾಗಲೆಲ್ಲ ಈ ಅಂಬಾನಿ, ಅದಾನಿಗಳನ್ನು ಕರೆದುಕೊಂಡು ಹೋಗಿ ಅಲ್ಲಿ ಅವರಿಗೆ ಉದ್ಯೋಗ ಕೊಡಿಸುವ ಉಪಕಾರ ಮಾಡುತ್ತಾರೆ. ಮೋದಿಯವರ ಮನದ ಮಾತಿಗೆ ಅಂಬಾನಿ, ಅದಾನಿಯಂತ ಈ ದೇಶದ ಬಡ ಬಿಲಿಯನೇರ್‌ಗಳು ಹಿನ್ನೆಲೆ ಸಂಗೀತ ನುಡಿಸುತ್ತಾರೆ. ಆದರೆ ಮೋದಿಯವರು ನೆನಪಿಡ ಬೇಕಾದ ವಿಷಯವೆಂದರೆ ಒಂದು ಉದ್ಯೋಗಕ್ಕಾಗಿ ಸಾವಿರಾರು ಜನ ಕಿತ್ತಾಡುವ ಈ ದೇಶದಲ್ಲಿ, ಅದೇ ಜನ ಮುಂದೊಂದು ದಿನ ಅಂಬಾನಿಯ ೬೦೦ ಕೊಠಡಿಗಳ ಮನೆಯನ್ನು ವಶಪಡಿಸಿಕೊಳ್ಳುವ ಹೋರಾಟ ನಡೆಸುತ್ತಾರೆ ಎಂಬುದು. ಈ ಸತ್ಯವನ್ನು ಮೋದಿಯವರು ಮನದ ಮಾತಿನಿಂದ ದೂರವಿಟ್ಟಷ್ಟೂ, ಈ ದೇಶದ ಪಾರ್ಲಿಮೆಂಟ್‌ಅನ್ನು ಬಡಜನ ವಶಪಡಿಸಿಕೊಳ್ಳುವ ಕಾಲ ಹತ್ತಿರವಾಗುತ್ತದೆ.

ಸಿದ್ದನಗೌಡ ಪಾಟೀಲ

## ವಿಶ್ವಸಂಸ್ಥೆಗೆ ಎಪ್ಪತ್ತು ವರ್ಷ – ಸುಧಾರಣೆ ಅಗತ್ಯ

**ಎ**ರಡನೇ ಮಹಾಯುದ್ಧ ನಂತರ ಸ್ಥಾಪನೆಗೊಂಡ ವಿಶ್ವಸಂಸ್ಥೆಗೆ ಈಗ ಎಪ್ಪತ್ತು ವರ್ಷ ತುಂಬಿದೆ. ಯುದ್ಧ ನಿವಾರಣೆಗಾಗಿ, ಎಲ್ಲ ಬಗೆಯ ಅಂತರರಾಷ್ಟ್ರೀಯ ವಿವಾದಗಳನ್ನು ಸಂಧಾನದ ಮೂಲಕ ಬಗೆಹರಿಸಲು, ಜಗತ್ತಿನಲ್ಲಿ ಶಾಂತಿ ನೆಲೆಸುವಂತೆ ಮಾಡಲು ಹುಟ್ಟಿಕೊಂಡ ಈ ಸಂಸ್ಥೆ ಪ್ರಾರಂಭವಾದಾಗ ಸುಮಾರು ನಲವತ್ತೈದು ಸದಸ್ಯ ರಾಷ್ಟ್ರಗಳನ್ನು ಹೊಂದಿತ್ತು. ಪೂರ್ಣ ಸದಸ್ಯತ್ವ ಇಲ್ಲದಿದ್ದರೂ ಈ ಜಾಗತಿಕ ಸಂಘಟನೆಯ ಸ್ಥಾಪನೆಯ ಸಂದರ್ಭದಲ್ಲಿ ಭಾರತ ಭಾಗವಹಿಸಿದ್ದುದು ವಿಶೇಷ. ಈಗ ಈ ಸಂಸ್ಥೆಗೆ ಸುಮಾರು ಇನ್ನೂರು ಆಗಿದೆ. ಹಿಂದೆ ಮಹಾಯುದ್ಧದಲ್ಲಿ ಮಿತ್ರ ರಾಷ್ಟ್ರಗಳಾಗಿ ಭಾಗವಹಿಸಿದ್ದ ಪ್ರಬಲ ರಾಷ್ಟ್ರಗಳು ಸಂಘಟನೆಯ ರೂಪುರೇಷೆ ತಯಾರಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿದ್ದುವು. ಎರಡು ಮಜಲುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಈ ಸಂಘಟನೆಯಲ್ಲಿ ನಿರ್ಣಯಾಧಿಕಾರ ಹೊಂದಿರುವುದು ವಿಶ್ವಸಂಸ್ಥೆಯ ಭದ್ರತಾಮಂಡಳಿ, ಇನ್ನೊಂದು ಎಲ್ಲ ಸದಸ್ಯ ರಾಷ್ಟ್ರಗಳ ಮಹಾಸಭೆ–ಜನರಲ್ ಅಸೆಂಬ್ಲಿ. ಈ ಮಹಾಸಭೆಯ ತೀರ್ಮಾನಗಳು ಶಿಫಾರಸಿನ ಮಟ್ಟದ್ದೇ ಹೊರತು, ಕಾರ್ಯಗತವಾಗಬೇಕೆಂದೇನಿಲ್ಲ. ಭದ್ರತಾ ಮಂಡಳಿಯದೇ ಕಾರುಬಾರು, ಮಹಾಸಭೆ ಸೇರುವುದು ವರ್ಷಕ್ಕೊಮ್ಮೆ ಮಾತ್ರ. ಭದ್ರತಾ ಮಂಡಳಿ ಮಾತ್ರ ಸಂದರ್ಭ ಒದಗಿದಾಗಲೆಲ್ಲ ಸಭೆ ಸೇರುತ್ತದೆ. ಎಲ್ಲ ತೀರ್ಮಾನಗಳೂ ಒಮ್ಮತದ್ದಾಗಿದ್ದರೆ ಮಾತ್ರ ಕಾರ್ಯಗತವಾಗುತ್ತಾರೆ ತೀರ್ಮಾನಗಳು ಇಲ್ಲದಿದ್ದರೆ ಇಲ್ಲ. ಸದಸ್ಯರಾಷ್ಟ್ರಗಳು – ಇವನ್ನು ಖಾಯಂ ಸದಸ್ಯರಾಷ್ಟ್ರಗಳು ಎಂದು ಕರೆಯುತ್ತಾರೆ – ರಷ್ಯ, ಅಮೆರಿಕ, ಬ್ರಿಟನ್, ಚೀಣ, ಫ್ರಾನ್ಸ್. ಈ ಐದು ರಾಷ್ಟ್ರಗಳ ಪೈಕಿ ಯಾವ ಒಂದು ರಾಷ್ಟ್ರ ಆಕ್ಷೇಪಿಸಿದರೂ ನಿರ್ಣಯ ಅಂಗೀಕಾರವಾಗದು. ಇದನ್ನು ‘ವೀಟೋ’ ಎನ್ನುತ್ತಾರೆ. ಭದ್ರತಾ ಮಂಡಳಿಯ ಪುನಾರಚನೆಗೆ, ವಿಶ್ವಸಂಸ್ಥೆಯ ಸುಧಾರಣೆಗೆ ಅಡ್ಡಿಯಾಗಿರುವುದು ಈ




**■ ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಎಚ್. ಎಸ್. ಗೋಪಾಲ ರಾವ್
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಜಿ. ನಾಗಕುಮಾರ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮುರಳಿಧರ್
ವಿಜಯಾ
ಎಲ್. ಹನುಮಂತಯ್ಯ

**■ ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

**■ ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ವೀಟೋ ಹಕ್ಕು. ಈ ಸೌಲಭ್ಯವನ್ನು ಬಿಟ್ಟುಕೊಡಲು ಯಾವ ದೇಶವೂ ತಯಾರಾಗಿಲ್ಲ. ಈ ವೀಟೋ ಹಕ್ಕು ಯಾವ ಬಗೆಯಲ್ಲಿ ಕೆಲಸ ಮಾಡಿದೆ ಎನ್ನುವುದು ತಿಳಿದಿರುವ ವಿಷಯ. ಭದ್ರತಾ ಮಂಡಳಿಯಲ್ಲಿ ಮತದಾನದ ಹಕ್ಕು ಇಲ್ಲ ನಾಲ್ಕು ರಾಷ್ಟ್ರಗಳು ಸರದಿಯ ಮೇಲೆ ಆಯ್ಕೆಯಾಗುತ್ತವೆ. ಇದು ಸಂಘಟನೆಯ ಪ್ರಧಾನ ರೂಪುರೇಷೆ.

ವಿಶ್ವಸಂಸ್ಥೆಯ ಇತಿಹಾಸದಲ್ಲಿ ಪ್ರಮುಖ ಸಾಧನೆ ಎಂದರೆ ನಿರ್ವಸಾಹತೀಕರಣ ಮತ್ತು ದಕ್ಷಿಣ ಆಫ್ರಿಕದಲ್ಲಿ ವರ್ಣಭೇದ ನೀತಿಯ ಅಂತ್ಯ. ಭೀಕರವಾದ ಮಹಾಯುದ್ಧವನ್ನು, ಅದರಲ್ಲೂ ಮಾರಕವಾದ, ವಿನಾಶಕಾರಿಯಾದ ನ್ಯೂಕ್ಲಿಯರ್ ಯುದ್ಧ ತಡೆಯುವುದರಲ್ಲಿ ಈ ಸಂಸ್ಥೆ ಇದುವರೆಗೆ ಯಶಸ್ವಿಯಾಗಿದೆ. ಆದರೆ ಸಣ್ಣಪುಟ್ಟ ಯುದ್ಧಗಳು ಮಾತ್ರ ನಿರಂತರವಾಗಿ ನಡೆಯುತ್ತಲೇ ಇವೆ. ಭದ್ರತಾ ಮಂಡಳಿಯ ಖಾಯಂ ಸದಸ್ಯ ರಾಷ್ಟ್ರಗಳು ಇಂಥ ಯುದ್ಧಗಳಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಭಾಗಿಯಾಗಿವೆ. ಅವು ಹೊಂದಿರುವ ವೀಟೋ ಹಕ್ಕು ಇದಕ್ಕೆ ಕಾರಣ. ಸದಸ್ಯರ ರಾಷ್ಟ್ರಗಳ ಬಹುಮತಕ್ಕೆ ಮನ್ನಣೆಯಿಲ್ಲದ ಏಕೈಕ ಸಂಸ್ಥೆ ಇದು. ಅದಕ್ಕೆ ಅನೇಕ ಉದಾಹರಣೆಗಳಿವೆ. ವಿಶ್ವಸಂಸ್ಥೆಯ ನಾನಾ ಏಜೆನ್ಸಿಗಳು ಸ್ತುತ್ಯಾರ್ಹ ಕಾರ್ಯ ನಿರ್ವಹಿಸಿವೆ. ನಿರಾಶ್ರಿತರ ಸಮಸ್ಯೆಯಾಗಿರಲಿ, ಶಿಕ್ಷಣವಾಗಿರಲಿ, ಆರೋಗ್ಯ ರಕ್ಷಣೆಯಾಗಿರಲಿ, ಹೀಗೆ ಹಲವು ವಿಷಯಗಳ ವಿಚಾರದಲ್ಲಿ ಈ ಏಜನ್ಸಿಗಳು ಗಮನಾರ್ಹವಾದ ಸೇವೆ ಸಲ್ಲಿಸಿವೆ.

ಕಳೆದ ಹಲವು ವರ್ಷಗಳಿಂದ ಈ ಮಹಾಸಂಸ್ಥೆಯ ಸುಧಾರಣೆಗಾಗಿ ಒತ್ತಾಯ ಇದೆ. ಭದ್ರತಾ ಮಂಡಳಿಯನ್ನು ಹೆಚ್ಚು ಪ್ರಜಾಪ್ರಭುತ್ವಗೊಳಿಸಬೇಕೆಂಬ ಬೇಡಿಕೆ ಇದೆ. ಮುಖ್ಯವಾಗಿ ಭದ್ರತಾ ಮಂಡಳಿಯ ಖಾಯಂ ಸದಸ್ಯ ರಾಷ್ಟ್ರಗಳ ಸಂಖ್ಯೆಯನ್ನು ೯ಕ್ಕೆ ಹೆಚ್ಚಿಸಬೇಕೆಂಬುದು ಮತ್ತು ಬಹುಮತಕ್ಕೆ ಪ್ರಾಧಾನ್ಯತೆ ಇರಬೇಕು ಎನ್ನುವುದು ಸದಸ್ಯ ರಾಷ್ಟ್ರಗಳ ಅಭಿಮತ. ಎಪ್ಪತ್ತು ವರ್ಷಗಳ ಹಿಂದೆ ಇದ್ದ ಸಂದರ್ಭದಲ್ಲಿ ಜಾರಿಗೆ ತಂದ ವೀಟೋ ಹಕ್ಕು ಈಗ ಪ್ರಸ್ತುತವಲ್ಲ. ಆದರೆ ಇದುವರೆಗೆ ಆ ಹಕ್ಕನ್ನು ಅನುಭವಿಸುತ್ತಿರುವ ರಾಷ್ಟ್ರಗಳು ಬಿಟ್ಟುಕೊಡಲು ತಯಾರಾಗಿಲ್ಲ. ಸಮಸ್ಯೆ ಕಗ್ಗಂಟಾಗಿರುವುದು ಇಲ್ಲೆ. ಭಾರತ, ಜಪಾನ್, ಜರ್ಮನಿ ಮತ್ತು ಬ್ರೆಜಿಲ್ ಈ ನಾಲ್ಕು ರಾಷ್ಟ್ರಗಳು ವಿಶ್ವಸಂಸ್ಥೆಯ ಸುಧಾರಣೆಗಳ ವಿಚಾರದಲ್ಲಿ ಪ್ರಧಾನ ಪಾತ್ರಧಾರಿಗಳಾಗಿವೆ. ಹಾಗೆಯೇ ಈ ರಾಷ್ಟ್ರಗಳ ಭದ್ರತಾ ಮಂಡಳಿಯ ಖಾಯಂ ರಾಷ್ಟ್ರಗಳ ಆಕಾಂಕ್ಷಿಗಳೂ ಕೂಡ. ತಮ್ಮ ಪ್ರಯತ್ನದಲ್ಲಿ ಈ ರಾಷ್ಟ್ರಗಳು ಯಶಸ್ವಿಐಆಗಲಿ ಎಂದು ಹಾರೈಸೋಣ. ಈಚೆಗೆ ವಿಶ್ವಸಂಸ್ಥೆಯ ಮಹಾಸಭೆಯ ಸುಧಾರಣೆಯ ಚೌಕಟ್ಟನ್ನು ರೂಪಿಸಿ ನಿರ್ಣಯ ಅಂಗೀಕರಿಸಿದೆ. ಅದು ಸಕಾಲಿಕವೂ ಆಗಿದೆ. ಸಂಸ್ಥೆ ಪ್ರಾರಂಭವಾದಾಗಿನ ಪರಿಸ್ಥಿತಿಗೂ ಇಂದಿನ ಸ್ಥಿತಿಗೂ ತುಂಬಾ ವ್ಯತ್ಯಾಸವಿದೆ. ಸದಸ್ಯ ರಾಷ್ಟ್ರಗಳ ಸಂಖ್ಯೆ ಹೆಚ್ಚಿರುವುದಷ್ಟೇ ಅಲ್ಲದೆ ಮಹಾಯುದ್ಧಾನಂತರ ಸ್ವತಂತ್ರಗೊಂಡ ದೇಶಗಳು ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಪ್ರಾಮುಖ್ಯವಾದ ಪಾತ್ರ ವಹಿಸಿವೆ. ಶಾಂತಿಪಾಲನೆಗೆ ಸಾಕಷ್ಟು ಕಾಣಿಕೆ ಸಲ್ಲಿಸಿವೆ. ಈ ರಾಷ್ಟ್ರಗಳಿಗೆ ನ್ಯಾಯವಾಗಿ ಸಲ್ಲಬೇಕಾದ ಸ್ಥಾನ ಇಂದು ಅತ್ಯಗತ್ಯ. ಪ್ರಾತಿನಿಧ್ಯವಿಲ್ಲದೆ ಸ್ಥಾಪಕ ಖಾಯಂ ಸದಸ್ಯ ರಾಷ್ಟ್ರಗಳು ಮಾತ್ರ ಜಗತ್ತಿನ ಭವಿಷ್ಯ ನಿರ್ಧರಿಸುವುದು ಸರಿಯಾಗದು ಇಂದಿನ ಪರಿಸ್ಥಿತಿಯಲ್ಲಿ. ರಷ್ಯ, ಚೀಣ ಮತ್ತು ಅಮೆರಿಕ ವಿಶ್ವಸಂಸ್ಥೆಯ ಅಂಗರಚನೆಯಲ್ಲಿ ಯಾವುದೇ ಸುಧಾರಣೆಗಳಿಗೂ ವಿರೋಧ ವ್ಯಕ್ತಪಡಿಸುತ್ತಿವೆ. ಬಾಯಿಮಾತಿನಲ್ಲಿ ಭಾರತದ ಪ್ರಾತಿನಿಧ್ಯಕ್ಕೆ ಬೆಂಬಲ ಸೂಚಿಸುತ್ತಿದ್ದರೂ ಈ ಪ್ರಮುಖ ರಾಷ್ಟ್ರಗಳು ತಮ್ಮ ವೀಟೋ ಹಕ್ಕು ಬಿಟ್ಟುಕೊಡಲು ತಯಾರಾಗಿಲ್ಲ. ಹಾಗಾಗಿ ವಿಶ್ವಸಂಸ್ಥೆಯ ಸುಧಾರಣೆ ಸ್ಥಗಿತಗೊಂಡಿದೆ. ಸಂಸ್ಥೆಯನ್ನು ಪ್ರಜಾಪ್ರಭುತ್ವಗೊಳಿಸಲು, ಪರಿಸ್ಥಿತಿಗೆ ತಕ್ಕಹಾಗೆ ಸುಧಾರಣೆಗಳನ್ನು ಜಾರಿಗೆ ತರಲು ಪ್ರಪಂಚದ ಎಲ್ಲ ದೇಶಗಳು ಜನರೂ ಒತ್ತಾಯ ತರಬೇಕಿದೆ.

*(ಈ ತಿಂಗಳು : ೩ನೇ ಪುಟದಿಂದ)*

ದೇಶದಲ್ಲಿನ ಒಂದು ದುರಂತ. ಈವರೆಗಿನ ತನಿಖೆಯ ಪ್ರಕಾರ ಕಲಬುರ್ಗಿಯವರ ವೈಯ್ಯಕ್ತಿಕ ಆಸ್ತಿ, ಇತ್ಯಾದಿ ಕಾರಣಗಳಿಂದಾಗಿ ಅವರು ಕೊಲ್ಲಲ್ಪಟ್ಟಿಲ್ಲವೆಂಬುದು ಸ್ಥಿರವಾಗಿದೆಯೆಂದು ಪೊಲೀಸರು ಹೇಳಿದ್ದಾರೆ. ಮತೀಯ ಮತ್ತು ಮತೀಯ ಕಾರಣಗಳು ಕೆಲಸ ಮಾಡಿರುವ ಸಾಧ್ಯತೆ ಇದೆಯೆಂದು ಹೇಳಲಾಗಿದೆ. ಅವರೆಡು ಅಲ್ಲದೆ, ಬೇರೇನು ಕಾರಣ ಇದ್ದಿತೆಂಬುದನ್ನು ಪೊಲೀಸರು ಶೀಘ್ರವಾಗಿ ಪತ್ತೆ ಹಚ್ಚಬೇಕೆಂದು ಆಗ್ರಹಿಸಲಾಗಿದೆ. ವೈಚಾರಿಕ–ಸೈದ್ಧಾಂತಿಕ ನಿಲುವುಗಳಿಗೆ ಬದ್ಧರಾಗಿದ್ದ ಮಾನ್ಯ ಕಲಬುರ್ಗಿಯವರ ಕೊಲೆಯನ್ನು ತೀವ್ರವಾಗಿ ಖಂಡಿಸುತ್ತಾ 'ಹೊಸತು' ಅವರಿಗೆ ವಿನಮ್ರ ನಮನಗಳನ್ನು ಸಲ್ಲಿಸುತ್ತದೆ. ಅವರ ಅಚಲ ನಿಷ್ಠೆಯನ್ನು ಶ್ಲಾಘಿಸುತ್ತದೆ, ಮತ್ತು ವೈಚಾರಿಕ ಪರಂಪರೆಗೆ ತನ್ನ ಅಲ್ಪಕಾಣಿಕೆಯನ್ನು ಸಲ್ಲಿಸುವ ಕೆಲಸವನ್ನು ಎಂದಿನಂತೆ ಮುಂದುವರಿಸುತ್ತದೆ. ಮಾನ್ಯ ಕಲಬುರ್ಗಿಯವರ ಸಂಶೋಧನಾ ಮಾರ್ಗ ಮತ್ತು ಗಟ್ಟಿಯಾದ ನಿಷ್ಠೆ ಅನುಕರಣೀಯವೆಂಬುದನ್ನು ಋಜುಮಾರ್ಗದಲ್ಲಿ ನಡೆಯುವವರೆಲ್ಲಾ ಅಂಗೀಕರಿಸುತ್ತಾರೆ. ಅವರ ನಿಲುವನ್ನು ಪ್ರಶ್ನಿಸುತ್ತಿದ್ದವರು ಅವರಿಗೆ ಬಹಳ ಆತ್ಮೀಯವಾಗಿಯೂ ಇರುತ್ತಿದ್ದರೆಂಬುದು ಪ್ರೊಫೆಸರ್ ಕಲಬುರ್ಗಿಯವರ ವ್ಯಕ್ತಿತ್ವದ ದ್ಯೋತಕ. ಅವರ ನಿಧನದ ನಂತರ ಪ್ರಕಟವಾದ ಕೆಲವು ಬರಹಗಳಲ್ಲಿ "ಎಲ್ಲಾ ಸರಿ, ಆದರೆ ಅವರ ಚಿಂತನೆಯಲ್ಲಿ ಏನೋ ಊನವಿತ್ತು" ಎಂಬರ್ಥದ ಮಾತುಗಳು ಬಂದಿವೆ. ಬರೆದಿರುವವರ ಎಚ್ಚರದ ಹೆಜ್ಜೆ ಅದಿರಬಹುದು. ವಾಸ್ತವದಲ್ಲಿ, ಮಾನ್ಯ ಕಲಬುರ್ಗಿಯವರು ತಮ್ಮ ಸಂಶೋಧನೆಗಳ ಫಲವಾಗಿ ತಳೆದ ತೀರ್ಮಾನಗಳು ಬೌದ್ಧಿಕವಲಯದ ಶ್ರೀಮಂತ ಸ್ವತ್ತು. ವಿನಾಕಾರಣ "ಅದರಿಂದ ನನ್ನ ಮನಸ್ಸಿಗೆ ನೋವುಂಟಾಗುತ್ತದೆ" ಎಂದು ಹೇಳುವ ಮಂದಿ ಅನುಭವಿಸುವ ನೋವಿನ ಸ್ವರೂಪವನ್ನು ಗುರುತಿಸಬೇಕು. ಅದು ಬೌದ್ಧಿಕ ಕ್ಷೇತ್ರದ ನೋವಲ್ಲ, ಇವರನ್ನು ಎದುರಾಳಿಯಾಗಿ ಸ್ವೀಕರಿಸಿ ಅವರ ಸಮಾನರಾಗಿ ನಿಂತು ಚರ್ಚಿಸಲು ಸಾಮರ್ಥ್ಯವಿಲ್ಲವಲ್ಲಾ ಎಂಬ ನೋವು ಅದು. ತಮ್ಮ ಕುತ್ಸಿತ ಹಿತಾಸಕ್ತಿಗಳಿಗೆ ಧಕ್ಕೆ ಉಂಟುಮಾಡಬಹುದಾದ ಅಂಶಗಳನ್ನು ಕಲಬುರ್ಗಿಯವರು ಸಾಧಾರವಾಗಿ ಎತ್ತಿ ಹಿಡಿಯುತ್ತಾರೆಂಬುದು ಬೌದ್ಧಿಕವಾಗಿ ಪರಾಜಿತರಾದವರ ಸ್ವಾರ್ಥದ ನೋವಾಗಿ ಪ್ರಕಟವಾಯಿತು, ಅಷ್ಟೆ. ಸಿದ್ಧಾಂತಕ್ಕೆ ಪ್ರತಿಸಿದ್ಧಾಂತವನ್ನು ನಿರೂಪಿಸುವುದು ಭಾರತೀಯ ದಾರ್ಶನಿಕ ಪರಂಪರೆಯ ಪದ್ಧತಿ, ಆರೋಗ್ಯಕರ ಸಾಂಸ್ಕೃತಿಕ ಲೋಕದ ಪದ್ಧತಿ. ಆ ಪದ್ಧತಿಯನ್ನು ನಿರಾಕರಿಸುವವರ ಮೃಗೀಯ ಪದ್ಧತಿ ದೈಹಿಕ ಹಲ್ಲೆ ನಡೆಸುವುದು, ವಿವಿಧ ರೀತಿಗಳಲ್ಲಿ ಕಿರುಕುಳ ನೀಡುವುದು ಮತ್ತು ಬಾಡಿಗೆ ಹಂತಕರನ್ನು ನಿಯೋಜಿಸಿಕೊಳ್ಳುವುದು. ನಮ್ಮ ಸಮಕಾಲೀನ ಜೀವನದಲ್ಲಿ ಇದೊಂದು ಅನಿಷ್ಟ, ಅಂಧತ್ವದ ಪ್ರತೀಕ. ಅಂಧರು ಪುನರವಲೋಕನ ಮಾಡಿಕೊಳ್ಳುವುದು ಒಂದು ರೀತಿ ಅಸಾಧ್ಯವಾದ್ದು. ಆದರೆ ಬೌದ್ಧಿಕ–ಸಾಂಸ್ಕೃತಿಕ ಅಂಧತ್ವವನ್ನು ನಿವಾರಿಸಲು ಸಾಧ್ಯ ಎಂದು ಪ್ರಖರವಾಗಿ ನಂಬಿದ್ದ ಕಲಬುರ್ಗಿಯವರು ಎಂದೂ ಹತಾಶರಾಗಲಿಲ್ಲ, ಬಹುವಾಗಿ ನೊಂದುಕೊಳ್ಳಲಿಲ್ಲ. ಅದು ನಮ್ಮ ನಡತೆಗೆ ಮಾಪನ ಸಾಧನವಾಗುವಂಥದು. ವೀರಶೈವ ಧರ್ಮದ ಚಾರಿತ್ರಿಕ ಸಂದರ್ಭ ಮತ್ತು ಬಸವಣ್ಣನ ಕಾಲದ ವಚನ ಚಳುವಳಿ, ಇವುಗಳನ್ನು ಕುರಿತಂತೆ ಬರೆದು ಅನೇಕ ಮತಿಹೀನ ಮಠಾಧಿಪತಿಗಳ ಕೆಂಗಣ್ಣಿಗೆ ಗುರಿಯಾಗಿದ್ದವರು ಡಾ॥ ಕಲಬುರ್ಗಿ. ಔಪಚಾರಿಕವಾಗಿ ಕ್ಷಮೆ ಯಾಚಿಸುವಂತೆ ಅವರ ಮೇಲೆ ಒತ್ತಡ ಹೇರಿದ್ದುದು ಇತಿಹಾಸ. ಅದರಿಂದ ಬೌದ್ಧಿಕವಾಗಿ ತಮ್ಮ ನಿಲುವನ್ನೇನೂ ಅವರು ಬದಲಿಸಿಕೊಳ್ಳಲಿಲ್ಲ. ಆದರೆ ಜಡ್ಡು ಮನಸ್ಸುಗಳ ಕಪಿಮುಷ್ಟಿಯು ಅವರನ್ನು ಬೇಸರಕ್ಕೆ ದೂಡಿತು. ೨೦೧೪ರಲ್ಲಿ ಬೆಂಗಳೂರಿನ ಒಂದು ವಿಚಾರಗೋಷ್ಠಿಯಲ್ಲಿ ಡಾ॥ ಅನಂತಮೂರ್ತಿಯವರು ಬರೆದ ಆತ್ಮಕತೆಯಿಂದ ಒಂದು ಪ್ರಸಂಗವನ್ನು ಪ್ರಸ್ತಾಪಿಸಿ ಲೋಕಾಭಿರಾಮವಾಗಿ 'ನೀವೂ ಬೇಕಿದ್ದರೆ ಪ್ರಯತ್ನಿಸಿ ನೋಡಬಹುದು' ಎಂಬ ಮಾತನ್ನಾಡಿದ್ದರು. ಅದಕ್ಕೆ ಒಂದು ಬಣವು ಇನ್ನಿಲ್ಲದ ಅಬ್ಬರವನ್ನು ಎಬ್ಬಿಸಿ ರಕ್ತಪಿಪಾಸುಗಳಂತೆ ನಡೆದುಕೊಂಡಿದ್ದು ಅವರಿಗೆ ಘಾಸಿಯನ್ನುಂಟುಮಾಡಿತ್ತು. "ನಮ್ಮ ಮನಸ್ಸಿಗೆ ನೋವಾಗಿದೆ" ಎಂದು ೧೯ನೆಯ ಶತಮಾನದ ವಸಾಹತುಶಾಹಿಯು ನಮ್ಮ ದೇಶದಲ್ಲಿ ಜಾರಿಗೊಳಿಸಿದ್ದ ಒಂದು ಅವಿವೇಕಿ ಕಾನೂನಿನಡಿ ಹಲವರು ಅವರನ್ನು ಹುರಿದು ಮುಕ್ಕಲು ಮುಂದಾಗಿದ್ದರು. ಅವರಾಗಲಿ, ಮಾಧ್ಯಮಗಳಾಗಲಿ ಒಂದು ಕ್ಷಣವೂ ಯೋಚಿಸಲಿಲ್ಲ : "ಎಲಾ, ಇವರು ಸಾಹಿತ್ಯಾಭ್ಯಾಸಿಗಳು, ಸಾಹಿತ್ಯಿಕ ಭಾಷೆ ಅವರ

ಸಂವಹನ ವಿಧಾನ, ಹೇಳಿದ್ದೆಲ್ಲವನ್ನೂ ಅಕ್ಷರಶಃ ಅರ್ಥೈಸಿಕೊಳ್ಳುವುದು ಮೂರ್ಖತನ", ಎಂದು. "ನೀವೂ ಮಾಡಿನೋಡಬಹುದು" ಎಂಬುದಕ್ಕೂ "ನೀವೂ ಹಾಗೆ ಮಾಡಿ, ಅದು ಸರಿ" ಎಂದು ಹೇಳುವುದಕ್ಕೂ ವ್ಯತ್ಯಾಸವಿದೆ. ಪ್ರಾಥಮಿಕ ಸಾಹಿತ್ಯಾಭ್ಯಾಸಿಗೆ ಅದು ತಿಳಿಯಬೇಕು, ಆದರೆ ನಮ್ಮ ಕೆಲವು ಸ್ವಯಂಘೋಷಿತ "ಸಂಸ್ಕೃತಿ ರಕ್ಷಕ"ರಿಗೆ ಅದನ್ನು ತಿಳಿಯುವ ಸಹನೆ ಇರಲಿಲ್ಲ. ಇಂದು ಕಲಬುರ್ಗಿಯವರು ನಮ್ಮ ನಡುವೆ ಇಲ್ಲದಿರುವುದಕ್ಕೆ ಅಂದು ವಿಷಗಾಳಿಯಂತೆ ಹರಿದಾಡಿದ ಅತಾರ್ಕಿಕ ಅಭಿಪ್ರಾಯಗಳು ಸೃಷ್ಟಿಸಿದ ವಾತಾವರಣವೂ ಒಂದು ಕಾರಣವೋ ಏನೋ, ಈಗಿನ್ನೂ ತಿಳಿಯದು. ಸಂಯಮ ಮತ್ತು ಸಹನೆ ಎರಡೂ ಇಲ್ಲದ ಸಂಸ್ಕೃತಿಯನ್ನು "ಸಂಸ್ಕೃತಿ" ಎನ್ನಬೇಕೆ ಎಂಬ ಪ್ರಶ್ನೆಯನ್ನು ನಮ್ಮ ನಾಡು ಶಾಂತವಾಗಿ ಪರಾಮರ್ಶಿಸಿಕೊಳ್ಳಬೇಕು. ಸೆಪ್ಟೆಂಬರ್ ೧೫ರಂದು ವೈಚಾರಿಕ ನಿಷ್ಠೆಯುಳ್ಳವರು ಬೆಂಗಳೂರಿನಲ್ಲಿ ನಡೆಸಿದ ಒಂದು ಸಭೆಗೆ ಮೂರು ಕುಟುಂಬಗಳ ಪ್ರತಿನಿಧಿಗಳು ಬಂದಿದ್ದರು : ನರೇಂದ್ರ ದಾಭೋಲ್ಕರ್ ಅವರ ಮಗಳು ಮುಕ್ತಾ, ಗೋವಿಂದ ಪಾನ್ಸರೆಯವರ ಸೊಸೆ ಮೇಘಾ ಮತ್ತು ಕಲಬುರ್ಗಿಯವರ ಮಗ ಶ್ರೀವಿಜಯ. ಹತ್ಯೆಗೆ ಗುರಿಯಾದ ಮೂವರು ಪ್ರತಿಭಾವಂತ ಕ್ರಿಯಾಶೀಲರ ಪ್ರತಿನಿಧಿಗಳವರು. ರಾಜ್ಯದ ಕೆಲವು ವಿಚಾರವಂತರೊಡನೆ ಆ ಮೂವರೂ ರಾಜ್ಯದ ಮುಖ್ಯಮಂತ್ರಿ ಶ್ರೀ. ಸಿದ್ದರಾಮಯ್ಯನವರನ್ನು ಭೇಟಿಯಾಗಿ ಕಲಬುರ್ಗಿಯವರ ಹಂತಕರನ್ನೂ, ಹಂತಕರನ್ನು ಆಯೋಜಿಸಿಕೊಂಡವರನ್ನೂ ಶೀಘ್ರವಾಗಿ ಪತ್ತೆಹಚ್ಚಬೇಕೆಂದು ವಿನಂತಿಸಿಕೊಂಡರು. ಅಂತೆಯೇ, ಈ ಸಂದರ್ಭದಲ್ಲಿ ಮೌಢ್ಯಾಚರಣೆಗಳ ಪ್ರತಿಬಂಧಕವಾಗಿ ಶಾಸನವನ್ನು ಅಂಗೀಕರಿಸುವಂತೆ ಕ್ರಮ ಕೈಗೊಳ್ಳಬೇಕೆಂದೂ ಆಗ್ರಹಿಸಿದರು. ಇವೆರಡೂ ಇಂದು ತುರ್ತಾಗಿ ಮಾಡಬೇಕಾದ ಕೆಲಸಗಳೆಂದು 'ಹೊಸತು' ಭಾವಿಸುತ್ತದೆ.

✶ ✶ ✶

ಕರ್ನಾಟಕದ ಉಚ್ಚ ನ್ಯಾಯಾಲಯವು ಕರ್ನಾಟಕ ರಕ್ಷಣಾ ವೇದಿಕೆಯನ್ನು "ತರಾಟೆಗೆ ತೆಗೆದುಕೊಂಡಿದೆ" ಎಂದು ವರದಿಯಾಗಿದೆ. ವೇದಿಕೆಯು ಹದ್ದುಮೀರಿ ವರ್ತಿಸಿದೆಯೆಂಬುದು ನ್ಯಾಯಾಲಯದ ನಿಲುವು. ವೇದಿಕೆಯು ಎಸಗಿದ ಅಂತಹ ಅಕೃತ್ಯವೇನು? "ಗುರುಮಠಕಲ್ ನಿವಾಸಿ ಮೋಹನ ರೆಡ್ಡಿ ಎಂಬುವವರು ವಸತಿ ಪ್ರದೇಶಕ್ಕಾಗಿ ಮಂಜೂರಾಗಿದ್ದ ನಿವೇಶನದಲ್ಲಿ ವಾಣಿಜ್ಯ ಕಟ್ಟಡ ಕಟ್ಟಿದ್ದಾರೆ ಹಾಗೂ ನಿಗದಿತ ಜಾಗದಲ್ಲಿ ಸಾರ್ವಜನಿಕರು ಬಳಸುವ ರಸ್ತೆಯನ್ನೂ ಒತ್ತುವರಿ ಮಾಡಿಕೊಂಡಿದ್ದಾರೆ" ಎಂದು ವೇದಿಕೆಯ ಕಲಬುರ್ಗಿ ಘಟಕವು ಸಾರ್ವಜನಿಕ ಹಿತಾಸಕ್ತಿ ಅರ್ಜಿ ಸಲ್ಲಿಸಿದ್ದು. ಈ ರೀತಿಯ ಸಾರ್ವಜನಿಕ ಹಿತಾಸಕ್ತಿ ಅರ್ಜಿ ಸಲ್ಲಿಸುವುದು ತಪ್ಪೆಂದು ಒಪ್ಪಬೇಕೆ ಎಂಬುದು ಈಗ ನಮ್ಮ ಮುಂದಿರುವ ಪ್ರಶ್ನೆ. ಒತ್ತುವರಿಯಾಗಿದೆಯೇ, ಇಲ್ಲವೇ, ಎಂಬುದನ್ನು ತನಿಖೆ ಮಾಡದೆ ವೇದಿಕೆಗೆ ಛೀಮಾರಿ ಹಾಕುವುದು ಹೇಗೆ ನ್ಯಾಯಸಮ್ಮತ ? ನ್ಯಾಯಮೂರ್ತಿಗಳು ಹೇಳಿದರಂತೆ, "ನೀವೆಲ್ಲಾ ಕನ್ನಡ ಕಟ್ಟುವ ಕೆಲಸ ಮಾಡಬೇಕೇ ಹೊರತಾಗಿ ಈ ರೀತಿ ಯಾರೋ ಜಾಗ ಒತ್ತುವರಿ ಮಾಡಿದ್ದಾರೆ ಎಂದು ಕೋರ್ಟ್‌ಗೆ ಬರುವುದಲ್ಲ," ಎಂದು. "ಕನ್ನಡ ಕಟ್ಟುವುದು" ಎಂದರೆ, ಕನ್ನಡ ಜನರ ಸಾರ್ವಜನಿಕ ಆಸ್ತಿಯನ್ನು ಕಾಯ್ದುಕೊಳ್ಳುವ ಕರ್ತವ್ಯವೂ ಸೇರಿರುತ್ತದಲ್ಲವೇ? ಮಾನ್ಯ ಎಚ್. ಎಸ್. ದೊರೆಸ್ವಾಮಿ ಮತ್ತು ಶ್ರೀ. ಎ. ಟಿ. ರಾಮಸ್ವಾಮಿ ಮುಂತಾದವರು ಸಹ ಒತ್ತುವರಿಯನ್ನು ಪ್ರಶ್ನಿಸಿದ್ದಾರೆ. ಅದು ಅನುಚಿತವೆ ? "ಇಂತಹ ಪ್ರಕರಣಗಳಲ್ಲಿ ಮಧ್ಯ ಪ್ರವೇಶಿಸಿ ಅವುಗಳನ್ನು ವಿಚಾರಿಸುವ ಯಾವ ಕಾನೂನುಬದ್ಧ ಹಕ್ಕು ನಿಮಗಿದೆ" ಎಂದು ಪೀಠವು ಅರ್ಜಿದಾರರ ವಿರುದ್ಧ ಕೆಂಡಕಾರಿತೆಂದು ಸಹ ವರದಿಯಾಗಿದೆ. ಹಾಗಿದ್ದರೆ, "ಕಾನೂನುಬದ್ಧ ಹಕ್ಕು" ಇರುವುದು ಯಾರಿಗೆ ? ಸಾರ್ವಜನಿಕ ಆಸ್ತಿಯ ಕಬಳಿಕೆಯನ್ನು ನೋಡುತ್ತಾ ನಕ್ಷತ್ರ ಎಣಿಸುವುದು ಸಾರ್ವಜನಿಕರು ಮಾಡಬೇಕಾದ ಕೆಲಸವೇನು? ನ್ಯಾಯಾಲಯ ಹೇಳಿತಂತೆ, "ಒಂದು ವೇಳೆ ಪ್ರತಿವಾದಿ ಮೋಹನ ರೆಡ್ಡಿ ನಿಯಮ ಉಲ್ಲಂಘಿಸಿರುವುದು ಕಂಡುಬಂದಲ್ಲಿ ಪಟ್ಟಣ ಪಂಚಾಯ್ತಿ ಅಧಿಕಾರಿಯು ಕಾನೂನು ಪ್ರಕಾರ ಸೂಕ್ತಕ್ರಮ ಕೈಗೊಳ್ಳಬೇಕು" ಎಂದು. ಅದು ಸರಿ, ಆದರೆ ಅಧಿಕಾರಿ ತನ್ನ ಕರ್ತವ್ಯ ನಿರ್ವಹಿಸದಿದ್ದರೆ ? ನಿಯಮದ ಉಲ್ಲಂಘನೆಯಾಗಿದ್ದರೆ? ವೇದಿಕೆಯ ಸಾರ್ವಜನಿಕ ಜವಾಬ್ದಾರಿ ನಿಷ್ಠೆಯನ್ನು ಸ್ವಾಗತಿಸಬೇಕೇ ವಿನಾ ಅದನ್ನು ಮೂದಲಿಸಬಾರದು. ನಮ್ಮ ರಾಜ್ಯದಲ್ಲಿ "ಕನ್ನಡ ಕಟ್ಟುವ" ಕೆಲಸ ಮಾಡುತ್ತಿರುವ ಜನ ಮತ್ತು ಸಂಸ್ಥೆಗಳು ಕನ್ನಡ ಕಟ್ಟಲು ಕನ್ನಡ ಭೂಮಿಯ ಸಂರಕ್ಷಣೆಯನ್ನೂ ಮಾಡುವ ಕರ್ತವ್ಯ ನಮ್ಮದು ಎಂದು ಒಕ್ಕೊರಲಿನಿಂದ ಸಾರಿಹೇಳುವುದು ಯುಕ್ತವಾಗಿರುತ್ತದೆ. ಕೋರ್ಟಿನ ತೀರ್ಪು ಮತ್ತು ವೇದಿಕೆಯನ್ನು ಕುರಿತ ಟೀಕೆಯನ್ನು ಸಮರ್ಥಿಸಲಾಗದು.

✶ ✶ ✶

ಇತ್ತೀಚಿನ ಗಲಭೆಯೊಂದರ ಸಂದರ್ಭದಲ್ಲಿ ಗುಜರಾತಿನಲ್ಲಿ ಕೆಲವರು ಪೋಲೀಸರ ಗುಂಡಿಗೆ ಬಲಿಯಾದರು. ಹಾರ್ದಿಕ ಪಟೇಲ್ ಎಂಬ ಯುವಕನ ನೇತೃತ್ವದ "ಹೋರಾಟ"ದಲ್ಲಿ ಜರುಗಿದ ದುರಂತ ಅದು. ಮೀಸಲಾತಿಯನ್ನು ಕಿತ್ತುಹಾಕಲು ಮೀಸಲಾತಿ ಬೇಕೆಂದು ಒತ್ತಾಯ ಮಂಡಿಸುತ್ತಿರುವ ವಿಚಿತ್ರ ಪ್ರಸಂಗದಲ್ಲಿ ಈ ಸಾವು ಸಂಭವಿಸಿದೆ. ಮೌನಿ ಮೋದಿಯವರು ಬಾಯಿಬಿಟ್ಟು ಹೃದಯತುಂಬಿ ಒಂದು ಅತ್ಯಂತ ಸ್ವಾಗತಾರ್ಹ ಮಾತು ಹೇಳಿದರು : "ಗಾಂಧಿ – ಪಟೇಲರ ಈ ನಮ್ಮ (ಗುಜರಾತ್) ನಾಡಿನಲ್ಲಿ ಹಿಂಸೆಗೆ ಅವಕಾಶ ಕೊಡದು," ಎಂದು. ಅದ್ಭುತ ವಿವೇಚನೆಯ ಮಾತುಗಳಿವು. ಹದಿಮೂರು ವರ್ಷಗಳ ಹಿಂದೆಯೇ ಈ ತಿಳಿವಳಿಕೆ ಅವರಿಗೆ ಮೂಡಿದ್ದಿದ್ದರೆ ಗೋಧ್ರಾ ದುರಂತದ ನಂತರ ಇನ್ನೊಂದು ಭೀಕರ ದುರಂತವು ಸಂಭವಿಸುವುದನ್ನು ತಪ್ಪಿಸಬಹುದಿತ್ತು. ಗುಜರಾತ್ ಮಾತ್ರವೇ ಗಾಂಧಿ–ಪಟೇಲರ ನಾಡಲ್ಲ. ನಮ್ಮ ದೇಶದಲ್ಲೆಲ್ಲೂ ಹಿಂಸಾತ್ಮಕ ಘಟನೆಗಳು ಸಂಭವಿಸದಂತೆ ಪ್ರಧಾನಿಯವರು ನೋಡಿಕೊಳ್ಳಬೇಕು. ಲಷ್ಕರ್ ಎ ತೈಬಾ ಆಗಲಿ, ಅಸೀಮಾನಂದ ಆಗಲಿ, ಹಿಂಸೆಯನ್ನು ಪ್ರಚೋದಿಸಕೂಡದೆಂದು ಪ್ರಧಾನಿಯವರು ಮನಸಾ ಆಶಿಸಬೇಕು ಮತ್ತು ಕಾರ್ಯಪ್ರವೃತ್ತರಾಗಬೇಕು. ಜನತೆಯು ಅವರೊಂದಿಗೆ ಕೈಜೋಡಿಸುವುದು ಖಂಡಿತ.

✶ ✶ ✶

ಶಾಸಕಿ ತಾರಾ ಅನುರಾಧಾ ಅವರು ಪೊಲೀಸ್ ಮಹಿಳೆಯರಿಗೆ ಗೌರಿ ಬಾಗಿನ ಕೊಡಲು ಬೆಂಗಳೂರಿನ ಕಸ್ತೂರ್ ಬಾ ರಸ್ತೆಯ ಪೊಲೀಸ್ ಸ್ಟೇಷನ್‌ಗೆ ದಯಮಾಡಿಸಿದ್ದರು. ಪಾಪ, ಆ ಮಹಿಳೆಯರಿಗೆ ಗೌರಿ ಪೂಜೆಗೆ ರಜೆ ಇರುವುದಿಲ್ಲವಾದ್ದರಿಂದ ತಾರಾ ಅವರು ಯಾರದೋ ಪೂರ್ವ ನಿಯೋಜಿತ ಉದ್ದೇಶದ ಪ್ರಕಾರ ಪೊಲೀಸ್ ಸ್ಟೇಷನ್ನಿಗೆ ಹೋಗಿದ್ದರೆಂದು ತೋರುತ್ತದೆ. ಪೊಲೀಸ್ ಸ್ಟೇಷನ್ ಬದಲು ರೈಲ್ವೇ ಸ್ಟೇಷನ್ನಿಗೆ ಹೋಗಿದ್ದರೆ ಪೂಜೆಯಿಂದ ವಂಚಿತರಾದ ನೂರಾರು ಬೇರೆ ಮಹಿಳೆಯರನ್ನು ತಾರೆ ತಾರಾ ಅವರು ಕಾಣಬಹುದಿತ್ತು, ಬಾಗಿನ ನೀಡಬಹುದಿತ್ತು. ನಮ್ಮ ವೈಯ್ಯಕ್ತಿಕ ಆಚರಣೆಗಳನ್ನು ಪೊಲೀಸ್ ಸ್ಟೇಷನ್ನಿಗೆ ವಿಸ್ತರಿಸಿದರೆ ಬಹಳ ಪ್ರಶ್ನಾರ್ಹ ಸಂಗತಿಗಳು ಜರುಗಲಾರಂಭಿಸಬಹುದೆಂಬ ಎಚ್ಚರ ಅಗತ್ಯ. ಮುಂದಿನ ರಂಜಾನ್ ಸಂದರ್ಭದಲ್ಲಿ ಯಾರೋ ಅನ್ವರ್ ಮಹಾಶಯ ಬೇರೊಂದು ಪೊಲೀಸ್ ಸ್ಟೇಷನ್ನಿಗೆ ಹೋಗಿ ಅಲ್ಲಿ ಇಫ್ತರ್ ಎಂಬ ಸಂಜೆಯ ಊಟ ಏರ್ಪಡಿಸಿದರೆ ಏನು ಮಾಡುವುದು? ಮಾನ್ಯರಾದ ತಾರಾ ಅವರು ಮತ್ತು ಪೊಲೀಸ್ ಸ್ಟೇಷನ್ನಿನ ಅಧಿಕಾರಿಗಳು ಇದನ್ನು ವಿಚಾರ ಮಾಡಿದ್ದರೆ ಚೆನ್ನಾಗಿರುತ್ತಿತ್ತು. ಬಾಗಿನವನ್ನು ಅಂದೇ ಮತ್ತು ಅದೇ ಹೊತ್ತಿನಲ್ಲಿ ನೀಡಬೇಕೆಂಬ ಕಠಿಣ ನಿಯಮವೇನೂ ಇಲ್ಲ. ಸಂಜೆಗೆ ಪೊಲೀಸ್ ಮಹಿಳೆಯರ ಮನೆಗಳಿಗೆ ಹೋಗಿದ್ದರೆ ಬಾಗಿನದ ಮೌಲ್ಯ ಇನ್ನೂ ಹೆಚ್ಚುತ್ತಿತ್ತು. ಈಗಿನ ತಾರಾ ಬಾಗಿನವು ಬಳ್ಳಾರಿಯಲ್ಲಿ ಶ್ರೀಮತಿ. ಸುಷ್ಮಾ ಸ್ವರಾಜ್ ಅವರ ಲಕ್ಷ್ಮೀ ಪೂಜೆಯ ಬಾಗಿನಗಳನ್ನು ನೆನಪಿಸುತ್ತದೆ. ಅವರಿಗೆ ಬಾಗಿನ ನೀಡುತ್ತಿದ್ದವರ ಪತಿರಾಯ ಕಬ್ಬಿಣದ ಅದುರಿನ ರೆಡ್ಡಿ ಮಹಾಶಯರು ಜೈಲಿಗೆ ಹೋಗಿ ಬಂದರು. ತಾರಾ ಅವರು ರೆಡ್ಡಿಯವರ ಪತ್ನಿಯಂತೆ ತೆಲುಗನ್ನು ನಿರರ್ಗಳವಾಗಿ ಮಾತನಾಡಬಲ್ಲವರು. ಪೊಲೀಸ್ ಸ್ಟೇಷನ್ನಿಗೆ ಹೋಗಿ ಬಾಗಿನ ನೀಡದಿದ್ದರೂ ಶ್ರೀಗೌರಿಯು ಅವರಿಗೆ ಮಂಗಳವನ್ನು ಕರುಣಿಸುತ್ತಾಳೆ ಮತ್ತು ಕರುಣಿಸಲಿ.

✶ ✶ ✶

ಚದುರಂಗದಾಟದ ವಿಶ್ವವಿಖ್ಯಾತ ಪಟು ವಿಶ್ವನಾಥನ್ ಆನಂದ್ ಅವರು ಇತ್ತೀಚೆಗೆ ನಡೆದ ಅಂತರರಾಷ್ಟ್ರೀಯ ಪಂದ್ಯಗಳಲ್ಲಿ ಒಮ್ಮೆಯೂ ವಿಜಯ ಸಾಧಿಸದೆ ಏಳು ಆಟಗಳನ್ನು "ಡ್ರಾ" ಮಾಡಿಕೊಂಡು ಇನ್ನೊಂದು ರೀತಿಯ ದಾಖಲೆ ಸ್ಥಾಪಿಸಿಬಿಟ್ಟರು. ಚೆಸ್ ಮಾಸ್ಟರ್ ಆಗಿದ್ದವರು ಹೀಗೆ

"ಡ್ರಾಯಿಂಗ್ ಮಾಸ್ಟರ್" ಆಗಿಹೋದರಲ್ಲಾ ಎಂದು ಅವರ ಅಭಿಮಾನಿಗಳು ಪರಿತಪಿಸುತ್ತಿದ್ದಾರಂತೆ. ಅವರಲ್ಲೊಬ್ಬರು ಆನಂದ್ ಅವರಿಗೆ ಇಂಗ್ಲಿಷಿನಲ್ಲಿ ಹೇಳಿದರಂತೆ, "ಬೆಟರ್ ಡ್ರಾಸ್ ನೆಕ್ಸ್ಟ್ ಟೈಂ" ಎಂದು. ಓ.ಕೆ. ಎನ್ನೋಣ.

✶ ✶ ✶

ಜಾಣರಲ್ಲಿ ಅತಿಜಾಣ ನಮ್ಮ ದೇಶದ ಅರ್ಥ ಸಚಿವ ಅರುಣ್ ಜೇಟ್ಲಿ. ಅವರು ಸಂಶೋಧನೆಯನ್ನೂ ಮಾಡುತ್ತಾರೆಂದು ತಿಳಿದಿರಲಿಲ್ಲ. ಚೇಂಬರ್ ಆಫ್ ಕಾಮರ್ಸ್‌ಗೆ ಹೋಗಿ ಭಾಷಣ ಮಾಡಲು ನಿಂತರೆ ಅವರ ಹುರುಪಿಗೆ ಲಗಾಮೆಂಬುದೇ ಇರುವುದಿಲ್ಲ. ಇತ್ತೀಚೆಗೆ ದೆಹಲಿಯಲ್ಲಿ ಅಂಥದೊಂದು ಸಭೆಯಲ್ಲಿ ಮುದ್ದುಕೃಷ್ಣನಂತೆ ಅವರು ಪ್ರವಚನ ನೀಡಿದರು. ಅದರ ಒಂದು ಭಾಗ ಇದು : "ನೋಡಿ, ಏರೋಪ್ಲೇನ್‌ಗಳಿವೆಯಲ್ಲಾ ಅವು ನಾಗರಿಕ ಸಂಚಾರಕ್ಕೆ ಸಹಾಯಕವಾಗಿವೆ. ರೈಲುಗಳೂ ಅಷ್ಟೇ ಸಹಾಯಕವಾಗಿವೆ. ಆದರೆ ವ್ಯತ್ಯಾಸವೇನು ? ಏರೋಪ್ಲೇನುಗಳು ಖಾಸಗಿಯವರ ಕೈಯ್ಯಲ್ಲಿವೆ, ಆದ್ದರಿಂದ ಚೆನ್ನಾಗಿ ಕೆಲಸ ಮಾಡುತ್ತಿವೆ. ಅದೇ, ರೈಲುಗಳನ್ನು ನೋಡಿ, ಅವು ಸಾರ್ವಜನಿಕ ಒಡೆತನದಲ್ಲಿವೆ, ಅವು ಹೇಗೆ ಕೆಲಸ ಮಾಡುತ್ತಿವೆಯೆಂದು ಗೊತ್ತಲ್ಲ!" ಜೇಟ್ಲಿಯವರು ಸಾರ್ವಜನಿಕ ಸಂಪತ್ತನ್ನು ಈ ಕೂಡಲೇ ಖಾಸಗಿಯವರಿಗೆ ದಾನಮಾಡುವ ತರಾತುರಿಯಲ್ಲಿ ಇದ್ದಾರೆ. ಜನತೆ ಮತ್ತು ರೈಲ್ವೆ ನೌಕರರು ಕಟ್ಟೆಚ್ಚರದಿಂದಿರಬೇಕು. ಜೇಟ್ಲಿಯವರಿಗೆ ಹೇಳೋಣ, "ಸ್ವಾಮಿ ಖಾಸಗಿ ಪೋಷಕರೆ, ಏರೋಪ್ಲೇನುಗಳು ಒಂದು ಪುಟ್ಟ ವರ್ಗದವರ ಸೇವೆ ಮಾಡುತ್ತವೆ ಮತ್ತು ರೈಲುಗಳು ಅತಿದೊಡ್ಡ ವರ್ಗದ ಸೇವೆ ಮಾಡುತ್ತವೆ. ದೊಡ್ಡ ವರ್ಗದ ಸೌಲಭ್ಯಗಳನ್ನು ಸರ್ಕಾರವು ಉತ್ತಮಪಡಿಸುವ ಕರ್ತವ್ಯ ನಿಭಾಯಿಸಬೇಕು ಎಂಬುದನ್ನು ಅರಿಯಿರಿ. ಖಾಸಗಿಯ ಪ್ರೀತಿಯಿಂದ ಸಾರ್ವಜನಿಕ ಸಂಪತ್ತನ್ನು ಲಪಟಾಯಿಸಬೇಡಿ," ಎಂದು.

✶ ✶ ✶

ಡಾ॥ ಕಲಬುರ್ಗಿಯವರ ಹತ್ಯೆಯನ್ನು ಖಂಡಿಸುವ ಹಲವು ಸಭೆಗಳು ನಡೆದಿವೆ. ಬೆಂಗಳೂರು ಪುರಸಭೆಯೆದುರು ಅಂಥದೊಂದು ನಡೆದಾಗಿನ ಒಂದು ವ್ಯಂಗ್ಯವು ನಮಗೆ ಅವಲೋಕನ ಮಾಡಿಕೊಳ್ಳಲು ಗ್ರಾಸ ಒದಗಿಸಿದೆ. ಕಲಬುರ್ಗಿಯವರ ಹತ್ಯೆಯು ವೈಚಾರಿಕತೆ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲಿನ ಕ್ರೂರ ಹಲ್ಲೆ ಎಂದು ಹೇಳುತ್ತೇವೆ. ಅದು ಸರಿ, ಆದರೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಸ್ವತಃ ನಾವೇ ಎಷ್ಟರಮಟ್ಟಿಗೆ ಮಾನ್ಯ ಮಾಡುತ್ತೇವೆಂಬುದು ಕುತೂಹಲದ ವಿಷಯ. ಅಂದು ಭಾರತೀಯ ವಿಜ್ಞಾನ ಸಂಸ್ಥೆಯ ಹಲವು ವಿದ್ಯಾರ್ಥಿಗಳು ಮತ್ತು ಸಂಶೋಧಕರು ಸಭೆಯಲ್ಲಿ ಪಾಲ್ಗೊಂಡಿದ್ದರು. ಅಂತೆಯೇ 'ದುಡಿಯೋರ ಹೋರಾಟ' ಸಂಸ್ಥೆಯ ಶ್ರೀ. ಜಗದೀಶ್ ಅವರ ನೇತೃತ್ವದಲ್ಲಿ ಇನ್ನು ಹಲವರು ಉಪಸ್ಥಿತರಿದ್ದರು. ಅಂದು ಸಭೆಯನ್ನುದ್ದೇಶಿಸಿ ಮಾತನಾಡಿದವರಲ್ಲಿ ಹಿರಿಯ ವಿಜ್ಞಾನಿ ಪ್ರೊ॥ ಎಂ.ಆರ್.ಎನ್. ಮೂರ್ತಿ ಒಬ್ಬರು. ಅವರು ತಮ್ಮ ವಿಶ್ಲೇಷಣೆಗೆ ಪೂರಕವಾಗಿ ಸಮಾಜದ ಒಂದು ಬಣದವರಲ್ಲಿ ಅಪರಾಧಿಗಳ ಸಂಖ್ಯೆ ಹೆಚ್ಚಾಗಿರುವುದಕ್ಕೆ ಕಾರಣಗಳೇನೆಂದು ತಿಳಿಯಬೇಕೆಂಬ ಮಾತನ್ನಾಡುತ್ತಿದ್ದರು. ಅವರು ವಾದವನ್ನು ಪೂರ್ತಿಯಾಗಿ ಮಂಡಿಸುವ ಮೊದಲೇ 'ಅಭಿವ್ಯಕ್ತಿ ಸ್ವಾತಂತ್ರ್ಯ'ದ ರಕ್ಷಣೆಗೆ ಬದ್ಧರೆಂದು ಹೇಳಿಕೊಳ್ಳುವ ಕೆಲವು ಅವಿವೇಕಿಗಳು ಪ್ರೊ॥ ಮೂರ್ತಿಯವರ ಮಾತುಗಳಿಗೆ ಕಡಿವಾಣ ಹಾಕುವಂತೆ ದೊಡ್ಡ ಗುಸುಗುಸು ಆರಂಭಿಸಿಬಿಟ್ಟರು. ನಮ್ಮನ್ನುದ್ದೇಶಿಸಿ ಮಾತನಾಡುವವರ "ಅಭಿವ್ಯಕ್ತಿ ಸ್ವಾತಂತ್ರ್ಯ"ವನ್ನು ಮೊಟಕುಗೊಳಿಸುವ ನಾವು ಕಲಬುರ್ಗಿಯವರ ಅಭಿವ್ಯಕ್ತಿ ಸ್ವಾತಂತ್ರ್ಯಹರಣವಾಯಿತೆಂದು ಖೇದ ವ್ಯಕ್ತಪಡಿಸುತ್ತೇವೆ! ಅಂದರೆ, ನಮಗೀಗಾಗಲೇ ಏನು ಒಪ್ಪಿತವಾಗಿದೆಯೋ ಅದನ್ನು ಮಾತ್ರ ಕೇಳಲು ಬಯಸುತ್ತೇವೆ ಎಂದರ್ಥ. ಕಲಬುರ್ಗಿಯವರ ಹಂತಕರು ಇದೇ ಸೂತ್ರವನ್ನು ಇನ್ನೂ ಕಠಿಣವಾಗಿ ಪಾಲಿಸಿದ್ದಾರೆ. ಅವರಿಗೆ ಸಂವಾದವು ಅಸಾಧ್ಯವೆಂದು ತಿಳಿದಿದೆಯಾದ್ದರಿಂದ ಸಂವಾದದ ಬದಲು ಸಂಹಾರ ಆಯ್ಕೆಮಾಡಿಕೊಂಡಿದ್ದಾರೆ. ಅವರನ್ನು ಖಂಡಿಸುವವರು ಕನಿಷ್ಠವೆಂದರೆ ಸಂವಾದಕ್ಕೆ ಸಿದ್ಧರಿರಬೇಕು, ಸಹನೆಯನ್ನು ಪ್ರದರ್ಶಿಸಬೇಕು. ನಮ್ಮ ದೇಶದ ಬೌದ್ಧಿಕ ಶಿಸ್ತು ನಮಗಿನ್ನೂ ಇದನ್ನು ಸರಿಯಾಗಿ ಕಲಿಸಿಲ್ಲ. ಪ್ರೊಫೆಸರ್ ಕಲಬುರ್ಗಿಯವರಿಗೆ ಗೌರವ ತೋರಿಸುವಾಗ ಈ ಶಿಸ್ತನ್ನು ನಮ್ಮಲ್ಲಿ ಅಂತರ್ಗತಗೊಳಿಸಿಕೊಳ್ಳುವ ಅಗತ್ಯವಿದೆ.

✶ ✶ ✶

ಬಿಹಾರದಲ್ಲಿ ಶಾಸನಸಭೆಗೆ ಚುನಾವಣೆ. ಹಿಂದಿನ ಮೂರ್ಖತನವನ್ನು ಮೀರಿಸುವಂತೆ ಈಗ ಐದು ಹಂತಗಳಲ್ಲಿ ಮತದಾನ. ಇನ್ನು ಕೆಲವು ವರ್ಷಗಳ ನಂತರ ಇಡೀ ವರ್ಷ ಮತದಾನಕ್ಕೆ ಮೀಸಲು, ಆಮೇಲೆ ಚುನಾವಣೆಗಳಿಲ್ಲದ ಸರ್ವಾಧಿಕಾರದ ಯುಗ! ಭಾರತೀಯ ಜನತಾ ಪಕ್ಷವನ್ನು ಸೋಲಿಸುವುದಾಗಿ ಘೋಷಿಸುವ ಎಲ್ಲ ಪಕ್ಷಗಳೂ ಭಾಜಪದ ಗೆಲುವಿಗೆ ಬದ್ಧರಾಗಿರುವಂತೆ ನಡೆದುಕೊಳ್ಳುತ್ತಿವೆ! ಭ್ರಷ್ಟಾಚಾರದ ಮೊಕದ್ದಮೆಗಳನ್ನು ನೆನಪಿಸಿದರೆ ಸಾಕು, ಮುಲಾಯಂ ಸಿಂಗ್ ಖಂಡಿತ ಮೋದಿಯವರ ಪಾದಗಳಿಗೆರಗುತ್ತಾರೆ. ಓವೈಸಿ ಎಂಬ ಮಂಗ ರಂಗಕ್ಕಿಳಿದು ಯಾವ ಕ್ಷೇತ್ರಗಳಲ್ಲೂ ಜಯಿಸದೆ, ಒಂದಷ್ಟು ಸಾವಿರ ಮತ ಗಳಿಸಿ ಭಾಜಪಕ್ಕೆ ವರದಾನ ನೀಡಹೊರಟಿದೆ. ಶರದ್ ಯಾದವ್ ಪಕ್ಷ ಅದಕ್ಕಿಂತಲೂ ಅತ್ತತ್ತ! ಆದರೂ "ಸ್ವತಂತ್ರವಾಗಿ" ಸ್ಪರ್ಧಿಸಿ ಭಾಜಪದಿಂದ ಒಂದಷ್ಟು ಕಾಣಿಕೆ ಸ್ವೀಕರಿಸಿ ಹೊಟ್ಟೆ ಉಬ್ಬರಿಸಿಕೊಳ್ಳುತ್ತದೆ. ಇಷ್ಟು ಸಾಲದೆಂಬಂತೆ ಎಡಪಕ್ಷಗಳು ಜಂಟಿಯಾಗಿ ಮತ್ತು ಸ್ವತಂತ್ರವಾಗಿ ಸ್ಪರ್ಧಿಸುವ ತೀರ್ಮಾನ ಕೈಗೊಂಡಿವೆ. ಎರಡಂಕಿಯ ಸಂಖ್ಯೆಯನ್ನು ಮುಟ್ಟುವ ಸಾಧ್ಯತೆಯನ್ನು ತಳ್ಳಿಹಾಕುವುದಷ್ಟೇ ಈ ತೀರ್ಮಾನದ ಪರಿಣಾಮ. ಸ್ಥಾನಗಳ ಹಂಚಿಕೆಯಲ್ಲಿ ಹೊಂದಾಣಿಕೆ ಮಾಡಿಕೊಳ್ಳುವುದರಲ್ಲಿ ಸೋತ ಪಕ್ಷಗಳು ನಿತೀಶ್–ಲಲ್ಲೂ ರಥವನ್ನು ಉರುಳಿಸುವುದರಲ್ಲಿ ಸಮರ್ಥವಾಗುತ್ತವೆ. "ಫ್ಯಾಸಿಸ್ಟ್ ಶಕ್ತಿಗಳ ವಿರುದ್ಧ ಐಕ್ಯ ಹೋರಾಟ" ನಡೆಸುವುದಾಗಿ ಹೇಳಿಕೊಳ್ಳುವ ಪಕ್ಷಗಳು ಈ ರೀತಿಯಲ್ಲಿ ಫ್ಯಾಸಿಸ್ಟರಿಗೆ ಅನೈತಿಕ ಬೆಂಬಲ ಕೊಡಲು ಮುಂದಾಗುತ್ತಿವೆ. ಎಲ್ಲ ಕ್ಷೇತ್ರಗಳಲ್ಲೂ ಗಳಿಸಿದ ಮತಗಳ ಪ್ರಮಾಣಕ್ಕನುಗುಣವಾಗಿ ಸ್ಥಾನಗಳ ವಿತರಣೆಯಾಗುವ ಪದ್ಧತಿ ಇಲ್ಲದಿರುವಾಗ ಅನುಸರಿಸಬಹುದಾದ ಕ್ರಮ ಇದಲ್ಲ. ವಿರೋಧಿಗಳಿಗೆ ಅನುಕೂಲ ಮಾಡಿಕೊಡುವ ವಿಚಿತ್ರ ಚುನಾವಣಾ ಮಾದರಿ ನಮ್ಮದು !!

✶ ✶ ✶

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಅಧಿಕಾರದ ಅಂಕುಶವನ್ನು ಕಾಂಗ್ರೆಸ್ ತನ್ನದಾಗಿಸಿಕೊಂಡಿದೆ. ಈ ಬೃಹದಾಕಾರದ ಭ್ರಷ್ಟಸಲಗವನ್ನು ಅದು ಹೇಗೆ ಹತೋಟಿಗೆ ತರುತ್ತದೋ ನೋಡೋಣ. ಅಲ್ಲಿ ಅಧಿಕಾರ ಗ್ರಹಣಕ್ಕಾಗಿ ಕಸರತ್ತು ನಡೆಯುತ್ತಿದ್ದರೆ ಇತ್ತ ಬೆಂಗಳೂರಿನ ರಸ್ತೆಯ ಮೂಲೆ ಮೂಲೆಗಳಲ್ಲಿ ಕಸದ ರಾಶಿ ಏರುತ್ತಿದ್ದುದನ್ನು ನಗರವಾಸಿಗಳು ಅನುಭವಿಸಿದ್ದಾರೆ. ಇದು ಈ ಊರಿಗೆ ತಗಲಿರುವ ಶಾಪವೋ ಏನೋ. ಭಾಜಪದವರು ಮೇಯ್ದುದ್ದಾಯಿತು. ಈಗ ಕಾಂಗ್ರೆಸ್ಸಿನ ಸರದಿ ಪ್ರಾರಂಭವಾಗಿದೆ. ಬಹುಪಾಲು ಆಸ್ತಿಯನ್ನು ಅಡಮಾನ ಮಾಡಿರುವ ಈ ನಗರಪಾಲಿಕೆಯ ಮುಂದಿನ ಗತಿ ಏನು ಹೇಳಲಾಗದು. ಒಂದು ಪವಾಡವೇ ಜರುಗಬೇಕು ಹಣಕಾಸಿನ ಪರಿಸ್ಥಿತಿಯ ಮಟ್ಟಿಗೆ. ಚುನಾವಣೆಯಲ್ಲಿ ಸೋತು ಮಣ್ಣು ಮುಕ್ಕಿದ ಕಾಂಗ್ರೆಸ್ ಅಧಿಕಾರಕ್ಕೆ ಬಂದಿದ್ದು ಕೂಡ ಒಂದು ಪವಾಡವೆ. ಅಪ್ಪ ಮಗನ ಪಕ್ಷ – ಅಮ್ಮ ಮಗನ ಪಕ್ಷ ಎರಡೂ ಒಂದಾದದ್ದೇ ಪವಾಡ. ಈ ವ್ಯವಹಾರದಲ್ಲಿ ಎಷ್ಟು ಕೋಟಿ ಕೈಬದಲಾಯಿತೋ ಅದು ಮಾತ್ರ ಚಿದಂಬರ ರಹಸ್ಯ. ಜೆಡಿಎಸ್ ನಾಯಕ ದೇವೇಗೌಡರು ಯಾವತ್ತೂ ವ್ಯವಹಾರ ಚತುರರು. ಅದೃಷ್ಟದಿಂದ ಅಲ್ಪಾವಧಿಗೆ ಪ್ರಧಾನ ಮಂತ್ರಿಯಾಗಿ ಅಧಿಕಾರದ ಸವಿ ಉಂಡವರು. ಬದ್ಧ ವೈರಿಗಳಾಗಿರುವ ಕಾಂಗ್ರೆಸ್ – ಜೆಡಿಎಸ್ ಎರಡೂ ಪಕ್ಷಗಳು ಒಂದಾಗಿ ಉಳಿದ ಚಿಲ್ಲರೆ ಸ್ವತಂತ್ರರನ್ನು ಸೇರಿಸಿಕೊಂಡು ನಗರಪಾಲಿಕೆಯ ಅಧಿಕಾರವನ್ನು ಹಂಚಿಕೊಂಡಿದ್ದಾರೆ. ಈ ಹಂಚಿಕೆ ಮೇಯರ್, ಉಪ ಮೇಯರ್ ಸ್ಥಾನಗಳಿಗಷ್ಟೇ ಅಲ್ಲ, ಸ್ಥಾಯಿ ಸಮಿತಿಗಳ ಅಧ್ಯಕ್ಷ ಸ್ಥಾನಗಳಿಗೂ ವಿಸ್ತರಿಸಿದೆ.

ಅಂತೂ ತೇಪೆ ಕೆಲಸ ಮುಗಿದಿದೆ. ಎಷ್ಟು ದಿನ ನಡೆಯುತ್ತದೋ ಈಗಲೇ ಹೇಳುವಂತಿಲ್ಲ. ಐದು ವರ್ಷ ಗ್ಯಾರಂಟಿ ಎಂದು ಎರಡೂ ಪಕ್ಷಗಳ ನಾಯಕರು ಕೊಚ್ಚಿಕೊಂಡಿದ್ದಾರೆ. ರಾಜ್ಯದಲ್ಲಿ ಕಾಂಗ್ರೆಸ್ ಸರಕಾರ ಅಸ್ತಿತ್ವದಲ್ಲಿರುವುದರಿಂದ ರಾಜಧಾನಿ ಬೆಂಗಳೂರಿನಲ್ಲಿ ಕಾಂಗ್ರೆಸ್ ಅಧಿಕಾರ ಹೊಂದಿದರೆ ಸಾಮರಸ್ಯ ಇರುತ್ತದೆ; ನಗರದ ಹಿತದೃಷ್ಟಿಯಿಂದ ಹೊಂದಾಣಿಕೆ ಮಾಡಿಕೊಂಡಿದ್ದೇವೆ ಎನ್ನುವುದು ಜೆಡಿಎಸ್ ನಾಯಕ ಕುಮಾರಸ್ವಾಮಿ

ಸಮರ್ಥನೆ. ಇಂಥವು ಏನೇ ವಾದಗಳಿದ್ದರೂ ಇದೊಂದು ಅನೈತಿಕ, ಅಪವಿತ್ರ ಮೈತ್ರಿ ಎನ್ನುವುದಂತೂ ನಿಜ. ಎರಡೂ ಪಕ್ಷಗಳ ಸಂದರ್ಭ ಸಾಧಕತನ ತಿಳಿದದ್ದೇ. ಬೆಂಗಳೂರಿನ ನಾಗರಿಕರಿಗೆ ಈ ಆಡಳಿತ ವ್ಯವಸ್ಥೆಯಿಂದ ಇನ್ನು ಏನು ಕಾದಿದೆಯೊ! ರಸ್ತೆಯ ಹೊಂಡಗಳು, ಕಸದ ರಾಶಿಗಳಿಂದ ಮುಕ್ತವಾದರೆ ಸಾಕು. ಸುದ್ದಿವಾಹಿನಿಯೊಂದು ಮೇಯರ್ ಚುನಾವಣೆ ಸಂದರ್ಭದಲ್ಲಿ ಭಾರಿ ಜಂಗೀ ಕುಸ್ತಿ ನಿರೀಕ್ಷಿಸಿತ್ತು. ಅಂಥದ್ದೇನೂ ಸಂಭವಿಸದಿದ್ದುದು ಪುಣ್ಯ. ಪ್ರಾಯಶಃ ಸುಮಾರು ಅರ್ಧದಷ್ಟು ಮಹಿಳಾ ಕಾರ್ಪೊರೇಟರುಗಳಿರುವುದು ಕಾರಣ ಇರಬಹುದು. ಶಾಸಕರು, ಎಂಪಿಗಳು ಮತ ಚಲಾಯಿಸಿದ್ದೇ ಕಾಂಗ್ರೆಸ್ ಅಧಿಕಾರ ಹಿಡಿಯುವುದಕ್ಕೆ ಆಧಾರ. ಈ ಪ್ರಶ್ನೆ ನ್ಯಾಯಾಲಯದ ಮುಂದಿದೆ. ತೀರ್ಪು ಬಂದಾಗ ನೋಡಿಕೊಂಡರಾಯಿತು. ಸದ್ಯಕ್ಕಂತೂ ಭಾಜಪವನ್ನು ದೂರಮಾಡಿದ್ದೊಂದೇ ಸಾಧನೆ. ಮುಂದೇನಾದೀತೋ ಯಾರು ಬಲ್ಲರು.

* * *

ಮೊನ್ನೆ ಎಂದೋ ಟೆಲಿವಿಷನ್ ಗುಂಡಿ ಒತ್ತಿ ಸುದ್ದಿವಾಹಿನಿಯೊಂದರತ್ತ ಕಣ್ಣು ಹಾಯಿಸಿದಾಗ ಅಚ್ಚರಿಯಾಯಿತು. ಸಾಮಾನ್ಯವಾಗಿ ರಾತ್ರೆ ಸುದ್ದಿ ಆಲಿಸುವುದು, ಅಬ್ಬರದ, ಅರ್ಥವಾಗದ, ಗೊಂದಲದ ಗೂಡಾದ ಚರ್ಚೆಗಳನ್ನು ಅನಿವಾರ್ಯವಾಗಿ ವೀಕ್ಷಿಸುವುದು ಅಭ್ಯಾಸವಾಗಿ ಹೋಗಿದೆ. ಅದೇ ಮುಖಗಳು, ನಿಗದಿಯಾದ ನಿಲುವುಗಳು ತಲೆಚಿಟ್ಟು ಹಿಡಿಸಿದರೂ ಮಧ್ಯೆ ಮಧ್ಯೆ ಸುದ್ದಿ ಬರುವುದರಿಂದ ಅಲ್ಪ ತೃಪ್ತಿ. ಮೊನ್ನೆ ಮಾತ್ರ ಪ್ರದರ್ಶನವಾದ ದೃಶ್ಯ ಭಾರಿ ಮಜಾ ಕೊಟ್ಟಿತು. ಕೊಲೆ, ಅತ್ಯಾಚಾರ, ರಾಜಕಾರಣಿಗಳ ಮುಖಗಳನ್ನು ನೋಡಿ ಬೇಸತ್ತಿರುವಾಗ ದೇವಮಾನವರುಗಳೂ ಕೈಕೈ ಮಿಲಾಯಿಸಿದ್ದು ಅಪರೂಪದ ದೃಶ್ಯವಾಗಿತ್ತು. ಆಸನಾರೂಢರಾಗಿ ವಿರಾಜಮಾನರಾಗಿದ್ದ ಮಧ್ಯ ವಯಸ್ಸಿನ ಇಬ್ಬರು ದೇವಮಾನವರು – ಇಂಥವರು ನಮ್ಮ ದೇಶದಲ್ಲಿ ಕಮ್ಮಿ ಏನಿಲ್ಲ; ಕಾವಿ ತೊಟ್ಟವರು, ಭಾರಿ ರೇಷ್ಮೆ ಸೀರೆ ಒಡವೆಗಳಿಂದ ವಿಜೃಂಭಿಸುವ ಮಾತೆಯರು ಕಾಸಿಗೊಂದು, ಕೊಸರಿಗೊಂದು ಇದ್ದಾರೆ – ಏಕಾಏಕಿಯಾಗಿ ಬಡಿದಾಡಿದರು. ಪರಸ್ಪರ ದೋಷಾರೋಪಗಳನ್ನು ಮಾಡಿದರು. ಒಬ್ಬ ಗಡ್ಡಧಾರಿ, ಕಾವಿಧಾರಿ ಸನ್ಯಾಸಿ, ಆಕೆ ಮಧ್ಯವಯಸ್ಸಿನ ಧಡೂತಿ ಮಹಿಳೆ. ಈ ಇಬ್ಬರ ಹೊಡೆದಾಟ, ಅದೂ ಟೆಲಿವಿಷನ್ ಸ್ಟುಡಿಯೋದಲ್ಲಿ, ದೇಶದಲ್ಲಿ ಬೆಳೆಯುತ್ತಿರುವ ಅಸಹನೆಯ ದ್ಯೋತಕವಾಗಿತ್ತು. ಆತ ಹಿಂದೂ ಮಹಾಸಭಾದ ಸಕ್ರಿಯ ಸದಸ್ಯ, ಆಕೆಯೂ ಅಂಥದೇ ಗುಂಪಿಗೆ ಸೇರಿದವರು.

ಪ್ರಾಯಶಃ ಮುಂದಿನ ದಿನಗಳಲ್ಲಿ ಇಂಥ ಪ್ರಕರಣಗಳನ್ನು ನಾವು ಸಾಕಷ್ಟು ನಿರೀಕ್ಷಿಸಬಹುದಾಗಿದೆ. ಸಂಘಪರಿವಾರದವರು ಈಗ ಹೆಚ್ಚು ಕ್ರಿಯಾಶೀಲರಾಗಿದ್ದಾರೆ. ಅವರ ಭಂಟರು ನಾನಾ ಮುಖವಾಡಗಳನ್ನು ಧರಿಸಿ ಅನೈತಿಕ ಪೊಲೀಸು ಗಿರಿಯಲ್ಲಿ ತೊಡಗಿದ್ದಾರೆ. ನಮ್ಮ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆ ಅದಕ್ಕೆ ಹೆಸರುವಾಸಿಯಾಗಿದೆ. ಹುಡುಗ ಹುಡುಗಿ, ಅಣ್ಣ ತಂಗಿ, ಅಕ್ಕ ತಮ್ಮ ಆಗಿದ್ದರೂ ಸುರಕ್ಷಿತವಾಗಿ ಓಡಾಡಲಾಗದಂಥ ಪರಿಸ್ಥಿತಿ ಉಂಟಾಗಿದೆ. ಆಡಳಿತದಲ್ಲಿರುವ ಮೋದಿ ಸರಕಾರ ಅನೈತಿಕ ಪೊಲೀಸು ಗೂಂಡಾಗಿರಿ, ಸಂಸ್ಕೃತಿಯ ಹೆಸರಿನಲ್ಲಿ ನಡೆಯುವ ದಾಂಧಲೆಗೆ ಒಂದು ಬಗೆಯ ರಕ್ಷಣೆ ನೀಡುತ್ತಿದೆ. ಇಂಥ ಪ್ರಕರಣಗಳನ್ನು ಗಮನಕ್ಕೆ ತೆಗೆದುಕೊಳ್ಳದೆ, ಅವುಗಳ ವಿರುದ್ಧ ಕ್ರಮ ತೆಗೆದುಕೊಳ್ಳದೆ ನಿರ್ಲಕ್ಷಿಸುತ್ತಿರುವುದು ಉತ್ತೇಜನ ನೀಡಿದಂತಾಗಿದೆ. ಯಾರು ಏನನ್ನು ಓದಬೇಕು, ಏನನ್ನು ನೋಡಬೇಕು ಎನ್ನುವುದನ್ನು ನಿರ್ಧರಿಸುವ ಉದ್ಧಟತನವನ್ನು ಭಜರಂಗದಳ, ವಿಶ್ವ ಹಿಂದೂ ಪರಿಷತ್ತು, ಶ್ರೀರಾಮ ಸೇನೆ ಮೊದಲಾದ ಸಂಘಪರಿವಾರದ ಸಂಘಟನೆಗಳು ನಿರ್ಧರಿಸಲು ತೊಡಗಿವೆ. ಅವಕಾಶ ದೊರೆತಾಗಲೆಲ್ಲ ಅಭಿವ್ಯಕ್ತಿ ಸ್ವಾತಂತ್ರ್ಯದ ಹರಣವಾಗುತ್ತಿದೆ. ಈಗ ಅದು ತಿನ್ನುವ ಆಹಾರಕ್ಕೂ ವಿಸ್ತರಿಸತೊಡಗಿದೆ. ಮಾಂಸ ಮಾರಾಟದ ನಿಷೇಧ ರಾಜಕೀಯ ಸ್ವರೂಪ ಪಡೆದುಕೊಂಡು ಧಾರ್ಮಿಕಾ ಚರಣೆಗಳಿಗೆ ವಿಸ್ತರಿಸುತ್ತಿದೆ. ಈಚೆಗೆ ಜೈನರ ಉತ್ಸವ 'ಪರ್ಯೂಷನ್' ದಿನದಂದು ಮಾಂಸದ ಮಾರಾಟ ಮಹಾರಾಷ್ಟ್ರದಲ್ಲಿ ನಿಷೇಧಿಸಲಾಗಿತ್ತು. ನಮ್ಮ ರಾಜ್ಯವೇನೂ ಈ ವಿಷಯದಲ್ಲಿ ಹಿಂದೆ ಬಿದ್ದಿಲ್ಲ. ಬೆಂಗಳೂರು ಮಹಾನಗರ ಪಾಲಿಕೆ ಗಣೇಶ ಚತುರ್ಥಿಯ ದಿನ ಮಾಂಸ ಮಾರಾಟ ನಿಷೇಧಿಸಿ ಸುತ್ತೋಲೆ ಹೊರಡಿಸಿತು. ಈ ಬಗ್ಗೆ ರಾಜ್ಯ ಸರಕಾರ ಭಿನ್ನ ಧೋರಣೆ ತಳೆದಿದೆ. ಈ ತೆರನಾದ ನಿಷೇಧಗಳು ಎಲ್ಲಿಗೆ ಕೊಂಡೊಯ್ಯುತ್ತದೋ ನೋಡಬೇಕು. ಸಂವಿಧಾನದತ್ತವಾದ ಹಕ್ಕುಗಳೆಲ್ಲ ಉಗ್ರವಾದಿಗಳ ಚರ್ಯೆಗಳಿಂದ ಅದೃಶ್ಯವಾಗುವ ಭೀತಿಯ ವಾತಾವರಣ ಸೃಷ್ಟಿಯಾಗುತ್ತಿದೆ. ವ್ಯಕ್ತಿಯ ಸ್ವಾತಂತ್ರ್ಯ ಎಲ್ಲವೂ ಧಾರ್ಮಿಕ, ರಾಜಕೀಯ ನಿಯಂತ್ರಣಕ್ಕೊಳಪಡುವ ಸಾಧ್ಯತೆಗಳು ಹೆಚ್ಚಾಗುತ್ತಿವೆ.

* * *

ಪುಣೆಯಲ್ಲಿರುವ ಫಿಲಂ ಇನ್‌ಸ್ಟಿಟ್ಯೂಟ್‌ನ ವಿದ್ಯಾರ್ಥಿಗಳು ನಡೆಸುತ್ತಿರುವ ಹೋರಾಟ ನೂರು ದಿನಗಳನ್ನು ದಾಟಿದೆ. ಭಾಜಪದ ಸದಸ್ಯನೆಂಬ ಏಕೈಕ ಕಾರಣಕ್ಕೆ ಎಫ್‌ಟಿಐಐಗೆ ಗಜೇಂದ್ರ ಚೌಹಾಣರನ್ನು ಅಧ್ಯಕ್ಷರಾಗಿ ನೇಮಕ ಮಾಡಿರುವ ವಿರುದ್ಧವಾಗಿ ವಿದ್ಯಾರ್ಥಿಗಳು ಚಳವಳಿ ನಡೆಸುತ್ತಿದ್ದಾರೆ. ಪೊಲೀಸರು ಇನ್‌ಸ್ಟಿಟ್ಯೂಟ್ ಆವರಣ ಪ್ರವೇಶಿಸಿ ವಿದ್ಯಾರ್ಥಿಗಳನ್ನು ಥಳಿಸಿದ್ದಾರೆ. ನಿರಶನ ಕೈಗೊಂಡಿದ್ದ ೧೨ ಮಂದಿ ವಿದ್ಯಾರ್ಥಿಗಳನ್ನು ಈಚೆಗೆ ಪೊಲೀಸರು ಬಂಧಿಸಿದ್ದಾರೆ. ದೆಹಲಿಯಲ್ಲಿ ಮಾಹಿತಿ ಮತ್ತು ಪ್ರಸಾರ ಸಚಿವಾಲಯದ ಎದುರು ನಿರಶನ ನಡೆಸುತ್ತಿರುವ ಎಫ್‌ಟಿಐಐನ ವಿದ್ಯಾರ್ಥಿಗಳಿಗೆ ಪುಣೆ, ದೆಹಲಿ, ಜವಹರಲಾಲ್ ನೆಹರೂ ಮತ್ತು ಜಾಮೀಯಮಿಲಿಯ ವಿಶ್ವವಿದ್ಯಾನಿಲಯಗಳ ವಿದ್ಯಾರ್ಥಿಗಳು ಬೆಂಬಲ ನೀಡಿದ್ದಾರೆ. ಚಿತ್ರರಂಗದ ಬಹುತೇಕ ಕಲಾವಿದರು, ನಿರ್ದೇಶಕರು, ತಂತ್ರಜ್ಞರು ವಿದ್ಯಾರ್ಥಿಗಳಿಗೆ ಬೆಂಬಲ ಸೂಚಿಸಿದ್ದಾರೆ. ಸರಕಾರ ಗಜೇಂದ್ರ ಚೌಹಾಣ್ ಅವರ ನೇಮಕಾತಿಯನ್ನು ರದ್ದುಗೊಳಿಸಬೇಕೆಂದು ಅವರು ಒತ್ತಾಯಿಸಿದ್ದಾರೆ. ಆದರೂ ಮೋದಿ ಸರಕಾರ ವಿದ್ಯಾರ್ಥಿಗಳ ಹೋರಾಟವನ್ನು ಕಡೆಗಣಿಸುತ್ತಿದೆ. ವಿದ್ಯಾರ್ಥಿಗಳ ಮೇಲೆ ದಬ್ಬಾಳಿಕೆ ನಡೆಸುತ್ತಿದೆ.

* * *

ಮತಾಂಧರು ಹಿಂದೂಗಳಾಗಲಿ ಮುಸಲ್ಮಾನರಾಗಲಿ ತಕ್ಕಡಿಗೆ ಹಾಕಿದರೆ ಒಂದೇ ಸಮ. ಎಲ್ಲ ಅವಕಾಶಗಳನ್ನು ಅವರು ಉಪಯೋಗಿಸಿಕೊಳ್ಳುತ್ತಾರೆ. ಹಲ್ಲೆ ನಡೆಸುತ್ತಾರೆ, ಬೆದರಿಕೆ ಹಾಕುತ್ತಾರೆ, ಫತ್ವಾ ಹೊರಡಿಸುತ್ತಾರೆ, ಕಗ್ಗೊಲೆಗೂ ಹೇಸುವುದಿಲ್ಲ. ಇವೆಲ್ಲ ನಮ್ಮ ಕಣ್ಮುಂದೆಯೇ ನಡೆಯುತ್ತದೆ. ಈಚೆಗೆ ವಿಶ್ವವಿಖ್ಯಾತ ಸಂಗೀತ ನಿರ್ದೇಶಕ ಎ. ಆರ್. ರೆಹಮಾನ್ ಮೇಲೆ ಮುಸ್ಲಿಮ್ ಮತೀಯವಾದಿಗಳು ಫತ್ವಾ ಹೊರಡಿಸಿ ಬೆದರಿಕೆ ಹಾಕಿದ್ದಾರೆ. ಪ್ರಾಫೆಟ್ ಮಹಮದ್ ಕುರಿತ ಇರಾನಿಯನ್ ಚಿತ್ರವೊಂದಕ್ಕೆ ರೆಹಮಾನ್ ನೀಡಿರುವ ಸಂಗೀತದ ಬಗ್ಗೆ ಅವರು ತಕರಾರು ಎತ್ತಿದ್ದಾರೆ. ಹಾಡಿನಲ್ಲಿ ಆಕ್ಷೇಪಾರ್ಹವಾದ ಅಂಶಗಳಿವೆ ಎನ್ನುವುದೇ ಆರೋಪ. ಪ್ರಾಫೆಟ್ ಮಹಮ್ಮದ್ ಪ್ರಸ್ತಾಪ ಯಾವುದರಲ್ಲೇ ಬಂದರೂ ಉಗ್ರರು ಪ್ರತಿಕ್ರಿಯಿಸುತ್ತಾರೆ. ಇದು ಬೆಳೆಯುತ್ತಿರುವ ಅಸಹನೆಯ ಸಂಕೇತ. ರೆಹಮಾನ್ ಮೇಲೆ ಫತ್ವಾಗೆ ಹಿಂದು ಮತಾಂಧರ ಪ್ರತಿಕ್ರಿಯೆ ಇನ್ನೊಂದು ಬಗೆಯಾಗಿದೆ. ಸಂಘಪರಿವಾರದ ಅಂಗಸಂಸ್ಥೆ ವಿಶ್ವ ಹಿಂದೂ ಪರಿಷತ್ ರೆಹಮಾನ್ ಅವರನ್ನು ಮತಾಂತರಗೊಳಿಸಿ ಹಿಂದೂ ಧರ್ಮಕ್ಕೆ ಸೇರಿಸಿಕೊಳ್ಳಲು ಪ್ರಯತ್ನಿಸುತ್ತಿದೆ. ಮರುಮತಾಂತರಕ್ಕೆ ಇದು ಸಕಾಲ ಎಂದು ಪರಿಷತ್ ರೆಹಮಾನ್‌ಗೆ ಆಹ್ವಾನ ನೀಡಿದೆ. 'ಘರ್‌ವಾಪಸಿ' ಘೋಷಣೆ ಯಾವ ರೀತಿಯಲ್ಲಿ ಕೆಲಸ ಮಾಡುತ್ತದೆ ಎನ್ನುವುದಕ್ಕೆ ಇದೊಂದು ಉದಾಹರಣೆ. ಇಸ್ಲಾಂ ಫತ್ವಾ ವಿರುದ್ಧ ಎಲ್ಲ ರಕ್ಷಣೆ ಒದಗಿಸಲು ಪರಿಷತ್ ತಯಾರಾಗಿದೆ. ಇನ್ನೇನು ರೆಹಮಾನ್ ಮನಸು ಮಾಡಬೇಕು ಅಷ್ಟೆ. ಯಾವ ಜಾತಿ ಬೇಕೆಂದು ಸ್ವತಃ ಅವರೇ ತೀರ್ಮಾನಿಸುತ್ತಾರೋ ಅಥವಾ ಪರಿಷತ್ತು ತೀರ್ಮಾನಿಸುತ್ತದೋ ಎಂಬ ವಿಷಯ ಬಂದಾಗ 'ವಾಪಸಿ' ತಾನೇ ವಾಪಸ್ಸಾಗಿಹೋಗುತ್ತದೆ!

ಹಾಗೆಯೇ ಇನ್ನೊಂದು ಸುದ್ದಿ ಕೂಡ ಮಾಧ್ಯಮಗಳಲ್ಲಿ ಪ್ರಸಾರಗೊಂಡಿದೆ. ಖ್ಯಾತ ತಮಿಳು ನಟ ರಜನೀಕಾಂತ್ – ಈತ ಹುಟ್ಟು ಕನ್ನಡಿಗನೂ ಹೌದು – ತಯಾರಾಗಲಿರುವ ಚಿತ್ರವೊಂದರಲ್ಲಿ ಟಿಪ್ಪು ಸುಲ್ತಾನ್ ಪಾತ್ರ ವಹಿಸಕೂಡದೆಂದು ತಮಿಳುನಾಡಿನ ಹಿಂದೂ ಜಾಗರಣ ಸಮಿತಿ 'ಫತ್ವಾ' ಹೊರಡಿಸಿದೆ. ಈಚಿನ ದಿನಗಳಲ್ಲಿ ಈ ಜಾಗರಣ ಸಮಿತಿ ಕ್ರಿಯಾಶೀಲವಾಗಿ ಅನೈತಿಕ ಪೊಲೀಸುಗಿರಿ ನಡೆಸುತ್ತಿದೆ ತಮಿಳುನಾಡಿನಲ್ಲಿ. ಇಂದು ಹೇಗಿದ್ದರೂ ಕಲಾವಿದರಿಗೆ, ಲೇಖಕರಿಗೆ ಇಂಥ ಮತೀಯವಾದಿಗಳ ಉಪಟಳ ತಪ್ಪಿದ್ದಲ್ಲ. ಮುಂದೆ ಬರೆಯಲು, ಅಭಿನಯಿಸಲು ಇವರ ಅಪ್ಪಣೆ ಪಡೆದುಕೊಳ್ಳಬೇಕಾದೀತೋ ಏನೋ.




## ಸರಳ 'ದಸರಾ' ಉತ್ಸವಕ್ಕೆ ಸುಸ್ವಾಗತ

ಸರ್ಕಾರ ಈ ವರ್ಷ ಮೈಸೂರು ದಸರಾ ಉತ್ಸವವನ್ನು ಸರಳವಾಗಿ ಆಚರಿಸಲು ತೀರ್ಮಾನಿಸಿದ್ದು ಸ್ವಾಗತಾರ್ಹ. ಹಿಂದೆ ಸಾಹಿತಿಗಳಿಂದ, ವಿದ್ವಾಂಸರಿಂದ, ಪ್ರಸಿದ್ಧ ವ್ಯಕ್ತಿಗಳಿಂದ ಉದ್ಘಾಟನೆ ಮಾಡುತ್ತಿದ್ದ ಪದ್ಧತಿಯನ್ನು ಬಿಟ್ಟು, ಸರ್ವಸಾಮಾನ್ಯ ಪ್ರಗತಿಪರ ರೈತರಿಬ್ಬರಿಂದ ಉದ್ಘಾಟನೆ ಮಾಡಲು ನಿರ್ಧರಿಸಿದ್ದು ಇನ್ನೂ ಅಭಿನಂದನೀಯ ನಿರ್ಣಯ.

ಹಿಂದೆ ಅರಮನೆಯಲ್ಲಿ ಅರಸರು ಅವರ ಪರಿವಾರದೊಡನೆ, ಪರಿಚಾರಕರೊಡನೆ ವೈಭವದಿಂದ ಆಚರಿಸುತ್ತಿದ್ದುದನ್ನು ಬಿಟ್ಟು ಪ್ರಜಾಸತ್ತೆಗಳಿಗನುಗುಣವಾಗಿ ಸರ್ವೇಸಾಮಾನ್ಯ ಬಹುಸಂಖ್ಯಾತ ರೈತರ ಪ್ರತಿನಿಧಿಗಳಿಂದ ಉದ್ಘಾಟಿಸುವುದು 'ದಸರಾ ಉತ್ಸವದ ಇತಿಹಾಸದಲ್ಲಿ ಮಹತ್ತರವಾದ ಕ್ರಾಂತಿಕಾರಿಕ ಹೆಜ್ಜೆ'. ಈ ನಿರ್ಣಯದಿಂದ ವ್ಯಕ್ತವಾಗುವುದೇನೆಂದರೆ ; ಇದು ಪ್ರಜೆಗಳ ಉತ್ಸವ, ದೇಶದ ಬೆನ್ನೆಲುಬಾದ ರೈತರ ಉತ್ಸವ. ಅವರೇ, ಅವರಿಗಾಗಿ, ಅವರಿಂದ – ಈ ಉತ್ಸವದ ನಾಯಕರು ಎಂಬುದು ಇದರ ಸಂಕೇತ.

ಈ ಉತ್ಸವ ಕೇವಲ ಮೈಸೂರು ಶಹರ, ಮೈಸೂರು ಜಿಲ್ಲೆ ಅಥವಾ ಅದರ ಸುತ್ತಮುತ್ತಲಿನ ಕೆಲವೇ ಪ್ರದೇಶಗಳಿಗೆ ಸೀಮಿತವಾದುದಲ್ಲ. ಇದು ಇಡೀ ಕರ್ನಾಟಕದ ಸಾಂಸ್ಕೃತಿಕ ಪರಂಪರೆ. ಈ ಉತ್ಸವದ ಉಗಮಸ್ಥಾನ ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪೆ. ಇಲ್ಲಿ ಇದುವರೆಗೆ ನಡೆಯುತ್ತಿದ್ದುದು, ಅಲ್ಲಿ ನಡೆಯುತ್ತಿದ್ದ ಉತ್ಸವದ ಮುಂದುವರೆದ ಸಂಪ್ರದಾಯವಾಗಿತ್ತು. ಈಗ ಸರಳವಾಗಿ ಆಚರಿಸುತ್ತಿರುವ ಈ ಉತ್ಸವ ಇಡೀ ರಾಜ್ಯದ ಜನತೆಯ ಉತ್ಸವ. ಈ ಭಾವನೆ ನಮ್ಮ ರಾಜ್ಯದ ಎಲ್ಲ ಜಿಲ್ಲೆಗಳಲ್ಲೂ ಹಬ್ಬಬೇಕು. ದಸರಾ ಉತ್ಸವಕ್ಕೆ ಬರುವ ದೇಶ–ವಿದೇಶ ಪ್ರೇಕ್ಷಕರಿಗೆ ನಮ್ಮ ರಾಜ್ಯದ ಇತಿಹಾಸ, ಸಂಸ್ಕೃತಿ... ಇತ್ಯಾದಿಗಳು ಮನವರಿಕೆಯಾಗಬೇಕು. ಅದರಿಂದ ಪ್ರವಾಸೋದ್ಯಮ ಅಭಿವೃದ್ಧಿಯಾಗಬೇಕು. ಅದಕ್ಕಾಗಿ ಒಂದೆರಡು ಸೂಚನೆಗಳು.

ಗಣರಾಜ್ಯೋತ್ಸವ ದಿನ ದೆಹಲಿಯಲ್ಲಿ ನಮ್ಮ ದೇಶದ ೨೯ ರಾಜ್ಯಗಳ ಸ್ತಬ್ಧಚಿತ್ರಗಳನ್ನು ಪ್ರದರ್ಶಿಸುವಂತೆ, ಈ ನಮ್ಮ ರೈತರ ದಸರಾ ಉತ್ಸವದಲ್ಲಿ, ನಮ್ಮ ರಾಜ್ಯದ ಎಲ್ಲ ಜಿಲ್ಲೆಗಳಿಂದಲೂ ಸ್ತಬ್ಧಚಿತ್ರಗಳನ್ನು ತಯಾರಿಸಿ, ವಿಜಯದಶಮಿಯ ಬನ್ನಿಮಂಟಪಕ್ಕೆ ಹೋಗುವ ಮೆರವಣಿಗೆಯಲ್ಲಿ ೩೦ ಜಿಲ್ಲೆಗಳ ಸ್ತಬ್ಧಚಿತ್ರಗಳ ಪ್ರದರ್ಶನ ಏರ್ಪಡಿಸುವುದು ಉತ್ತಮ. ಮೆರವಣಿಗೆಯ ಮೊದಲನೆಯ ಸ್ತಬ್ಧಚಿತ್ರದಲ್ಲಿ ಎರಡು ಹೋರಿಗಳು ನೇಗಿಲಿನ ನೊಗವನ್ನು ಹೊತ್ತು, ರೈತನೊಬ್ಬನು ನೇಗಿಲನು ಹಿಡಿದು ಉಳುವ ಸ್ತಬ್ಧಚಿತ್ರಗಳಿರಬೇಕು. ಅಲ್ಲಿ "ಉಳುವ ಯೋಗಿಯ ನೋಡಲ್ಲಿ" ಎಂಬ ದೊಡ್ಡಕ್ಷರದ ಫಲಕ ಹಾಕಬೇಕು.

೩೦ ಜಿಲ್ಲೆಗಳಿಂದ ೩೦ ಸ್ತಬ್ಧಚಿತ್ರಗಳ ವಾಹನಗಳನ್ನು ಆಯಾ ಜಿಲ್ಲೆಯವರೇ ಅಲ್ಲಿಯ ಕಲಾವಿದರಿಂದಲೇ ಸಿದ್ಧಪಡಿಸಿ, ದಿನಾಂಕ ೨೨–೧೦–೨೦೧೫ರಂದು ಮೈಸೂರಿಗೆ ತಲುಪುವಂತೆ ವ್ಯವಸ್ಥೆ ಮಾಡಬೇಕು. ಈ ಏರ್ಪಾಟನ್ನು ಮಾಡಲು ಪ್ರತಿಯೊಂದು ಜಿಲ್ಲೆಯಲ್ಲಿ 'ಜಿಲ್ಲಾ ದಸರಾ ಉತ್ಸವ ಸಮಿತಿ'ಯನ್ನು ರಚಿಸಬೇಕು. ಆ ಸಮಿತಿಯಲ್ಲಿ ಆ ಜಿಲ್ಲೆಯ ಉಸ್ತುವಾರಿ ಮಂತ್ರಿಗಳ ನೇತೃತ್ವದಲ್ಲಿ ಜಿಲ್ಲಾಧಿಕಾರಿಗಳ ಮೂಲಕ, ಆ ಜಿಲ್ಲೆಯ ಸಂಸದರೊಬ್ಬರು ಹಾಗೂ ಶಾಸಕರೊಬ್ಬರು ಸಲಹೆಗಾರರಾಗಿರಬೇಕು. ಇದು ಸ್ಥೂಲ ಅಭಿಪ್ರಾಯ. ಅದನ್ನು ಕಾರ್ಯರೂಪಕ್ಕೆ ತರುವಾಗ ಸನ್ನಿವೇಶಗಳಿಗೆ ತಕ್ಕಂತೆ ಮಾರ್ಪಾಟುಗಳನ್ನು ಮಾಡಿಕೊಳ್ಳಬಹುದು.

*ಬೆಂಗಳೂರು* **ಕೋ. ಚೆನ್ನಬಸಪ್ಪ**




## ಗ್ರೀಸಿನ ಕಮ್ಯುನಿಸ್ಟ್ ಪಕ್ಷದ ಮುನ್ನೋಟ

ಗ್ರೀಸಿನ ಇಂದಿನ ಪರಿಸ್ಥಿತಿ ಹೆಚ್ಚು ಹೆಚ್ಚು ಬಿಗಡಾಯಿಸುತ್ತಿದೆ ಮತ್ತು ದೇಶವು ಅನಾದರಕ್ಕೆ ತುತ್ತಾಗುತ್ತಿದೆ. ನವ ವಸಾಹತುಶಾಹಿ ಎಂಬುದಕ್ಕೆ ಇಂದಿನ ಗ್ರೀಸ್ ಪೂರ್ಣಾರ್ಥದಲ್ಲಿ ನಿದರ್ಶನವಾಗಿದೆ. ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯು ಗ್ರೀಸಿನಲ್ಲೇ ಕಚೇರಿ ತೆಗೆದು ನೇರವಾಗಿ ದೇಶದ ಆಡಳಿತವನ್ನು ನೋಡಿಕೊಳ್ಳುತ್ತದೆ, ನಿಗಾ ವಹಿಸುತ್ತದೆ ಮತ್ತು ನಿರ್ದೇಶಿಸುತ್ತದೆ. ದೇಶದಲ್ಲಿ ಸಾರ್ವತ್ರಿಕ ಮತದಾನದಿಂದ ದೊರೆತ ನಿರ್ದೇಶನವನ್ನು ಮೂಲೆಗುಂಪು ಮಾಡಿ ಯೂರೋಪಿನ ಒಕ್ಕೂಟದ ಆದೇಶವನ್ನು ಜಾರಿಗೊಳಿಸಲಾಗುತ್ತಿದೆ. ಭಾರತಕ್ಕೆ ಅಂತಹ ದೀನಸ್ಥಿತಿ ಪೂರ್ತಿಯಾಗಿ ಬಂದಿಲ್ಲ ಮತ್ತು ಬರುವುದಿಲ್ಲವೆಂದು ಆಶಿಸೋಣ.

ಗ್ರೀಸಿನ ಪ್ರಧಾನಿ ಅಲೆಕ್ಸಿಸ್ ತ್ಸಿಪ್ರಾಸ್ ಎಡಪಂಥೀಯ ಎನ್ನುತ್ತಾರೆ. ಆತ ಅಧಿಕಾರ ವಹಿಸಿಕೊಂಡಾಗ ಗ್ರೀಸಿನ ಕಮ್ಯುನಿಸ್ಟ್ ಪಕ್ಷವು ಸರ್ಕಾರದಲ್ಲಿ ಭಾಗಿಯಾಗಲು ತಿರಸ್ಕರಿಸಿತು. ಆ ಪಕ್ಷದ ಪಾರ್ಲಿಮೆಂಟ್ ಸದಸ್ಯರು ಇತ್ತೀಚೆಗೆ ತ್ಸಿಪ್ರಾಸ್ ಮಾಡಿಕೊಂಡ ಒಪ್ಪಂದವನ್ನು ತೀವ್ರವಾಗಿ ವಿರೋಧಿಸಿದ್ದಾರೆ. ಮೊದಲು ಆ ಪಕ್ಷವು ಸರ್ಕಾರದಲ್ಲಿ ಭಾಗಿಯಾಗಲು ಒಪ್ಪದಿದ್ದಾಗ 'ಇದೆಂತಹ ಕಮ್ಯುನಿಸ್ಟ್ ಪಕ್ಷ, ಎಡಪಕ್ಷದ ಸರ್ಕಾರದಲ್ಲಿ ಭಾಗಿಯಾಗಲು ಏನಿದಕ್ಕೆ ಅಡಚಣೆ' ಎಂಬ ಟೀಕೆ ಬಂದಿತ್ತು. ನಮ್ಮ ದೇಶದಲ್ಲೂ ಅಂತಹ ಟೀಕೆ ಕೇಳಿಬಂದಿತ್ತು. ಈಗ ಆ ಪಕ್ಷದ ಅಂದಿನ ತೀರ್ಮಾನ ಎಷ್ಟು ಸರಿಯಾದ್ದಾಗಿತ್ತೆಂದು ಗೊತ್ತಾಗಿದೆ. ತ್ಸಿಪ್ರಾಸ್‌ನ ಪಕ್ಷದ ಆರ್ಥಿಕ ನೀತಿ ಅಂದಿನಿಂದಲೇ ಪ್ರಶ್ನಾರ್ಹವಾಗಿತ್ತು. ಮೇಕ್ ಇನ್ ಇಂಡಿಯ ವಕ್ತಾರರು ಮತ್ತು ಅರುಣ ಜೇಟ್ಲಿ ಇದನ್ನು ನೆನಪಿನಲ್ಲಿಡಲಿ.

ತುಮಕೂರು **ಎಸ್. ಸುಧಾಕರ**

## ರೈತರಷ್ಟೇ ಏಕೆ ಆತ್ಮಹತ್ಯೆ ಮಾಡಿಕೊಳ್ಳಬೇಕು ?...

ಎಲ್ಲರಿಗೂ ಅನ್ನ ಕೊಡುವ ರೈತನ ಬದುಕು ಸಾಲದ ಬಾಧೆಗೋ, ಬರಗಾಲಕ್ಕೋ, ಅತಿವೃಷ್ಟಿಗೋ, ಅನಾವೃಷ್ಟಿಗೋ, ತನ್ನ ಉತ್ಪನ್ನಕ್ಕೆ ಸೂಕ್ತಬೆಲೆ ಸಿಗಲಿಲ್ಲವೆಂದೋ, ಕೀಟಬಾಧೆಗೋ ಬೆಳೆ ನಾಶವಾಯಿತು ಎಂದೋ... ಹೀಗೆ ನಾನಾ ಕಾರಣಕ್ಕಾಗಿ ತೀರಾ ಸಂಕಷ್ಟದಲ್ಲಿರುವುದನ್ನು ನಾವು ಹಲವಾರು ಪ್ರಕರಣಗಳಲ್ಲಿ ನೋಡುತ್ತೇವೆ. ಇತ್ತೀಚಿಗೆ ಕಬ್ಬನ್ನು ಕಾರ್ಖಾನೆಗೆ ಪೂರೈಸಿ ಎಷ್ಟೋ ದಿವಸ ಕಳೆದರೂ ರೈತನಿಗೆ ಪಾವತಿಸಬೇಕಾದ ಕಬ್ಬಿನ ಬಾಕಿಯ ಮೊತ್ತವನ್ನು ಪಾವತಿಸದೆ ಆತನನ್ನು ಅಕ್ಷರಶಃ ಬೀದಿಗೆ ತಂದು ನಿಲ್ಲಿಸಿಬಿಟ್ಟಿರುವ ಸಂಬಂಧಿಸಿದ ಕಾರ್ಖಾನೆಗಳ ಮಾಲೀಕರಿಗೆ ಏನೆನ್ನಬೇಕು ? ತಾವು ತಯಾರಿಸಿದ ಸಕ್ಕರೆಯನ್ನು ಪೂರೈಕೆ ಮಾಡಿ ಸಕ್ಕರೆ ಪಡೆದವರು ಇದೇ ರೀತಿ ಸಕ್ಕರೆ ಮೌಲ್ಯದ ಮೊತ್ತವನ್ನು ಪಾವತಿಸಲು ವಿಳಂಬ ಮಾಡಿದರೆ ಇವರು ಸುಮ್ಮನಿರುತ್ತಾರೆಯೇ ? ಈ ಕುರಿತು ರೈತರು ಕಾರ್ಖಾನೆ ಮಾಲೀಕರನ್ನು ಕೇಳಿದರೆ ಸಕ್ಕರೆ ಮಾರಾಟವಾಗದೆ ಉಳಿದಿದೆ ಏನು ಮಾಡೋದು ? ಎಂದು ಕೈ ಚೆಲ್ಲುತ್ತಾರಲ್ಲ, ಇದು ನ್ಯಾಯವೇ ? ಸಕ್ಕರೆ ಮಾರಿಲ್ಲ, ಸಕ್ಕರೆಗೆ ಮಾರುಕಟ್ಟೆಯಲ್ಲಿ ಬೇಡಿಕೆಯೇ ಇಲ್ಲ, ಬೆಲೆಯೇ ಇಲ್ಲ, ಬೆಲೆ ಕುಸಿದಿದೆ ಎಂದು ಸಬೂಬು ಹೇಳುವುದು ಎಷ್ಟು ಸೂಕ್ತ ? ಒಂದು ವೇಳೆ ಸಕ್ಕರೆಗೆ ನಿಗದಿಗಿಂತ ಹೆಚ್ಚಿನ ಬೆಲೆ ಬಂದಿದ್ದರೆ ಆ ಹೆಚ್ಚುವರಿ ಲಾಭವನ್ನು ಸಂಬಂಧಿಸಿದ ರೈತನೊಂದಿಗೆ ಇವರು ಹಂಚಿಕೊಳ್ಳುತ್ತಿದ್ದರೆ ? ತಾನು ತಯಾರಿಸಿದ ವಸ್ತುವಿಗೆ ಬೇರೊಬ್ಬರು ಬೆಲೆಯನ್ನು ನಿಗದಿಪಡಿಸುವುದು ಬಹುಶಃ ರೈತನ ಉತ್ಪನ್ನಕ್ಕೆ ಮಾತ್ರವೇ. ಈ ವಿಷಯದಲ್ಲಿ ರೈತ ಅಸಹಾಯಕ. ಕಬ್ಬಿನ ಬೆಲೆಯ ಮೊತ್ತ ಪಾವತಿ ಬಾಕಿಯ ಈ ಸಮಸ್ಯೆ ತೀರಾ ಉಲ್ಬಣಗೊಂಡು ಅಧಿವೇಶನದಲ್ಲಿಯೂ ಚರ್ಚೆಗೀಡಾಗಿ ಅಧಿವೇಶನವನ್ನೇ ಆಪೋಷನ ತೆಗೆದುಕೊಂಡುಬಿಟ್ಟಿದ್ದು ಈ ರಾಜ್ಯದ ದುರದೃಷ್ಟ.

ಕಂಗಾಲಾದ ರೈತರು ಬಾಧೆ ತಾಳದೆ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಪ್ರಮಾಣ ದಿನದಿನಕ್ಕೂ ಏರುತ್ತಿದೆ. ಇಲ್ಲಿ ಮಾನವೀಯತೆಗೆ ಬೆಲೆಯೇ ಇಲ್ಲವೇ ? ಸರ್ಕಾರ ಕಾರ್ಖಾನೆಯ ಮಾಲೀಕರಿಗೆ ಕಟ್ಟುನಿಟ್ಟಾಗಿ ಸೂಚಿಸಿ ಪಾವತಿಗೆ ಕ್ರಮ ಕೈಗೊಳ್ಳಲು ಆದೇಶಿಸಬಹುದಲ್ಲವೇ ? ಸರ್ಕಾರ ತನ್ನ ಖಜಾನೆಯಿಂದ ಕೂಡಲೇ ಇಂಥ ರೈತರಿಗೆ ಕಬ್ಬಿನ ಬಾಕಿಯನ್ನು ಪಾವತಿಸಿ ಅದರ ಮೊತ್ತವನ್ನು ಸಂಬಂಧಿಸಿದ ಕಾರ್ಖಾನೆಯಿಂದ ವಶಪಡಿಸಿಕೊಂಡ ಸಕ್ಕರೆಯನ್ನು ಮಾರಾಟ ಮಾಡಿ ಬರುವ ಮೊತ್ತವನ್ನು

ಈಗಾಗಲೇ ಪಾವತಿಸಿದ ಸರ್ಕಾರದ ಬೊಕ್ಕಸಕ್ಕೆ ಸರಿತೂಗಿಸಿಕೊಳ್ಳಬಹುದಲ್ಲ ? ಹೀಗೆ ಇನ್ನಾವುದಾದರೂ ಕ್ರಮ ಕೈಗೊಳ್ಳಬಹುದು. ಹೀಗಾದಲ್ಲಿ ಕಾರ್ಖಾನೆಯ ಮಾಲೀಕರಿಗೆ ತೊಂದರೆಯಾಗುತ್ತದೆ, ಅವರು ನಷ್ಟ ಅನುಭವಿಸುತ್ತಾರೆಂಬ ಕನಿಕರವೇ ? ಇರಲಿ, ಅವರಿಗೂ ರೈತನ ಸಂಕಷ್ಟ ಅರಿವಾಗಲಿ. ಪ್ರತಿ ಸಾರಿಯೂ ರೈತ ಮಾತ್ರ ಸಾಲಬಾಧೆಗೆ ಹೆದರಿ ಆತ್ಮಹತ್ಯೆ ಮಾಡಿಕೊಳ್ಳಬೇಕೆ ? ಒಮ್ಮೆಯಾದರೂ ಯಾರಾದರೊಬ್ಬ ಸಕ್ಕರೆ ಕಾರ್ಖಾನೆಯ ಮಾಲೀಕ ನಾಗಲೀ, ಸಗಟು ವ್ಯಾಪಾರಿಯಾಗಲೀ ಸಕ್ಕರೆ ವ್ಯವಹಾರದಿಂದ ನಷ್ಟವಾಗಿದೆಯೆಂದು ಆತ್ಮಹತ್ಯೆ ಮಾಡಿಕೊಂಡಿದ್ದಾನೆಯೇ ? ಸಂಬಂಧಿಸಿದ ಸರ್ಕಾರದ ಅಧಿಕಾರಿಗಳಾಗಲೀ ಅಥವಾ ಇಷ್ಟೆಲ್ಲ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಕ್ಕಾಗಿ ಮನನೊಂದು ಒಮ್ಮೆಯಾದರೂ ಕೃಷಿ ಮಂತ್ರಿಯಾಗಲೀ, ಸಕ್ಕರೆ ಸಚಿವರಾಗಲೀ ಆತ್ಮಹತ್ಯೆ ಮಾಡಿಕೊಂಡ ಉದಾಹರಣೆಗಳು ನಮ್ಮ ಮುಂದೆ ಇಲ್ಲವಲ್ಲ. ಈ ನಾಡಿನಲ್ಲಿ ರೈತನ ಜೀವಕ್ಕೆ ಬೆಲೆಯೇ ಇಲ್ಲವೇ ? ಯಾರದ್ದೇ ತಪ್ಪಿದ್ದರೂ ರೈತ ಮಾತ್ರ ಏಕೆ ಜೀವ ಕೊಡಬೇಕು ?

"ಜೈ ಜವಾನ್, ಜೈ ಕಿಸಾನ್, ಇವನೇ ನೋಡು ಅನ್ನದಾತ, ರೈತ ಈ ನಾಡಿನ ಬೆನ್ನೆಲುಬು" ಎನ್ನುವುದೆಲ್ಲವೂ ಬರೀ ಬೂಟಾಟಿಕೆಯೇ ? ಖಂಡಿತಾ ಇನ್ನು ಮುಂದೆ ರೈತ ಆತ್ಮಹತ್ಯೆ ಮಾಡಿಕೊಳ್ಳಬಾರದೆಂದು ನನ್ನ ವಿನಂತಿ. ಸಾಲವನ್ನು ತೀರಿಸಲಾಗದಿದ್ದರೇನಂತೆ ? ಸಾಲ ಕೊಟ್ಟವರೇನು ರೈತನನ್ನು ನೇಣಿಗೆ ಹಾಕುವುದಿಲ್ಲವಲ್ಲ ? ಜೈಲಿಗೆ ಹಾಕುತ್ತಾರೆಯೇ, ಹಾಕಲಿ. ಆತ್ಮಹತ್ಯೆಗಿಂತ ಜೈಲಲ್ಲಿದ್ದು ಏನನ್ನಾದರೂ ಸಾಧಿಸಿದರಾಯ್ತು ಎಂಬ ಸಕಾರಾತ್ಮಕ ಧೋರಣೆಯನ್ನು ನಮ್ಮ ನೆಚ್ಚಿನ ರೈತ ರೂಢಿಸಿಕೊಳ್ಳಬೇಕಾದ ಅವಶ್ಯಕತೆ ಇದೆ. ನನ್ನಪ್ಪ ರೈತ, ನನ್ನಣ್ಣ ರೈತ, ನನ್ನ ಬಂಧು ರೈತ, ಅನ್ನದಾತ ರೈತನ ಒಡಲು ತಣ್ಣಗಿರಲಿ. ಆತ ನೊಂದುಕೊಂಡರೆ, ಆತ ಆತ್ಮಹತ್ಯೆ ಮಾಡಿಕೊಂಡರೆ ನಮಗೆಲ್ಲ ಒಳ್ಳೆಯದಾಗುತ್ತದೆಯೇ ? ರೈತರಿಗೊಂದಿಷ್ಟು ಮಾನಸಿಕ ಸ್ಥೈರ್ಯವನ್ನು ಈ ರೀತಿಯಲ್ಲಿಯಾದರೂ ನೀಡೋಣ.

*ಕನಕಗಿರಿ* **ವೆಂಕಟೇಶ ಕೆ. ಜನಾದ್ರಿ**

## ಪ್ರಾಥಮಿಕ ಶಿಕ್ಷಣ

ಪ್ರಾಥಮಿಕ ಶಿಕ್ಷಣ ಒಂದು ಮಹತ್ವದ ವಿಷಯ. ಇದರ ಬಗೆಗಿನ ಕೆಲವು ಹೇಳಿಕೆಗಳು ಬಹಳ ಅಪಾಯಕಾರಿಯಾಗಿವೆ. ಶ್ರೀಮತಿ ಸೋನಿಯಾ ಗಾಂಧಿಯವರು ಹೇಳಿದ್ದಾರೆ, ಐದನೆಯ ಕ್ಲಾಸಿನ ವಿದ್ಯಾರ್ಥಿಗೆ ಎರಡನೆಯ ತರಗತಿಯ ಪುಸ್ತಕ ಓದಲು ಬರುವುದಿಲ್ಲ (ಶ್ರೀಮತಿ ಗಾಂಧಿಯವರ ಹೆಸರು ಇಲ್ಲಿ ಮಹತ್ವವನ್ನು ಪಡೆಯುತ್ತದೆ. ಯಾಕೆಂದರೆ ಅವರು ನಮ್ಮ ದೇಶವನ್ನು ಹತ್ತು ವರುಷ ಆಳಿದ ಯು.ಪಿ.ಎ. ಸರಕಾರದ ಅಧ್ಯಕ್ಷರಾಗಿದ್ದರು). ಇನ್ನೊಂದು ಪ್ರಕಟವಾದ ವಿಷಯವೆಂದರೆ ಎರಡನೆಯ ಕ್ಲಾಸಿನ ವಿದ್ಯಾರ್ಥಿಗಳಿಗೆ ಶಬ್ದವನ್ನು ಓದಲು ಬರುವುದಿಲ್ಲ, ಅಕ್ಷರಗಳನ್ನಷ್ಟೇ ಗುರುತಿಸುತ್ತಾರೆ ಎಂದು. ಇದು ಇಂದು ಸರಕಾರಿ ಶಾಲೆಗಳಲ್ಲಿ ಇರುವ ಅಪಾಯಕಾರಿ ಮತ್ತು ಗಂಭೀರ ವಿಷಯವಾಗಿದೆ.

ಇದಕ್ಕೆ ಕಾರಣ ಬದಲಾದ ಕಲಿಸುವ ವಿಧಾನ ಈಗ ಎಲ್ಲ ರೀತಿಯಲ್ಲೂ ಬದಲಾಗಿದೆ. ಈಗ ನನ್ನ ಪ್ರಕಾರ ಹಳೆಯ ಪದ್ಧತಿಗೆ ಹೋಗುವುದು ಅವಶ್ಯವಾಗಿದೆ. ಒಂದನೆಯ ಕ್ಲಾಸಿನಲ್ಲಿ ಮೂಲಾಕ್ಷರ ಹಾಗೂ ಬಳ್ಳಿಗಳನ್ನು ಕಲಿಸಬೇಕು. ಎರಡನೆಯ ಕ್ಲಾಸು ಮುಗಿಸುವಾಗ ವಿದ್ಯಾರ್ಥಿಯು ಮೂಲಾಕ್ಷರ ಬಳ್ಳಿ , ಸರಳ ಸಂಕಲನ, ವ್ಯವಕಲನ, ಗುಣಾಕಾರ, ಭಾಗಾಕಾರ ಮತ್ತು ಕನಿಷ್ಠ ೨೦ರವರೆಗೆ ಮಗ್ಗಿ ಹೇಳುವಂತಹ ಮಟ್ಟ ತಲುಪಿರಬೇಕು.

ಎರಡನೆಯ ತರಗತಿಯಿಂದ ಪುಸ್ತಕದ ಬಳಕೆಯಾಗಬೇಕು. ಒಂದನೆಯ ತರಗತಿಯಲ್ಲಿ ಪಾಟಿ ಮತ್ತು ಪೇಣೆ (ಸ್ಲೇಟು ಮತ್ತು ಬಳಪ) ಸಾಕು. ಇದು ಬಹುತೇಕ ಬದಲಾವಣೆ ತರಬಹುದೆಂದು ನನ್ನ ಅಭಿಪ್ರಾಯ. ಮತ್ತೊಂದು ವಿಷಯವೆಂದರೆ, ರೇಡಿಯೋ ಪಾಠಗಳಿಗೆ ಗುಡ್‌ಬೈ ಹೇಳಲೇಬೇಕು. ರೇಡಿಯೋ ಕಲಿಸುವುದಾದರೆ ಶಿಕ್ಷಕರು ಏಕೆ ಬೇಕು ? ರೇಡಿಯೋ ಗುರುಗಳನ್ನು ತೆಗೆದು ಹಾಕುವುದಿಲ್ಲ. ಶಿಕ್ಷಣವೆಂದರೆ ಡೈರಿ ತುಂಬಿಸುವುದು, ಫೈಲು ಬೆಳೆಸುವುದಲ್ಲ. ಏಳನೆಯ ತರಗತಿಯವರೆಗೆ ಒಂದು ಕ್ಲಾಸಿಗೆ ಒಬ್ಬರೇ ಶಿಕ್ಷಕರು ಇರಬೇಕು. ಪ್ರತಿ ಹಂತದಲ್ಲಿಯೂ ಮೌಲ್ಯಮಾಪನವಾಗಬೇಕು. ಪ್ರತಿ ೩೦ ಶಾಲೆಗಳಿಗೆ ಒಬ್ಬರಂತೆ ಐ.ಓ.ಎಸ್. ಇರಬೇಕು. ದಿನಾಲು ಇವರು ಪಾಳಿಯ ಮೇಲೆ ಶಾಲೆಗೆ ಭೇಟಿ ಕೊಟ್ಟು ಮೇಲ್ವಿಚಾರಣೆ ಮಾಡಬೇಕು.

ಈಗಿರುವ ನಪಾಸು ಮಾಡದಿರುವುದು, ಸುಳ್ಳು ಹಾಜರಿ ಹಾಕುವುದು ನಿಲ್ಲಬೇಕು. ಶಿಕ್ಷಕರು ಮೇಲಿಂದ ಮೇಲೆ ಮೀಟಿಂಗ್‌ಗೆ ಹಾಜರಾಗುವುದು ತಪ್ಪಬೇಕು. ಮೀಟಿಂಗ್‌ಗಳು ಏನನ್ನೂ ಸಾಧಿಸುವುದಿಲ್ಲ. ಬಿಸಿಯೂಟ, ಪತ್ರ ವ್ಯವಹಾರವೆಲ್ಲ ಮುಖ್ಯೋಪಾಧ್ಯಾಯರ ಕೆಲಸವಾಗಬೇಕು. ಉಳಿದ ಶಿಕ್ಷಕರಿಗೆ ಅಲ್ಲಿ ಯಾವುದೇ ಜವಾಬ್ದಾರಿ ಇರಬಾರದು. ಕಿರಿಯ ಪ್ರಾಥಮಿಕ ಶಾಲೆಯಾಗಿರಲಿ, ಹಿರಿಯ ಪ್ರಾಥಮಿಕ ಶಾಲೆಯಾಗಿರಲಿ, ಅಲ್ಲಿ ಹೆಡ್ ಮಾಸ್ತರ್ ಅವರಿಗೆ ಕಲಿಸುವ ಕೆಲಸ ಇರಬಾರದು. ಶಾಲೆಗೆ ಒಬ್ಬನಂತೆ ಸೇವಕ (ಪ್ಯೂನ್) ಇರಬೇಕು. ಮೂರು ವರ್ಷಕ್ಕೆ ಒಂದು ಸಾರಿ ಎಲ್ಲರ ವರ್ಗಾವಣೆ ಆಗಲೇಬೇಕು.

ತಪ್ಪು ಮಾಡಿದರೆ ಸಿಬ್ಬಂದಿಯವರಿಗೆ ಮುಲಾಜಿಲ್ಲದೆ ಶಿಕ್ಷೆ ಕೊಡಬೇಕು. ಇದು ಜಾರಿಗೆ ಬಂದರೆ ಬದಲಾವಣೆಯ ಗಾಳಿಬೀಸಬಹುದೆಂಬುದು ನನ್ನ ನಂಬಿಕೆ.

*ರಾಣೇಬೆನ್ನೂರು* **ಪ್ರೊ ॥ ಎ. ಸಿ. ಹಿರೇ ಒಡೆಯರ್**

## ಸಬಲೀಕರಣದ ಹಾದಿಯಲ್ಲಿ ಮಹಿಳೆ ಸಬಲಳೇ (ಅಬಲಳೇ)... ?!

ಸ್ತ್ರೀ–ಪುರುಷ ಸಮಾನತೆಗಾಗಿ ಇರುವ ತುಡಿತ ಇಂದು ನಿನ್ನೆಯದಲ್ಲ, ಬಹು ಹಿಂದಿನದು. ಆದರೂ ಇದುವರೆಗೂ ಅದು ಸಾಕಾರಗೊಂಡಿಲ್ಲ. ತಮ್ಮ ಇಂತಹ ಅಧೀನ ಸ್ಥಿತಿಗೆ ಕಾರಣವನ್ನು ಕಂಡುಹಿಡಿಯುವ ಕಾರ್ಯದಲ್ಲಿ ಮಹಿಳೆಯರು ಹೆಚ್ಚು ಹೆಚ್ಚಾಗಿ ತೊಡಗಿಕೊಳ್ಳಬೇಕು.

ಮಹಿಳೆ ಎಷ್ಟೇ ತಾರತಮ್ಯಗಳಿದ್ದಾಗ್ಯೂ ವೈಜ್ಞಾನಿಕತೆಯ ಪ್ರಭಾವದಿಂದಾಗಿ ಚಿಕ್ಕ ಕೆಲಸದಿಂದ ಹಿಡಿದು ಅತ್ಯುನ್ನತ ಸ್ಥಾನವನ್ನೂ ಅಲಂಕರಿಸಿದ್ದಾಳೆ. ಅಷ್ಟೇ ಅಲ್ಲ, ಪುರುಷನಿಗೆ ಸವಾಲೊಡ್ಡಿ ನಿಂತಿದ್ದಾಳೆ. ಪ್ರತಿಯೊಂದು ಕ್ಷೇತ್ರಕ್ಕೂ ಪಾದಾರ್ಪಣೆ ಮಾಡಿದ್ದಾಳೆ. ಇವೆಲ್ಲವನ್ನು ಅವಲೋಕಿಸಿದರೆ ಮಹಿಳೆಗೆ ನಿಜವಾಗಿಯೂ ಬಿಡುಗಡೆ ಸಿಕ್ಕಿದೆಯೇ, ಎಂಬುದರ ಕುರಿತು ಆಲೋಚಿಸಬೇಕಾಗುತ್ತದೆ. ಉದ್ಯೋಗಾವಕಾಶ ಮತ್ತಿತರ ಸಮಾನತೆಯ ಹಕ್ಕುಗಳನ್ನು ಮಹಿಳೆ ಹೊಂದಿದ್ದಾಗ್ಯೂ ಆಕೆಗೆ ಜೈವಿಕ, ಕೌಟುಂಬಿಕ ಜವಾಬ್ದಾರಿಗಳೇನು ಕಡಿಮೆಯಾಗಿಲ್ಲ. ತನ್ನ ಕೆಲಸದಲ್ಲಿ ಸಡಿಲತೆ ಎಂಬುದಿಲ್ಲದೆ, ನಿರಂತರವಾಗಿ ಯಂತ್ರದಂತೆ ತನ್ನ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದಾಳೆ. ಮಹಿಳೆ ಪರಾಧೀನಳು, ಸ್ವತಂತ್ರಳಲ್ಲ, ಚಂಚಲೆ, ಮನೆಯ ಕೆಲಸಕ್ಕೆ ಮಾತ್ರ ಸೀಮಿತ ಎಂದೆಲ್ಲಾ ಮೂಲೆಗುಂಪು ಮಾಡುತ್ತಿರುವದಷ್ಟೇ ಅಲ್ಲ, ಪುರುಷ ಪ್ರಧಾನ ಸಂಸ್ಕೃತಿ ಅವಳನ್ನು ಅಧೋಗತಿಯತ್ತ ತಳ್ಳುತ್ತಿದೆ.

ಭಾರತದಲ್ಲಿ ಮಹಿಳಾ ಸಬಲೀಕರಣದ ಯತ್ನಗಳು ಪ್ರಸ್ತುತವಾಗಿ ಕಾನೂನಿನ ಮೂಲಕವೂ ನಡೆಯುತ್ತಿವೆ. ಗ್ರಾಮೀಣ ಮಟ್ಟದಲ್ಲಿಯೂ ಕಾನೂನಿನ ಬಗ್ಗೆ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ಆದರೆ ಮುಂದುವರಿದ ಐರೋಪ್ಯ ರಾಷ್ಟ್ರಗಳಲ್ಲಿಯೂ ಮಹಿಳೆಯರ ಪರಿಸ್ಥಿತಿಯು ಉತ್ತಮವಾಗಿಲ್ಲ. ಇಲ್ಲಿ ಮಹಿಳಾ ರಾಜಕಾರಣಿಗಳು ಶೇ. ೮ರಷ್ಟನ್ನು ದಾಟದೆ ಇರುವುದನ್ನು ನೋಡಿದರೆ, ತೃತೀಯ ಜಗತ್ತಿನ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ, ಅದರಲ್ಲೂ ನಮ್ಮ ಭಾರತದಲ್ಲಿ ಹೆಚ್ಚಿನ ರೀತಿಯಲ್ಲಿ ಅವಕಾಶಗಳು ದೊರೆತಿವೆ. ೧೯೩೯–೪೦ರ ಸುಮಾರಿನವರೆಗೂ ಪ್ರಪಂಚದ ಅತ್ಯಂತ ಹಳೆಯ ವಿಶ್ವವಿದ್ಯಾನಿಲಯವಾದ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಮಹಿಳೆಯರಿಗೆ ಪ್ರವೇಶಾವಕಾಶವಿರಲಿಲ್ಲ. ಆದರೆ ನಮ್ಮ ಮುಂಬೈ ಹಾಗೂ ಕಲ್ಕತ್ತಾ ವಿಶ್ವವಿದ್ಯಾಲಯಗಳಲ್ಲಿ ಸುಮಾರು ೧೮೭೬ರಿಂದಲೇ ಮಹಿಳೆಯರು ಪದವಿ ಪಡೆದಿದ್ದಾರೆ. ಇದರಿಂದ ತಿಳಿಯುವುದೇನೆಂದರೆ ಬೇರೆ ದೇಶಗಳಿಗೆ ಹೋಲಿಸಿದರೆ ಭಾರತದಲ್ಲಿ ಮಹಿಳೆಯರಿಗೆ ಹೆಚ್ಚಿನ ಆದ್ಯತೆ ನೀಡಲಾಗುತ್ತಿದೆ. ಅನೇಕ ಸಮಾಜ ಸುಧಾರಕರ ಹೋರಾಟದ ಫಲವಾಗಿ ಮಹಿಳೆಯರು ಬಾಲ್ಯವಿವಾಹ, ಸತಿಪದ್ಧತಿ ಮುಂತಾದ ಅನಿಷ್ಟ ಪದ್ಧತಿಗಳಿಂದ ವಿಮೋಚನೆ ಪಡೆದಿದ್ದಾರೆ. ಜಾಗತೀಕರಣದ ನೆಲೆಯಲ್ಲಿ ಮಹಿಳೆಯ ಸ್ಥಿತಿಗತಿಗಳ ಬದಲಾವಣೆಗಳನ್ನು ಗಮನಿಸಿದರೆ ಇದಕ್ಕೆ ಉತ್ತರ ಅಂತಹ ಉತ್ಸಾಹದಾಯಕವಾಗಿಲ್ಲ. ಏಕೆಂದರೆ ಲಿಂಗ ತಾರತಮ್ಯ ಎಂಬುದು ಬಹು ಹಿಂದಿನಿಂದಲೂ ಇದೆ. ಇದು ನಮ್ಮ ಯಾಜಮಾನ್ಯ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ಬಹುಸಂಸ್ಕೃತಿಯನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹರಡುತ್ತಿರುವ ಅಥವಾ ಪ್ರಚಾರ ಮಾಡುತ್ತಿರುವ ಸಮೂಹ ಮಾಧ್ಯಮಗಳಲ್ಲಿ, ಅದರಲ್ಲೂ ದೂರದರ್ಶನದ ಚಾನೆಲ್ಲುಗಳಲ್ಲಿ ವೈವಿಧ್ಯಮಯವಾಗಿ ಬಿತ್ತರವಾಗುತ್ತಿರುವ ಅನೇಕ ಧಾರಾವಾಹಿಗಳು ಹೆಣ್ಣು ಗಂಡಿಗೆ ವಿಧೇಯಳಾಗಿ, ಅವನ ನಿರೀಕ್ಷೆಗೆ ತಕ್ಕಂತೆ ಬದುಕಬೇಕೆಂಬಂತೆ ಬಿಂಬಿಸುತ್ತವೆ. ಜಾಗತೀಕರಣದ ನೆರಳಿನಲ್ಲಿ ಹೆಣ್ಣನ್ನು ಸರಕುಗಳ ಮಾರಾಟದ ಏಜೆಂಟ್ ಎಂಬಂತೆ ಬಳಸಿಕೊಳ್ಳಲಾಗುತ್ತಿದೆ. ಫ್ಯಾಶನ್ ಶೋ, ನೀಳವಾದ ಕೇಶರಾಶಿ, ಹೊಳೆಯುವ ಕಣ್ಣು, ಅವಳ ತುಟಿಗಳು, ಹೀಗೆ ವಿವಿಧ ಅಂಗಾಂಗಗಳ ಪ್ರದರ್ಶನಗಳ ಮೂಲಕ ಅವಳನ್ನು ಸರಕುಗಳ ಮಾರಾಟಕ್ಕಿಳಿಸಲಾಗಿದೆ. ಅವಳಿಗೆ ತನ್ನ ನಿಜವಾದ ಪಾತ್ರ ಏನು ಎಂಬುದೇ ತಿಳಿಯದ ಸ್ಥಿತಿ ಉಂಟಾಗಿದೆ. ಇದೆಲ್ಲವನ್ನು ನೋಡಿದರೆ ಇದು ಸಬಲೀಕರಣವೇ ? ಶೋಷಣೆಯೇ ? ಎಂಬ ಪ್ರಶ್ನೆಗಳು ಕಾಡುತ್ತವೆ.

***ಡಾ॥ ಭಾಗ್ಯಮ್ಮ ಎನ್.***

# ಕ್ಷ - ಕಿರಣ

- ಸಾನ್ವಿ ಪಿ.







ಬಸವ ಬಸವ

ಹೇ ರಾಮ್... ಹೇ ರಾಮ್...

# ಮಹದಾಯಿ ನೀರಿಗಾಗಿ ಬೇಕಾಗಿದೆ 'ಜನಾಂದೋಲನ'

ಯಾವುದೋ ಒಂದು ಕಠಿಣ ಕೆಲಸವನ್ನು ಪರಿಶ್ರಮದಿಂದ ಪೂರ್ಣಗೊಳಿಸಿದಾಗ 'ಭಗೀರಥ ಪ್ರಯತ್ನ' ಎನ್ನುವ ಉಕ್ತಿ ಜನಮಾನಸದಲ್ಲಿ ಪ್ರಚಲಿತವಿದೆ. ಅಂಥ ಭಗೀರಥ ಪ್ರಯತ್ನವೊಂದು ಕರ್ನಾಟಕದ ಜನರು ಸಾಧಿಸಬೇಕಿದೆ. ಮಹದಾಯಿ ನದಿ ನೀರನ್ನು ಮಲಪ್ರಭೆಗೆ ಹರಿಸುವ ಮತ್ತು ಆ ಮೂಲಕ ಈ ಭಾಗದ ನೀರಿನ ಕೊರತೆಯನ್ನು ನೀಗುವುದೇ ಆ ಪ್ರಯತ್ನ. ಆದರೆ ಭಗೀರಥನಿಗಿದ್ದ ಛಲ, ಬದ್ಧತೆ, ಇಚ್ಛಾಶಕ್ತಿ ನಮ್ಮ ಸರಕಾರಗಳಿಗಿಲ್ಲ ಅಷ್ಟೆ. ಭಗೀರಥನ ರೂಪದಲ್ಲಿ ಈಗ ಜನಚಳುವಳಿ ರೂಪಗೊಂಡಿದೆ. ಜನಚಳುವಳಿಗಳ ಮೂಲಕವೆ ಸರಕಾರಗಳಿಗೆ ಇಚ್ಛಾಶಕ್ತಿಯನ್ನು ತುಂಬುವುದು, ಸರಕಾರಗಳು ಜಡತ್ವದಿಂದ ಮೈಕೊಡವಿ ಮೇಲೇಳುವಂತೆ ಮಾಡುವಂತಹ ಸ್ಥಿತಿ ನಿರ್ಮಾಣ ವಾಗಿರುವದು ಪರಿಸ್ಥಿತಿಯ ವ್ಯಂಗ್ಯ. ಕೇಂದ್ರ ಸರಕಾರವಾದರೂ ಇಂಥ ಸಮಸ್ಯೆಯನ್ನು ಕೇವಲ ಎರಡು ರಾಜ್ಯಗಳ ಸಮಸ್ಯೆ ಎಂದು ಉದಾಸೀನ ತೋರುವದು ಸರಿಯಲ್ಲ. ಒಂದು ಭಾಗದ ಜನತೆಯ ಪ್ರಶ್ನೆಯಾಗಿ ನೋಡಬೇಕು, ಅಷ್ಟೆ.

**ಏನಿದು ಮಹದಾಯಿ ಯೋಜನೆ :** ಗದಗ ಜಿಲ್ಲೆಯ ನರಗುಂದ, ರೋಣ, ಧಾರವಾಡ ಜಿಲ್ಲೆಯ ನವಲಗುಂದ, ಬೆಳಗಾವಿ ಜಿಲ್ಲೆಯ ಸವದತ್ತಿ, ರಾಮದುರ್ಗ ಹಾಗೂ ಬೈಲಹೊಂಗಲ ಮುಂತಾದ ತಾಲೂಕುಗಳು ಮೇಲಿಂದ ಮೇಲೆ ಬರಗಾಲಕ್ಕೆ ತುತ್ತಾಗುತ್ತಿದ್ದವು. 'ನರಗುಂದ ಜನತೆ ಕುಡಿಯುವ ನೀರಿಗೂ ಬವಣೆಪಡುತ್ತಿದ್ದ ಕಾಲವಿತ್ತು. ಹೆಸರಿಗೆ ನರಗುಂದ ಮೊಸರಿಗೆ ನೀರಿಲ್ಲ' ಅನ್ನುವ ಲಾವಣಿಯೊಂದಿತ್ತು ಆಗ. ಹೀಗಾಗಿ ನೀರಾವರಿ ಯೋಜನೆಯೊಂದು ಅಗತ್ಯವಾಗಿತ್ತು. ಅದಕ್ಕಾಗಿ

ಬಿ. ಎಸ್. ಸೊಪ್ಪಿನ

ಮಲಪ್ರಭಾ ಆಣೆಕಟ್ಟೆಯಲ್ಲಿ ನೀರಿನ ಸಂಗ್ರಹದ ಕೊರತೆಯನ್ನು ನೀಗಲು ಹಾಗೂ ಈ ಭಾಗದ ಕೃಷಿ ಮತ್ತು ಕುಡಿಯುವ ನೀರಿನ ಪೂರೈಕೆಗೆ ಮಹದಾಯಿ ಕಣಿವೆಯಿಂದ ಒಂದಿಷ್ಟು ನೀರು ಹರಿಸಲು ಮಾಡಿದ ಯೋಜನೆಯೇ ಮಹದಾಯಿ ತಿರುವು ಯೋಜನೆ. ಇದು ೧೯೭೮ರಷ್ಟು ಹಿಂದೆ ತಯಾರಾದ ಯೋಜನೆ. ಮಹದಾಯಿ ನೀರನ್ನು ಬಳಸಿಕೊಂಡು ಜಲವಿದ್ಯುತ್ ಉತ್ಪಾದಿಸಿ ೯ ಟಿ.ಎಂ.ಸಿ. ನೀರನ್ನು ಮಲಪ್ರಭಾ ನದಿಗೆ ಹರಿಸಲು ಉದ್ದೇಶಿಸಲಾಗಿತ್ತು.






ಮಲಪ್ರಭಾ ನದಿ ನೀರಾವರಿ ಯೋಜನೆಯನ್ನು ಕರ್ನಾಟಕ ಸರಕಾರ ರೂಪಿಸಿತು. ಸವದತ್ತಿ-ಮುನವಳ್ಳಿ ಮಧ್ಯೆ 'ನವಿಲುತೀರ್ಥ' ಎಂಬ ಸ್ಥಳದಲ್ಲಿ ಮಲಪ್ರಭಾ ನದಿಗೆ ಆಣೆಕಟ್ಟೆ ಕಟ್ಟುವ ಕೆಲಸ ೧೯೬೧ರಲ್ಲಿ ಪ್ರಾರಂಭವಾಗಿ ೧೯೭೨ಕ್ಕೆ ಪೂರ್ಣಗೊಳಿಸಲಾಯಿತು. ೧೯೭೩-೭೪ರ ಸುಮಾರಿಗೆ ರೈತರ ಭೂಮಿಗೆ ನೀರು ಹರಿಯಿತು. ೫.೨೬ ಲಕ್ಷ ಎಕರೆ ಭೂಮಿ ನೀರುಣ್ಣುವದೆಂದು ಅಂದಾಜು ಮಾಡಲಾಯಿತು. ನೀರಾವರಿಗೆ ಕ್ಷೇತ್ರವನ್ನು ನಿಗದಿಪಡಿಸುವಾಗ ಕನಿಷ್ಠ ಶೇ. ೫೦ರ ಅವಲಂಬನೆಯಲ್ಲಿ ಗರಿಷ್ಠ ಶೇ. ೭೫ರಷ್ಟು ನೀರಿನ ಲಭ್ಯತೆ ನೋಡಿಕೊಂಡು ಮಾಡಬೇಕಾಗುತ್ತದೆ. ಮಲಪ್ರಭಾ ಜಲಾಶಯ (ಈಗ ಅದನ್ನು ರೇಣುಕಾ ಸಾಗರ ಎಂದು ಹೆಸರಿಸಲಾಗಿದೆ) ೨೦೭೯ ಅಡಿ ಅಂದರೆ ೩೭.೭೩ ಟಿ.ಎಂ.ಸಿ. ನೀರಿನ ಸಂಗ್ರಹದ ಸಾಮರ್ಥ್ಯವನ್ನು ಹೊಂದಿದೆ. ಆದರೆ ರೇಣುಕಾ ಸಾಗರದಲ್ಲಿ ಇಷ್ಟು ವರ್ಷಗಳಲ್ಲಿ ಜಲಾಶಯ ಭರ್ತಿ ಆದದ್ದು ೩-೪ ಬಾರಿ ಮಾತ್ರ. ಗದಗ ಜಿಲ್ಲೆಯ ರೋಣ ತಾಲೂಕಿಗೆ ೧.೧೧ ಲಕ್ಷ ಎಕರೆಗೆ ನೀರು ಪೂರೈಸಬೇಕಿದ್ದರೆ ಈವರೆಗೂ ೧ ಎಕರೆಗೂ ನೀರು ಸಿಕ್ಕಿಲ್ಲ ಅಂದಾಗ ಲೆಕ್ಕಾಚಾರದಲ್ಲಿ ಏನೋ ತಪ್ಪಾಗಿದೆ. ಮಲಪ್ರಭಾ ಜಲಾಶಯದ ನೀರಿನ ಸಂಗ್ರಹದ ಕೊರತೆಯನ್ನು ಮನಗಂಡ ತಜ್ಞರು ಮಹದಾಯಿ ನದಿ ನೀರನ್ನು ಮಲಪ್ರಭಾ ನದಿಗೆ ಹರಿಸುವ ಮೂಲಕ ನೀರಿನ ಕೊರತೆ ನೀಗಲು ಯೋಜನೆ ರೂಪಿಸಿದರು.

ಮಹದಾಯಿ ನದಿಯೂ ಮಲಪ್ರಭಾ ನದಿಯಂತೆ ಬೆಳಗಾವಿ ಜಿಲ್ಲೆ ಖಾನಾಪೂರ ತಾಲೂಕಿನ ಪಶ್ಚಿಮ ಘಟ್ಟದಲ್ಲಿ ಸಮುದ್ರಮಟ್ಟದಿಂದ ೯೧೪ ಮೀಟರ್ ಎತ್ತರ ಪ್ರದೇಶದಲ್ಲಿ ಉಗಮವಾಗಿದೆ. ಈ ನದಿಯು ಮೊದಲು ದಕ್ಷಿಣಕ್ಕೆ, ನಂತರ ಪಶ್ಚಿಮದ ಕಡೆಗೆ ಸಾಗಿ ೨೯ ಕಿ.ಮೀ. ಕರ್ನಾಟಕದಲ್ಲಿ ೫೧.೫ ಕಿ.ಮೀ. ಗೋವಾದಲ್ಲಿ ಹರಿದು ಅರಬ್ಬಿ ಸಮುದ್ರವನ್ನು ಸೇರುತ್ತದೆ. ಗೋವಾದಲ್ಲಿ ಈ ನದಿಯನ್ನು 'ಮಾಂಡೋವಿ' ಎಂದೂ ಕರೆಯುತ್ತಾರೆ. ಕಳಸಾ, ಬಂಡೂರಿ, ಕೊಟ್ಲಾ, ಸರಳಾ, ಕಾರಂಜೋಳ, ದೂದಸಾಗರ ಹಾಗೂ ಬೊಮ್ಮನದಿ ಇವು ಮಹದಾಯಿಯ ಉಪನದಿಗಳು. ಇವು ಕೂಡಾ ಕರ್ನಾಟಕದಲ್ಲಿ ಹುಟ್ಟಿ ಗೋವಾದಲ್ಲಿ ಮಹದಾಯಿ ನದಿಯನ್ನು ಸೇರುತ್ತವೆ. ಮಹದಾಯಿ ಮತ್ತು ಅದರ ಉಪನದಿಗಳೂ ಸೇರಿದಂತೆ ೨೦೩೨ ಚ.ಕಿ.ಮೀ.ನಷ್ಟು ವಿಸ್ತಾರವಾದ ಜಲಾನಯನ ಪ್ರದೇಶ ಹೊಂದಿದ್ದು ಕರ್ನಾಟಕ, ಗೋವಾ ಮತ್ತು ಮಹಾರಾಷ್ಟ್ರ ರಾಜ್ಯಗಳಲ್ಲಿ ಹಂಚಿಹೋಗಿದೆ. ಈ ಪ್ರದೇಶದ ಸರಾಸರಿ ಮಳೆ ೩೧೩೪ ಮಿ.ಮೀ. ಸಾಮಾನ್ಯ ಸರಾಸರಿ ೫೮೮೫೭, ಶೇ. ೫೦ ಅವಲಂಬನೆಯಲ್ಲಿ (Dependable) ೬೩೬೮೫ ಹಾಗೂ ಶೇ. ೭೫ ಅವಲಂಬನೆಯಲ್ಲಿ ೪೬೩೧೯ ಎಂ.ಸಿ.ಎಫ್.ಟಿ. ನೀರು ಲಭ್ಯವಿದೆ ಎಂದು ವೈಜ್ಞಾನಿಕ ಅಧ್ಯಯನದಿಂದ ತಿಳಿದುಬರುತ್ತದೆ. ಕೇಂದ್ರ ಜಲ ಆಯೋಗದ ಸಮೀಕ್ಷೆ ಪ್ರಕಾರ ಈ ನದಿಯಲ್ಲಿ ೨೦೦-೨೨೦ ಟಿ.ಎಂ.ಸಿ. ನೀರು ಲಭ್ಯವಿದ್ದು ಅದರಲ್ಲಿ ಕರ್ನಾಟಕದ ಪಾಲು ೪೫ ಟಿ.ಎಂ.ಸಿ. ಎಂದೂ ತಿಳಿಸಿದೆ.

ಮಲಪ್ರಭಾ ಆಣೆಕಟ್ಟೆಯಲ್ಲಿ ನೀರಿನ ಸಂಗ್ರಹದ ಕೊರತೆಯನ್ನು ನೀಗಲು ಹಾಗೂ ಈ ಭಾಗದ ಕೃಷಿ ಮತ್ತು ಕುಡಿಯುವ ನೀರಿನ ಪೂರೈಕೆಗೆ ಮಹದಾಯಿ ಕಣಿವೆಯಿಂದ ಒಂದಿಷ್ಟು ನೀರು ಹರಿಸಲು ಮಾಡಿದ ಯೋಜನೆಯೇ ಮಹದಾಯಿ ತಿರುವು ಯೋಜನೆ. ಇದು ೧೯೭೮ರಷ್ಟು ಹಿಂದೆ ತಯಾರಾದ ಯೋಜನೆ. ಮಹದಾಯಿ ನೀರನ್ನು ಬಳಸಿಕೊಂಡು ಜಲವಿದ್ಯುತ್ ಉತ್ಪಾದಿಸಿ ೯ ಟಿ.ಎಂ.ಸಿ. ನೀರನ್ನು ಮಲಪ್ರಭಾ ನದಿಗೆ ಹರಿಸಲು ಉದ್ದೇಶಿಸಲಾಗಿತ್ತು. ೧೯೮೮ರಲ್ಲಿ ಕರ್ನಾಟಕದ ಆಗಿನ ಮುಖ್ಯಮಂತ್ರಿ ದಿ। ಎಸ್. ಆರ್. ಬೊಮ್ಮಾಯಿ ಮತ್ತು ಗೋವಾದ ಆಗಿನ ಮುಖ್ಯಮಂತ್ರಿ ರಾಣೆ ಅವರ ನಡುವೆ ಈ ಯೋಜನೆ ಕುರಿತು ಒಂದು ಒಪ್ಪಂದವೂ ಏರ್ಪಟ್ಟಿತ್ತು. ಆದರೆ ಸರಕಾರಗಳು ಬದಲಾದವು. ಯೋಜನೆ ಕಾಗದದಲ್ಲೇ ಉಳಿಯಿತು. ನಂತರ ಅಧಿಕಾರಕ್ಕೆ ಬಂದ ಗೋವಾ ಸರಕಾರಗಳು ಈ ಯೋಜನೆಗೆ ವಿರೋಧ ವ್ಯಕ್ತಪಡಿಸುತ್ತಲೇ ಬಂದಿವೆ. ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದ ಸರಕಾರಗಳು ತಮ್ಮ ರಾಜಕೀಯ ಇಚ್ಛಾಶಕ್ತಿಯನ್ನು ತೋರಲೇ ಇಲ್ಲ.

**ಗೋವಾದ ತಕರಾರು ಏನು ?**

ಮಹದಾಯಿ ಕೊಳ್ಳದಿಂದ ನೀರನ್ನು ಬೇರೆಡೆ ವರ್ಗಾಯಿಸುವ ಯಾವುದೇ ಯೋಜನೆಯನ್ನು ಗೋವಾ ವಿರೋಧಿಸಲು ಪ್ರಮುಖವಾಗಿ ಎರಡು ಕಾರಣಗಳು :

ಒಂದು, ಮಹದಾಯಿ ನೀರಿನ ಕೊರತೆ ಇರುವ ಕಣಿವೆ ಪ್ರದೇಶವಾಗಿದೆ. ಆದ್ದರಿಂದ ಕೊರತೆ ಕಣಿವೆ ಪ್ರದೇಶದ ನೀರಿನ ಅವಶ್ಯಕತೆಗಳನ್ನು ಮೊದಲು ಪೂರೈಸಬೇಕು.

ಎರಡು, ಈ ನದಿ ನೀರನ್ನು ಬೇರೆಡೆಗೆ ವರ್ಗಾಯಿಸಿದಲ್ಲಿ ಪಶ್ಚಿಮಘಟ್ಟದ ಪರಿಸರದ ಮೇಲೆ ತೀವ್ರ ಪರಿಣಾಮವಾಗುವದು ಈ ಪ್ರದೇಶದ ಜೀವಸಂಕುಲಕ್ಕೆ ಅಪಾಯವಾಗುವದು.

ಗೋವಾದ ವಾದವು ವಾಸ್ತವಿಕತೆಯಿಂದ ಕೂಡಿರುವದಿಲ್ಲ. ರಾಷ್ಟ್ರೀಯ ಜಲ ಅಭಿವೃದ್ಧಿ ಪ್ರಾಧಿಕಾರ (NWDA) ಮತ್ತು ಕೇಂದ್ರ ಜಲ ಆಯೋಗ (CWC) ಸಂಸ್ಥೆಗಳು ನಡೆಸಿದ ಅಧ್ಯಯನದ ಪ್ರಕಾರ ಮಹದಾಯಿ ಒಂದು ನೀರಿನ ಕೊರತೆಯುಳ್ಳ ಪ್ರದೇಶವಲ್ಲ. ಮತ್ತು ನಾಗಪುರದ ರಾಷ್ಟ್ರೀಯ ಪರಿಸರ ತಾಂತ್ರಿಕ ಸಂಶೋಧನ ಸಂಸ್ಥೆ (NEERI)ಯ ಸಮೀಕ್ಷೆಯಂತೆ ನೀರಿನ ವರ್ಗಾವಣೆಯಿಂದ ಪರಿಸರದ ಮೇಲೆ ಯಾವುದೇ ಅಡ್ಡ ಪರಿಣಾಮ ಉಂಟಾಗುವದಿಲ್ಲ. ಈ ವೈಜ್ಞಾನಿಕ ಅಂಶಗಳನ್ನು ಗೋವಾ ಸರಕಾರ ಏಕೆ ಒಪ್ಪುತ್ತಿಲ್ಲ ?

**ಕಳಸಾ-ಬಂಡೂರಿ ನಾಲಾ ಜೋಡಣೆ ಯಾಕೆ ?**

ಗೋವಾದ ತೀವ್ರ ಆಕ್ಷೇಪದಿಂದ ಮಹದಾಯಿ ತಿರುವು ಯೋಜನೆ ನೆನೆಗುದಿಗೆ ಬಿದ್ದಿತು. ೧೯೯೯ರಲ್ಲಿ ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದ ಕಾಂಗ್ರೆಸ್ ಸರಕಾರದಲ್ಲಿ ಎಚ್. ಕೆ. ಪಾಟೀಲ್ ನೀರಾವರಿ ಸಚಿವರಾಗಿದ್ದರು. ಮಹದಾಯಿ ತಿರುವು ಯೋಜನೆಯನ್ನು ಬದಿಗಿಟ್ಟು, ಮಹದಾಯಿಯ ಉಪನದಿಗಳಾದ ಬಂಡೂರಿ, ಹಳತಾರ ಮತ್ತು ಕಳಸಾಗಳಿಂದ ೭.೫೬ ಟಿ.ಎಂ.ಸಿ. ನೀರನ್ನು ಮಲಪ್ರಭಾ ನದಿಗೆ ಹರಿಸಲು ಸಿದ್ಧಪಡಿಸಿದ ಎಚ್. ಕೆ. ಪಾಟೀಲರ ಮಹತ್ವಾಕಾಂಕ್ಷೆಯ ಯೋಜನೆ ಕಳಸಾ-ಬಂಡೂರಿ ಯೋಜನೆ. ಇದೊಂದು ಹುಬ್ಬಳ್ಳಿ-ಧಾರವಾಡ ನಗರಗಳ ಕುಡಿಯುವ ನೀರಿನ ಯೋಜನೆ. ಆಂತರ್ಯದಲ್ಲಿ ನೀರನ್ನು ಕೃಷಿಗೆ ಬಳಸಿಕೊಳ್ಳುವ ವಿಚಾರವಿದ್ದರೂ ಬಾಹ್ಯದಲ್ಲಿ ಕುಡಿಯುವ ನೀರಿನ ಯೋಜನೆಯಾಗಿ ಪರಿವರ್ತಿಸಿ ಕೇಂದ್ರದ ಅನುಮತಿ ಪಡೆಯುವದು ಪಾಟೀಲರ ತಂತ್ರಗಾರಿಕೆ ಇದ್ದಿರಬಹುದು. ಕೇಂದ್ರ ಜಲ ಆಯೋಗಕ್ಕೆ ದಿನಾಂಕ ೩೦-೩-೨೦೦೨ರಂದು ಕರ್ನಾಟಕ ಸರಕಾರದ ಮುಖ್ಯ ಕಾರ್ಯದರ್ಶಿಗಳಿಂದ ಕಳಸಾ-ಬಂಡೂರಿ ಯೋಜನೆಯ ಮಂಜೂರಾತಿಗೆ ಪ್ರಸ್ತಾವನೆ ಸಲ್ಲಿಸಲ್ಪಟ್ಟಿತು. ೩೦-೪-೨೦೦೨ರಂದು ಕೇಂದ್ರ ಜಲ ಆಯೋಗದಿಂದ ೭.೫೬ ಟಿ.ಎಂ.ಸಿ. ನೀರನ್ನು ಮಲಪ್ರಭಾ ನದಿಗೆ ಹರಿಸುವ ಯೋಜನೆಗೆ 'ತಾತ್ವಿಕ ಒಪ್ಪಿಗೆ' ಸಿಕ್ಕಿತು. ಕುಡಿಯುವ ನೀರಿಗೆ ಪ್ರಥಮ ಆದ್ಯತೆ ಎಂಬುದು ನಮ್ಮ ಜಲನೀತಿಯಾಗಿದೆ. ಅದಕ್ಕಾಗಿ ಹುಬ್ಬಳ್ಳಿ-ಧಾರವಾಡ ನಗರಗಳಿಗೆ ಕುಡಿಯುವ ನೀರು ಪೂರೈಸುವ ಕಳಸಾ-ಬಂಡೂರಿ ನಾಲಾ ಯೋಜನೆಗೆ ಅನುಮತಿ ನೀಡಿತು ಮತ್ತು ಕೆಲವು ಷರತ್ತುಗಳನ್ನು ವಿಧಿಸಿತು. ಆ ಷರತ್ತುಗಳೆಂದರೆ :

೧) ೭.೫೬ ಟಿ.ಎಂ.ಸಿ. ನೀರನ್ನು ಕೇವಲ ಮಳೆಗಾಲದಲ್ಲಿ ಮಾತ್ರ ವರ್ಗಾಯಿಸುವುದು.

೨) ಈ ನೀರನ್ನು ಹುಬ್ಬಳ್ಳಿ - ಧಾರವಾಡ ಅವಳಿ ನಗರಗಳ ಕುಡಿಯುವ ನೀರಿಗಾಗಿ ಬಳಸುವದು.

೩) ಅಂತರರಾಜ್ಯ ನೀರಿನ ಹಂಚಿಕೆಯಾದಾಗ ಕರ್ನಾಟಕದ ಪಾಲಿನ ಈ ೭.೫೬ ಟಿ.ಎಂ.ಸಿ. ನೀರನ್ನು ಹೊಂದಾಣಿಕೆ ಮಾಡಿಕೊಳ್ಳುವದು.

೪) ಕೇಂದ್ರ ಜಲ ಆಯೋಗದ ಅಧಿಕಾರಿಗಳು ಯೋಜನಾ ಸ್ಥಳ ಪರಿಶೀಲನೆಗೆ ಬಂದಾಗ ಕರ್ನಾಟಕ ಅನುಮತಿಸುವದು ಮತ್ತು ಅನುಕೂಲ ಮಾಡಿಕೊಡುವದು.

೫) ಕರ್ನಾಟಕ ಭವಿಷ್ಯದಲ್ಲಿ ಹೆಚ್ಚು ನೀರು ವರ್ಗಾಯಿಸುವದಿಲ್ಲ ಎಂದು ನೀಲಿ ನಕ್ಷೆಗಳಿಂದ ಖಾತ್ರಿ ಮಾಡಿಕೊಳ್ಳುವದು.

೬) ಗೋವಾ ಮತ್ತು ಮಹಾರಾಷ್ಟ್ರದ ಅಧಿಕಾರಿಗಳ ತಂಡ ಭೇಟಿ ಮಾಡಬಯಸಿದರೆ ಅನುಮತಿಸುವದು ಮತ್ತು ಅನುಕೂಲ ಮಾಡಿಕೊಡುವದು.

೭) ಉದ್ದೇಶಿತ ಕುಡಿಯುವ ನೀರಿನ ಯೋಜನೆಯ ಅನುಷ್ಠಾನದಲ್ಲಿ ಕರ್ನಾಟಕ ಅಂಗೀಕೃತ ವಿಧಾನಗಳನ್ನು ಪಾಲಿಸುವದು.

ಹೇಗಾದರೂ ನೀರು ಪಡೆಯಬೇಕು ಎಂಬ ಆಸೆಯಿಂದ ಕರ್ನಾಟಕ ಈ ಎಲ್ಲ ಕರಾರುಗಳನ್ನೂ ಒಪ್ಪಿತು. ಆದರೆ ಗೋವಾ ಇದಕ್ಕೂ ಕ್ಯಾತೆ ತೆಗೆಯಿತು. ಗೋವಾದ ತೀವ್ರ ಆಕ್ಷೇಪಣೆಯಿಂದಾಗಿ ಕೇಂದ್ರ ಜಲ ಆಯೋಗ ದಿನಾಂಕ ೧೯-೯-೨೦೦೨ರಂದು 'ತಾತ್ವಿಕ ಒಪ್ಪಿಗೆ' ಆದೇಶವನ್ನು ಅಮಾನತುಗೊಳಿಸಿತು. ಮಲಪ್ರಭಾ ಅಚ್ಚುಕಟ್ಟು ಪ್ರದೇಶದ ಜನರ ಕನಸು ಮತ್ತೊಮ್ಮೆ ಭಗ್ನಗೊಂಡಿತು.

ಜಲಾನಯನದಲ್ಲಿ ಹೇರಳ ಜಲಸಂಪತ್ತು, ಮಹತ್ವಾಕಾಂಕ್ಷೆ ಯೋಜನೆಗಳು, ವೈಜ್ಞಾನಿಕ ಸಮೀಕ್ಷೆಗಳು ಇದ್ದಾಗ್ಯೂ ಕುಂಟುನೆಪಗಳು, ಹಟಮಾರಿ ಧೋರಣೆಗಳು, ರಾಜಕೀಯ ಲೆಕ್ಕಾಚಾರಗಳು ಹಾಗೂ ಮತಗಳಿಕೆ ವಿಚಾರಗಳು ಜನಕಲ್ಯಾಣ ಯೋಜನೆಯನ್ನು ಹಿಂದಕ್ಕಿಕ್ಕುವಂತೆ ಮಾಡಿದ್ದು ದುರಂತವೇ ಸರಿ. ಈ ಮಾತು ಕೇಂದ್ರ – ರಾಜ್ಯಗಳಲ್ಲಿ ಆಡಳಿತ ನಡೆಸಿದ ಎಲ್ಲ ಸರಕಾರಗಳಿಗೆ ಅನ್ವಯಿಸುತ್ತದೆ.

**ಹೋರಾಟದ ಹಾದಿ ತುಳಿದ ಜನತೆ :** ಮಹದಾಯಿ ತಿರುವು ಯೋಜನೆ ಅನುಷ್ಠಾನಕ್ಕೆ ಪ್ರಪ್ರಥಮವಾಗಿ ಧ್ವನಿ ಎತ್ತಿದವರು ಬಾದಾಮಿ ಶಾಸಕರಾಗಿದ್ದ ದಿ। ಬಿ. ಎಂ. ಹೆರಕೇರಿ. ೮೦ರ ದಶಕದಲ್ಲಿ ಯೋಜನೆಯ ಬಗ್ಗೆ ಮಾಹಿತಿ ನೀಡುವ ಒಂದು ನಕ್ಷೆ ತಯಾರಿಸಿಕೊಂಡು ಬೇರೆ ಬೇರೆ ತಾಲೂಕುಗಳಿಗೆ ತೆರಳಿ ಜನಜಾಗೃತಿ ಮೂಡಿಸಿದರು.

ಕಳಸಾ-ಬಂಡೂರಿ ನಾಲಾ ಜೋಡಣೆಗೆ ನೀಡಿದ್ದ ತಾತ್ವಿಕ ಒಪ್ಪಿಗೆಗೆ ತಡೆಯಾಜ್ಞೆ ಹೊರಡಿಸಿದ ಮೇಲೆ ನವಲಗುಂದ – ನರಗುಂದ – ಸವದತ್ತಿ ತಾಲೂಕುಗಳಲ್ಲಿ ಹೋರಾಟಗಳು ನಡೆದವು. ಪ್ರಖರ ಹೋರಾಟಗಳು ಕೇಂದ್ರ – ರಾಜ್ಯಗಳ ಕಿವುಡು ಕಿವಿಗಳಿಗೆ ಕೇಳದೆ ಹೋದವು. ಇದೇ ಸಂದರ್ಭದಲ್ಲಿ ರಾಜ್ಯದ ಬಿಜೆಪಿ ಮುಖಂಡರು ಕಳಸಾ-ಬಂಡೂರಿ ಯೋಜನೆಗೆ ಕೇಂದ್ರದ ಅನುಮತಿ ಅಗತ್ಯವಿಲ್ಲ, ರಾಜ್ಯ ಸರಕಾರಕ್ಕೆ ಯೋಜನೆ ಜಾರಿಗೆ ಮನಸ್ಸಿಲ್ಲ ಎಂದು ಬೊಬ್ಬೆ ಹಾಕಿದ್ದರು. ವಿಪರ್ಯಾಸವೆಂದರೆ ೨೦೦೪ರಲ್ಲಿ ಕೇಂದ್ರದಲ್ಲಿ ಕಾಂಗ್ರೆಸ್ ನೇತೃತ್ವದ ಯುಪಿಎ I ಸರಕಾರ ಬಂದಾಗ ಈ ಭಾಗದ ಬಿಜೆಪಿ ಸಂಸದರೂ ಕಳಸಾ-ಬಂಡೂರಿ ಯೋಜನೆಗೆ ಅನುಮತಿ ಕೋರಿ ಅರ್ಜಿ ಸಲ್ಲಿಸಿದರು. ನಂತರ ಆ ರಾಜಕೀಯ ಸಂಘಟನೆಯ ಜನಪ್ರತಿನಿಧಿಗಳ ನೇತೃತ್ವದಲ್ಲಿ ಹೋರಾಟಗಳು ನಡೆದವು.

ಈ ಮಧ್ಯೆ ಜೆಡಿ(ಎಸ್) – ಬಿಜೆಪಿ ಸಂಯುಕ್ತ ಸರಕಾರ ಇದ್ದಾಗ ಕರ್ನಾಟಕ ಸರಕಾರ ಒಂದು ಹೆಜ್ಜೆ ಮುಂದೆ ಹೋಗಿ ಕಾಲುವೆ ನಿರ್ಮಾಣಕ್ಕೆ ಗುದ್ದಲಿ ಪೂಜೆ ನೆರವೇರಿಸಿ ಕಾರ್ಯ ಪ್ರಾರಂಭಿಸಿತು. ಗೋವಾ ಸುಪ್ರೀಮ್ ಕೋರ್ಟಿನಲ್ಲಿ ಅರ್ಜಿ ಸಲ್ಲಿಸಿ ಕಾಲುವೆ ನಿರ್ಮಾಣದ ಕಾರ್ಯವನ್ನೂ ಸ್ಥಗಿತಗೊಳಿಸುವಂತೆ ಆದೇಶಿಸ ಬೇಕೆಂದು ಮನವಿ ಮಾಡಿತು. ಆದರೆ ಕೆಲಸ ಅರಣ್ಯೇತರ ಪ್ರದೇಶದಲ್ಲಿ ನಡೆಯುತ್ತಿರುವದರಿಂದ ಗೋವಾದ ಅರ್ಜಿಯನ್ನು ಕೋರ್ಟ್ ತಿರಸ್ಕರಿಸಿತು. ನ್ಯಾಯಾಧಿಕರಣವನ್ನು ನೇಮಿಸುವಂತೆಯೂ ಗೋವಾ ಸರಕಾರ ಅರ್ಜಿಯಲ್ಲಿ ಮನವಿ ಮಾಡಿತ್ತು. ೨೦೦೬ರಲ್ಲಿ ಕೇಂದ್ರ ಜಲಸಂಪನ್ಮೂಲ ಸಚಿವರಿಗೆ ಪತ್ರ ಬರೆದು ನ್ಯಾಯಾಧಿಕರಣ ರಚಿಸುವಂತೆ ಒತ್ತಾಯಿಸಿತು. ನವೆಂಬರ್ ೨೦೦೬ರಲ್ಲಿ ಕೇಂದ್ರ ಮಂತ್ರಾಲಯ ಕರ್ನಾಟಕ ಸರಕಾರಕ್ಕೆ ಸಂಧಾನದಿಂದ ಈ ವ್ಯಾಜ್ಯ ಬಗೆಹರಿಸುವದಾಗದು ಮತ್ತು ಅಂತರರಾಜ್ಯ ಜಲ ವಿವಾದ ಕಾಯ್ದೆ, ೧೯೫೬ರ ಅಡಿಯಲ್ಲಿ ಕ್ರಮ ಕೈಗೊಳ್ಳುವದು ಸೂಕ್ತ ಎಂದು ತಿಳಿಸಿತು. ೨೦೦೭ರಲ್ಲಿ ಗೋವಾ ವಿಧಾನ ಸಭೆಗೆ ಚುನಾವಣೆಗಳು ನಡೆದಾಗ ಕಾಂಗ್ರೆಸ್ ಅಧ್ಯಕ್ಷೆ ಶ್ರೀಮತಿ ಸೋನಿಯಾ ಗಾಂಧಿ "ಕಳಸಾ-ಬಂಡೂರಿ ಯೋಜನೆಗೆ ತಾವು ಒಪ್ಪಿಗೆ ನೀಡುವದಿಲ್ಲ" ಎಂಬ ಭರವಸೆಯನ್ನು ನೀಡಿದರು ಎಂದು ಮಾಧ್ಯಮ ವರದಿಗಳಿವೆ. ಅಂತೂ ಕೇಂದ್ರದ ಯುಪಿಎ ಸರಕಾರ II ೨೦೧೦ ನವೆಂಬರ್ ತಿಂಗಳಲ್ಲಿ 'ಮಹದಾಯಿ ನ್ಯಾಯಾಧಿಕರಣ'ವನ್ನು ರಚಿಸಿತು :

ನ್ಯಾಯಾಧೀಶ ಜೆ. ಎಂ. ಪಾಂಚಾಳ – ಅಧ್ಯಕ್ಷರು
ನ್ಯಾಯಾಧೀಶ ವಿನಯ ಮಿತ್ತಾಲ – ಸದಸ್ಯರು
ನ್ಯಾಯಾಧೀಶ ಪಿ. ಎಸ್. ನಾರಾಯಣ – ಸದಸ್ಯರು






ಸದ್ಯಕ್ಕೆ ಮಹದಾಯಿ ನೀರಿನ ವ್ಯಾಜ್ಯದ ಚೆಂಡು ನ್ಯಾಯಾಧಿಕರಣದ ಅಂಗಳದಲ್ಲಿದೆ.

ಈ ವರ್ಷ ಮಹದಾಯಿ ನೀರಿಗಾಗಿ ಚಳುವಳಿ ಮತ್ತೆ ಗರಿಗೆದರಿಕೊಂಡಿದೆ. ಏಪ್ರಿಲ್ ತಿಂಗಳಲ್ಲಿ ಕರ್ನಾಟಕ ಪ್ರಾಂತ ರೈತ ಸಂಘ ನರಗುಂದದಿಂದ ಬೆಂಗಳೂರುವರೆಗೆ ರೈತರ ಕಾಲ್ನಡಿಗೆ ಜಾಥಾ ಸಂಘಟಿಸಿ, ಕಳಸಾ–ಬಂಡೂರಿ ನಾಲಾ ಜೋಡಣೆಗೆ ಸರಕಾರವನ್ನು ಆಗ್ರಹಿಸಿತು. ಜುಲೈ ತಿಂಗಳಲ್ಲಿ ರೈತ ಸೇನಾ – ಕರ್ನಾಟಕ ಎಂಬ ಹೆಸರಿನ ಸ್ಥಳೀಯ ರೈತ ಸಂಘ ನರಗುಂದದಲ್ಲಿ ಸತ್ಯಾಗ್ರಹ ಪ್ರಾರಂಭಿಸಿತು. ಕೂಡಲಸಂಗಮದ ಜಯಮೃತ್ಯುಂಜಯ ಸ್ವಾಮೀಜಿ ಯಾದಿಯಾಗಿ ಹಲವಾರು ಮಠಾಧೀಶರ ದಂಡು ಚಳುವಳಿಗೆ ಹುರುಪು ನೀಡಿತು. ವರುಣನ ಮುನಿಸಿನಿಂದ ಕಂಗಾಲಾದ ರೈತರು ಸ್ವಯಂ ಸ್ಫೂರ್ತಿಯಿಂದ ಪಾಲ್ಗೊಳ್ಳಲು ಮುಂದಾದರು. ನವಲಗುಂದ – ಹುಬ್ಬಳ್ಳಿ – ಧಾರವಾಡ ನಗರಗಳಿಗೂ ಮಹದಾಯಿ ನೀರಿಗಾಗಿ ಚಳುವಳಿ ವಿಸ್ತರಿಸಿತು. ಇದರ ಮಧ್ಯೆ ರಾಜಕಾರಣಿಗಳು, ಹಾಲಿ, ಮಾಜಿ ಜನಪ್ರತಿನಿಧಿಗಳು ಮತಗಳಿಕೆ ಲೆಕ್ಕಾಚಾರದಲ್ಲಿ ಚಳುವಳಿಯನ್ನು ಬೆಂಬಲಿಸುವ ನೆಪದಲ್ಲಿ ಮೂಗುತೂರಿಸದೆ ಬಿಡಲಿಲ್ಲ. ಆಗಸ್ಟ್ ೨೩ರಂದು ಮುಖ್ಯಮಂತ್ರಿ ಸಿದ್ದರಾಮಯ್ಯನವರ ನೇತೃತ್ವದಲ್ಲಿ ಸರ್ವಪಕ್ಷಗಳ ಸಭೆ ನಡೆದು, ಮರುದಿವಸ ಅಂದರೆ ಆಗಸ್ಟ್ ೨೪ರಂದು ಪ್ರಧಾನ ಮಂತ್ರಿ ನರೇಂದ್ರ ಮೋದಿ ಅವರನ್ನು ಭೇಟಿಯಾಗಲು ಸರ್ವಪಕ್ಷಗಳ ನಿಯೋಗ ದೆಹಲಿಗೆ ತೆರಳಿತು. ಅದಕ್ಕೂ ಪೂರ್ವದಲ್ಲಿ ಮುಖ್ಯಮಂತ್ರಿ ಸಿದ್ದರಾಮಯ್ಯನವರು ಚಳುವಳಿನಿರತ ರೈತರೊಂದಿಗೆ ಗೃಹ ಕಛೇರಿ ಕೃಷ್ಣಾ ಹಾಗೂ ಕಾವೇರಿ ಗಳಲ್ಲಿ ಮಾತುಕತೆ ನಡೆಸಿ ಮಾಹಿತಿ ಪಡೆದರು.

ಆದರೆ ಸರ್ವಪಕ್ಷಗಳ ನಿಯೋಗ ದೆಹಲಿಯಿಂದ ಬರಿಗೈಲೇ ವಾಪಸಾಯಿತು. ಪ್ರಧಾನಿಯವರು ಸಕಾರಾತ್ಮಕವಾಗಿ ಮಾತನಾಡಲಿಲ್ಲ ಎಂದು ಆಡಳಿತ ಪಕ್ಷದವರು ದೂರಿದರೆ, ಪ್ರಶ್ನೆಗೆ ಶಾಶ್ವತ ಪರಿಹಾರ ಕಂಡುಹಿಡಿಯಲು ಪ್ರಧಾನಿಗಳು ಉತ್ಸುಕರಾಗಿದ್ದರು, ಆದರೆ ಮುಖ್ಯಮಂತ್ರಿಗಳದ್ದೇ ತಪ್ಪು ಎನ್ನುವಂತೆ ಬಿಜೆಪಿ ಮುಖಂಡರು ಪ್ರತ್ಯಾರೋಪ ಮಾಡಹತ್ತಿದರು. ಇವರ ಆರೋಪ–ಪ್ರತ್ಯಾರೋಪಗಳ ನಡುವೆ ನಲುಗಿದ್ದು ಮಹದಾಯಿ ನೀರಿನ ಪ್ರಶ್ನೆ. ದೆಹಲಿಯ ವಿದ್ಯಮಾನಗಳು ಮಾಧ್ಯಮಗಳಲ್ಲಿ ಪ್ರಕಟವಾಗುತ್ತಿದ್ದಂತೆ ಕರ್ನಾಟಕದಲ್ಲಿ ಜನರ ಅಸಮಾಧಾನ ಎಲ್ಲೆ ಮೀರಹತ್ತಿತು. ಜನರು ಆಕ್ರೋಶಭರಿತರಾದರು. ಚಳುವಳಿಗಾರರ ದೃಷ್ಟಿ ಬಿಜೆಪಿಯವರ ಕಡೆಗೆ ತಿರುಗಿತು. ಹಾಲಿ–ಮಾಜಿ ಜನಪ್ರತಿನಿಧಿಗಳ ಮನೆಗಳ ಮೇಲೆ ಕಲ್ಲು ಬಿದ್ದವು. ಪ್ರತಿಭಟನೆಗಳು ನಗರ–ಗ್ರಾಮಗಳಿಗೂ ಹಬ್ಬಿದವು. 'ಬಂದ್'ಗಳು ಸಾಮಾನ್ಯವಾದವು. ಜನರ ಆಕ್ರೋಶಕ್ಕೆ ನೂರಾರು ಟೈರುಗಳು ಉರಿದವು. ಜನಜೀವನ ಅಸ್ತವ್ಯಸ್ತವಾಯಿತು. ವ್ಯಾಪಾರ–ವಹಿವಾಟುಗಳು ಸ್ಥಗಿತ ಗೊಂಡವು. ಮಹದಾಯಿ ಪ್ರಶ್ನೆಯ ಹೋರಾಟ ಫಲಾನುಭವಿಗಳಲ್ಲದ ಶಿವಮೊಗ್ಗ, ಬೆಂಗಳೂರು ಜಿಲ್ಲೆಗಳಿಗೂ ವಿಸ್ತರಣೆಯಾಗಿದ್ದು ವಿಶೇಷ. ಅವರಿವರೆನ್ನದೆ ಎಲ್ಲ ಜನಸಮುದಾಯಗಳು ತಮ್ಮ ಪಾಲಿನ ಕರ್ತವ್ಯ ಎನ್ನುವಂತೆ ಪ್ರತಿಭಟನೆಯಲ್ಲಿ ಪಾಲ್ಗೊಂಡವು. ಕಾಂಗ್ರೆಸ್ ಮತ್ತು ಬಿಜೆಪಿ ಪಕ್ಷಗಳ ಜನರೂ ಇದೇ ವಿಷಯವಾಗಿ ಪಾದಯಾತ್ರೆ, ಪ್ರತಿಭಟನೆ, ರ್‍ಯಾಲಿ ನಡೆಸುತ್ತಿರುವುದು ಜನರನ್ನು ತಬ್ಬಿಬ್ಬುಗೊಳಿಸಿದೆ. ಹಾಗಾದರೆ ತಪ್ಪು ಮಾಡಿದವರು ಯಾರು ? ಅದನ್ನು ಸರಿಪಡಿಸುವವರಾರು ? ಎಂಬುದು ಜನರ ಪ್ರಶ್ನೆ.

ರಾಜ್ಯ ಸರಕಾರವಾಗಲಿ ಕೇಂದ್ರ ಸರಕಾರವಾಗಲಿ ಚಳುವಳಿನಿರತ ಜನರನ್ನು ಕಂಡು ಮಾತನಾಡುವ ಸೌಜನ್ಯ ತೋರಿಲ್ಲ. ಬದಲಿಗೆ ರಾಜಕೀಯ ಪಕ್ಷಗಳು ಪರಸ್ಪರ ಕೆಸರು ಎರಚಾಟದಲ್ಲಿ ನಿರತವಾಗಿವೆ. ಚಳುವಳಿಯ ದಿಕ್ಕು ತಪ್ಪಿಸುವ ಕೆಲಸವಂತೂ ಖಂಡಿತ ನಡೆದಿದೆ.

ಮಾಧ್ಯಮಗಳು ಚಳುವಳಿಗೆ ಪೂರಕವಾಗಿ ಸುದ್ದಿ ಪ್ರಸಾರ ಮಾಡುತ್ತಿರುವುದರಿಂದಾಗಿ ಹಲವಾರು ಸಂಘಟನೆಗಳು ಸ್ವಯಂಪ್ರೇರಿತವಾಗಿ ಚಳುವಳಿಗೆ ಇಳಿದಿವೆ. ನಾಲ್ಕು ಜಿಲ್ಲೆಗಳ ವ್ಯಾಪ್ತಿಯಲ್ಲಿ ನಡೆದಿರುವ ಈ ಚಳುವಳಿಗೆ ಕೇಂದ್ರೀಯ ನಾಯಕತ್ವವಿಲ್ಲ. ಆ ಕಾರಣಕ್ಕೇ ಚಳುವಳಿಗಾರರಲ್ಲಿ ಒಡಕುಂಟುಮಾಡುವ ಪ್ರಯತ್ನವನ್ನು ಕಾಂಗ್ರೆಸ್, ಬಿ.ಜೆ.ಪಿ.ಗಳು ಮಾಡುತ್ತಿವೆ. ಈ ಮಧ್ಯೆ ಚಿತ್ರರಂಗದವರೂ ಹುಬ್ಬಳ್ಳಿಯಲ್ಲಿ ರೋಡ್‌ಶೋ ನಡೆಸಿ ಚಳುವಳಿಗೆ ಗ್ಲಾಮರ್ ತಂದಿದ್ದಾರೆ. ಸುದೀಪ, ನೆನಪಿರಲಿ ಪ್ರೇಮ್, ಶ್ರೀನಗರ ಕಿಟ್ಟಿ, ಲೀಲಾವತಿ, ವಿನೋದ್‌ರಾಜ್‌ರಂಥವರು ಚಳುವಳಿಗಳು ತೀವ್ರವಾಗಿರುವ ನವಲಗುಂದ, ನರಗುಂದಕ್ಕೂ ಹೋಗಿಬಂದಿದ್ದಾರೆ. ಹುಬ್ಬಳ್ಳಿ–ಧಾರವಾಡಗಳಲ್ಲಿ ಪಾಟೀಲ ಪುಟ್ಟಪ್ಪನವರ ಅಧ್ಯಕ್ಷತೆಯಲ್ಲಿ ಕೇಂದ್ರ ಸಮಿತಿಯ ಪ್ರಯತ್ನವೂ ನಡೆದು ಸದ್ಯ ಸ್ಥಗಿತಗೊಂಡಿದೆ. ಸಿಪಿಐ, ಸಿಪಿಎಂ ರೈತ ಸಂಘಗಳ ನಾಯಕರೂ ಚಳುವಳಿ ಪ್ರದೇಶಕ್ಕೆ ಬಂದು ಬೆಂಬಲಿಸಿದ್ದಾರೆ. ಗೋಕಾಕ ಚಳುವಳಿಯ ಕೇಂದ್ರವಾಗಿದ್ದ ಧಾರವಾಡದ ವಿದ್ಯಾವರ್ಧಕ ಸಂಘ ಈ ಚಳುವಳಿಗೂ ಬೆಂಬಲ ಘೋಷಿಸಿದೆ. ರಾಜ್ಯದ ಬೇರೆ ಬೇರೆ ಭಾಗಗಳಿಂದಲೂ ಚಳುವಳಿಗೆ ಬೆಂಬಲ ವ್ಯಕ್ತವಾಗಿದೆ. ಆದರೆ ಈ ಎಲ್ಲ ಬೆಂಬಲವನ್ನು ಮೂಲ ಉದ್ದೇಶಕ್ಕೆ ಬಳಸಿಕೊಳ್ಳುವ ರೀತಿಯಲ್ಲಿ ಒಮ್ಮತದ ಕೇಂದ್ರೀಯ ಸಮಿತಿ ರೂಪಗೊಳ್ಳುತ್ತಿಲ್ಲ. ಬೆಂಬಲಕ್ಕೆ ಬಂದ ಎಲ್ಲ ಶಕ್ತಿಗಳನ್ನೂ ಬಳಸಿಕೊಂಡು ಒಂದು ಜನಾಂದೋಲನ ರೂಪಿಸುವ ನಿಟ್ಟಿನಲ್ಲಿ ಸ್ಥಳೀಯ ಹೋರಾಟಗಾರರು ತುರ್ತಾಗಿ ಯೋಚಿಸಬೇಕಿದೆ.

**ಬಿ. ಎಸ್. ಸೊಪ್ಪಿನ**
೧೩೭, ವಸಂತನಗರ, ಕೇಶ್ವಾಪೂರ
ಹುಬ್ಬಳ್ಳಿ – ೨೩

# ನಿರ್ಗಮಿಸಿದ 'ಮಹಾಮಾರ್ಗ'ದ ಪಥಿಕ
# ಡಾ॥ ಎಂ. ಎಂ. ಕಲಬುರ್ಗಿ



ಡಾ॥ ಸಿದ್ದನಗೌಡ ಪಾಟೀಲ

**''ಬಿತ್ತು ಬೆಳೆಯಿತ್ತು, ಕೆಯ್ಯ ಕೊಯ್ಯಿತ್ತು,**
**ಗೂಡು ಮುರಿಯಿತ್ತು, ಕುತ್ತರಿಯೊಟ್ಟಿತ್ತು,**
**ಒಕ್ಕಿತ್ತು ತೂರಿತ್ತು ಅಳೆಯಿತ್ತು, ಸಲಗೆ ತುಂಬಿತ್ತು**
**ಕೂಡಲಸಂಗಮ ದೇವಯ್ಯಾ,**
**ಮೇಟಿ ಕಿತ್ತಿತ್ತು, ಕಣ ಹಾಳಾಯಿತ್ತಯ್ಯಾ''**

ಬಸವಣ್ಣನವರ ಈ ವಚನವನ್ನು ಮತ್ತೆ ಮತ್ತೆ ಹೇಳಬೇಕಾದ ಸ್ಥಿತಿ ಬಂದಿದೆ. ಡಾ॥ ಎಂ. ಎಂ. ಕಲಬುರ್ಗಿಯವರು ನಾನು ಸಿಕ್ಕಾಗಲೆಲ್ಲ ಬಹುತೇಕ ಸಂದರ್ಭದಲ್ಲಿ ಈ ವಚನದಲ್ಲಿಯ 'ಮೇಟಿ ಕಿತ್ತಿತ್ತು, ಕಣ ಹಾಳಾಯಿತ್ತಯ್ಯಾ' ಎಂಬ ವಾಕ್ಯವನ್ನು ಹೇಳುತ್ತ, 'ಮತ್ತೆ ಮೇಟಿ ಕಟ್ಟಬೇಕು, ಕಣ ಮಾಡಬೇಕು' ಎಂದು ಹೇಳುತ್ತಲೇ 'ಅದನ್ನ ನೀವು (ಕಮ್ಯುನಿಷ್ಟರು) ಮಾಡಬೇಕು' ಅಂತ ನಗುತ್ತಿದ್ದರು. ವಚನ ಚಳುವಳಿಯ ಆಶಯಗಳನ್ನು ಪ್ರಸ್ತುತ ಸಂದರ್ಭಕ್ಕೆ ಅಳವಡಿಸಲು ತಮ್ಮ ಆಳವಾದ ಅಧ್ಯಯನ, ಬಿಡುವಿಲ್ಲದ ಸಂಶೋಧನೆಯ ಮೂಲಕ ಶ್ರಮಿಸಿ ಸಂಶೋಧನಾ ಕ್ಷೇತ್ರದಲ್ಲಿ 'ಮಹಾಮಾರ್ಗ' ನಿರ್ಮಿಸಿದ ಗುರು ಡಾ॥ ಎಂ. ಎಂ. ಕಲಬುರ್ಗಿ, ಸಮಾಜಘಾತುಕ ಶಕ್ತಿಗಳ ಪಿತೂರಿಗೆ ಬಲಿಯಾಗಿ ನಿರ್ಗಮಿಸಿದ್ದಾರೆ. ಆದರೆ ಅವರು ನಿರ್ಮಿಸಿದ 'ಮಹಾಮಾರ್ಗ' ಸಮಾಜಮುಖಿ, ಜನಮುಖಿ, ಚಿಂತಕರಿಗೆ ಮುಕ್ತವಾಗಿದೆ. ಒಂದು ಮೇಟಿಯನ್ನು ಕಿತ್ತಿದ್ದಾರೆ, ಸಾವಿರಾರು ಮೇಟಿಗಳು ಹುಟ್ಟಬೇಕಿದೆ.

'ಡಾ॥ ಎಂ. ಎಂ. ಕಲಬುರ್ಗಿಯವರ ಹತ್ಯೆ ಮತೀಯ ಶಕ್ತಿಗಳಿಂದಾಗಿದೆ' ಎಂದು ರಾಜ್ಯದ ಮುಖ್ಯಮಂತ್ರಿ ಶ್ರೀ ಸಿದ್ದರಾಮಯ್ಯನವರು ಹೇಳಿದ್ದಾರೆ. ಹತ್ಯೆಯ ತನಿಖಾತಂಡಗಳ ಅಭಿಪ್ರಾಯವನ್ನೇ ಮುಖ್ಯಮಂತ್ರಿಗಳು ಹೇಳಿದ್ದಾರೆ. ಇದೇ ರೀತಿ ಹತ್ಯೆಗೊಳಗಾದ ಮಹಾರಾಷ್ಟ್ರದ ನರೇಂದ್ರ ದಾಭೋಲ್ಕರ್ ಹಾಗೂ ಗೋವಿಂದ ಪಾನ್ಸರೆಯವರ ಹಂತಕರನ್ನು ಇನ್ನೂವರೆಗೆ ಗುರ್ತಿಸಲು ಸಾಧ್ಯವಾಗಿಲ್ಲ (ಪಾನ್ಸರೆ ಹತ್ಯೆಯ ಹಿನ್ನೆಲೆಯಲ್ಲಿ ಕೆಲವು ಶಂಕಿತ ಹಂತಕರನ್ನು ಬಂಧಿಸಿದ ವಾರ್ತೆಗಳು ಬಂದಿವೆ). ಇಂದು ಮಹಾರಾಷ್ಟ್ರದಲ್ಲಿ ಮತ್ತು ಕೇಂದ್ರದಲ್ಲಿ ಕೋಮುವಾದಿಗಳೇ ಅಧಿಕಾರದಲ್ಲಿರುವುದರಿಂದ ದಾಭೋಲ್ಕರ್ ಹಂತಕರು ಸಿಗುವುದು ಅನುಮಾನ. ಅದೇ ಮಾದರಿಯಲ್ಲಿ ಕರ್ನಾಟಕದಲ್ಲಿ ಡಾ॥ ಎಂ. ಎಂ. ಕಲಬುರ್ಗಿಯವರ ಹತ್ಯೆಯಾಗಿದೆ. ರಾಜ್ಯದ ತನಿಖಾತಂಡಗಳು ಇತರೆ ಕಾರಣಗಳನ್ನು ವಿಚಾರಣೆ ನಡೆಸಿ ಇದು ಮತೀಯ ಶಕ್ತಿಗಳ ಕೃತ್ಯ ಎಂಬ ತೀರ್ಮಾನಕ್ಕೆ ಬಂದಿವೆ. ಈ ಮೊದಲು ಇನ್ನೊಬ್ಬ ವಿಚಾರವಾದಿ ಲಿಂಗಣ್ಣ ಸತ್ಯಂಪೇಟ್ ಅವರ ಸಾವಿನ ಹಿನ್ನೆಲೆಯನ್ನು ಪತ್ತೆಹಚ್ಚುವಲ್ಲಿ ತನಿಖಾ ತಂಡಗಳು ವಿಫಲವಾಗಿವೆ. ದಾಭೋಲ್ಕರ್, ಕಲಬುರ್ಗಿಯವರ ಹತ್ಯೆಯ ಹಿಂದಿನ ವ್ಯಕ್ತಿಗಳ್ಯಾರು ಎಂಬುದು ಇನ್ನೂವರೆಗೂ ಗೊತ್ತಾಗಿಲ್ಲ. ಆದರೆ ಈ ಎಲ್ಲ ಹತ್ಯೆಗಳ ಹಿಂದಿನ ಶಕ್ತಿಗಳು ಯಾವುವು ಎಂಬುದು ಎಲ್ಲರಿಗೂ ಗೊತ್ತಾಗಿದೆ. ಮುಂದೊಂದು ದಿನ ತನಿಖಾ ತಂಡಗಳು ಕೈಚೆಲ್ಲಿ ಕೂರಬಹುದು, ಸರಕಾರಗಳೂ ಬದಲಾಗಬಹುದು. ಆದರೆ ಈ ಹತ್ಯೆಗಳು ಯಾವ ಶಕ್ತಿಗಳಿಂದ, ಯಾವ ಕಾರಣಕ್ಕಾಗಿ ನಡೆದಿವೆ ಎಂಬುದು ಗೊತ್ತಿರುವುದರಿಂದ, ವಿಚಾರವಾದ, ಅಭಿವ್ಯಕ್ತಿ ಸ್ವಾತಂತ್ರ್ಯ ಈ ಸಮಾಜದ ವಿಕಾಸದ ಮೂಲಭೂತ ಅವಶ್ಯಕತೆಗಳಾಗಿರುವುದರಿಂದ ಅವುಗಳ ರಕ್ಷಣೆಗೆ ಹಾಗೂ ಅವುಗಳ ಶತ್ರುಗಳಾದ ಮತೀಯವಾದ, ಮತೀಯವಾದಿಗಳ ನಿರ್ಮೂಲನೆಗಾಗಿ ಜನಜಾಗೃತಿಯನ್ನು, ಜನಾಂದೋಲನವನ್ನು ರೂಪಿಸುವ ಹೊಣೆಗಾರಿಕೆ ಪ್ರಜ್ಞಾವಂತ ಪ್ರಜೆಗಳ ಮೇಲಿದೆ. ಡಾ॥ ಎಂ. ಎಂ. ಕಲಬುರ್ಗಿಯವರ ಮಗ ಶ್ರೀವಿಜಯ ತನ್ನ ದುಃಖವನ್ನೆಲ್ಲ ಒತ್ತಿಟ್ಟುಕೊಂಡು 'ನನ್ನ ತಂದೆಯವರ ಹತ್ಯೆಗೆ ಅವರ ವಿಚಾರ ವಿರೋಧಿಗಳೇ ಕಾರಣ, ಇನ್ನೊಬ್ಬರಿಗೆ ನನ್ನ ತಂದೆಗಾದ ಸ್ಥಿತಿ ಬರಬಾರದು' ಎಂದು ಮಾಧ್ಯಮಗಳ ಮೂಲಕ ಸರಕಾರಕ್ಕೂ, ಸಮಾಜಕ್ಕೂ ಮಾಡಿಕೊಂಡ ಮನವಿ ಮಾರ್ಮಿಕವಾದದ್ದು. ಇತ್ತೀಚೆಗೆ ಸಾಹಿತಿಗಳು, ಚಿಂತಕರು, ಕಲಾವಿದರು, ಸಾಮಾಜಿಕ ಹೋರಾಟಗಾರರು, ಪ್ರಗತಿಪರ ಮಠಾಧಿಪತಿಗಳು ಮುಖ್ಯಮಂತ್ರಿ ಸಿದ್ದರಾಮಯ್ಯನವರಿಗೆ ಭೆಟ್ಟಿಯಾಗಿ ಕಲಬುರ್ಗಿಯವರ ಹಂತಕರನ್ನು ಶೀಘ್ರವಾಗಿ ಪತ್ತೆಮಾಡಿ ಶಿಕ್ಷೆಗೊಳಗಾಗುವಂತೆ ಮಾಡಬೇಕು ಎಂದು ಹೇಳುವುದರ ಜೊತೆಗೆ, ಮೂಢನಂಬಿಕೆಗಳನ್ನು ಪಸರಿಸುವ, ದುರುಪಯೋಗಪಡಿಸಿಕೊಳ್ಳುವ ಶಕ್ತಿಗಳನ್ನು ನಿಯಂತ್ರಿಸಲು ಕೂಡಲೇ ಕಾನೂನನ್ನು ತರಬೇಕೆಂದು ಒತ್ತಾಯಿಸಿದ್ದಾರೆ. ಈ ಮೊದಲು ಇಂಥ ಮಸೂದೆಯ ಪ್ರಸ್ತಾಪ ಬಂದಾಗ ಬಿ.ಜೆ.ಪಿ. ಮತ್ತು ಮತೀಯವಾದಿಗಳು ತೀವ್ರವಾಗಿ ವಿರೋಧ ವ್ಯಕ್ತಪಡಿಸಿದರು. ಮಾತ್ರವಲ್ಲ ಆಳುವ ಪಕ್ಷವಾದ ಕಾಂಗ್ರೆಸ್‌ನಲ್ಲಿಯೇ ಇರುವ ಹಲವು ನಾಯಕರು ಈ

ಮಸೂದೆಯನ್ನು ವಿರೋಧಿಸಿದರು. ರಾಜಕೀಯ ಲಾಭ ಹಾನಿಗಳ ಲೆಕ್ಕಾಚಾರದಿಂದ ಕೂಡಿದ ಈ ವಿರೋಧಗಳು ಒಂದು ಸಮಾಜದ ನೆಮ್ಮದಿಯನ್ನೇ ಹಾಳುಮಾಡುತ್ತಿವೆ. ಮಹಾರಾಷ್ಟ್ರದಲ್ಲಿ ನರೇಂದ್ರ ದಾಭೋಲ್ಕರ್ ಅವರ ಹತ್ಯೆಯ ನಂತರ ಅಂದಿನ ಕಾಂಗ್ರೆಸ್ ಸರಕಾರ ದಾಭೋಲ್ಕರ್ ಅವರ ಆಶಯದಂತೆ ಅಂಧಶ್ರದ್ಧೆ ನಿರ್ಮೂಲನೆಗಾಗಿ ಕಾನೂನು ತಂದಿತು. ಕರ್ನಾಟಕದ ಇಂದಿನ ಕಾಂಗ್ರೆಸ್ ಜಾತ್ಯತೀತ ನೀತಿಗಳ ಪರವಾಗಿದ್ದರೆ, ಡಾ॥ ಕಲಬುರ್ಗಿಯವರ ಕುರಿತು ಗೌರವ ವಿದ್ದರೆ ತಕ್ಷಣ ಎಲ್ಲ ವಿರೋಧಗಳನ್ನೂ ಮೀರಿ ಆ ಕಾನೂನನ್ನು ಜಾರಿಗೆ ತರಬೇಕು. ಇದು ಮತೀಯಶಕ್ತಿಗಳ ನಿರ್ಮೂಲನೆಗೆ ಒಂದು ಮಹತ್ವದ ಮಾರ್ಗವಾಗುತ್ತದೆ.

ಡಾ॥ ಕಲಬುರ್ಗಿಯವರ ಮೇಲೆ ಮೊದಲಬಾರಿಗೆ ಹಲ್ಲೆಯಾಗಿದ್ದು (೧೯೮೮) ಮೂಢನಂಬಿಕೆಗಳ ವಿರುದ್ಧ ಅವರು ನಡೆಸಿದ ಸಂಶೋಧನೆಯಿಂದಾಗಿಯೇ ಎಂಬುದನ್ನು ಸರಕಾರ ಗಮನಿಸಬೇಕು. ಡಾ॥ ಎಂ. ಎಂ. ಕಲಬುರ್ಗಿಯವರು 'ಮಾರ್ಗ' ಎಂಬ ತಮ್ಮ ಸಂಶೋಧನಾ ಲೇಖನಗಳ ಕೃತಿಯಲ್ಲಿ ಪ್ರಸಾದದಿಂದ ಮಕ್ಕಳಾಗುವುದಿಲ್ಲ ಎಂಬುದನ್ನು ಚೆನ್ನಬಸವಣ್ಣನ ಹುಟ್ಟಿನ ಹಿನ್ನೆಲೆಯಲ್ಲಿ ಪ್ರತಿಪಾದಿಸಿದ್ದರು. ಚೆನ್ನಬಸವಣ್ಣ ಹನ್ನೆರಡನೇ ಶತಮಾನದ ಒಬ್ಬ ತೀವ್ರವಾದಿ ವಚನಕಾರ. ಚೆನ್ನಬಸವಣ್ಣನವರ ತಂದೆ ಯಾರು ಎನ್ನುವುದಕ್ಕಿಂತ ಅವರು ಏನು ಹೇಳಿದರು ಎನ್ನುವುದು ಇಂದು ಮುಖ್ಯ. ಕಲಬುರ್ಗಿಯವರ ವಿಚಾರಗಳನ್ನು ಒಪ್ಪುವುದು ಬಿಡುವುದು ಓದುಗರಿಗೆ ಬಿಟ್ಟದ್ದು. ಆದರೆ ನೀನು ಹೀಗೆ ಹೇಳಲೇಬಾರದು ಅಥವಾ ಹೀಗೇ ಹೇಳಬೇಕು, ನಾವು ಹೇಳುವುದನ್ನೇ ನೀನೂ ಹೇಳಬೇಕು, ಬರೆಯಬೇಕು ಎನ್ನುವುದು ಫ್ಯಾಸಿಸಂ ಆಗುತ್ತದೆ. ಆದರೆ ಅಂದಿನ ವಿವಾದದಲ್ಲಿ ಪ್ರಸಾದದಿಂದ ಮಕ್ಕಳಾಗುವುದಿಲ್ಲ ಎಂದು ಡಾ॥ ಕಲಬುರ್ಗಿಯವರು ವಾದಿಸಿದ ವಾದವನ್ನು ಇಂದಿಗೂ ಪ್ರತಿಪಾದಿಸಬೇಕಿದೆ. ಯಾಕೆಂದರೆ ನಾವು ಎಷ್ಟೇ ವೈಜ್ಞಾನಿಕವಾಗಿ ಮುಂದುವರೆದರೂ ಪ್ರಸಾದದ ಮೂಲಕ, ಮಂತ್ರ, ತಂತ್ರಗಳ ಮೂಲಕ, ಆಶೀರ್ವಾದದ ಮೂಲಕ ಸಂತಾನಭಾಗ್ಯ ಕರುಣಿಸುತ್ತೇವೆನ್ನುವ ಬುರುಡಿ ಬಾಬಾಗಳು, ದೇವಮಾನವರು ಸಮಾಜದಲ್ಲಿ, ಮಾಧ್ಯಮ ಗಳಲ್ಲಿ ರಾರಾಜಿಸುತ್ತಿದ್ದಾರೆ. ದಾರ, ತಾಯತಗಳ ಮೂಲಕ, ಅಮಾನುಷ ಆಚರಣೆಗಳ ಮೂಲಕ ಮಾರಕ ರೋಗಗಳನ್ನು, ಎಲ್ಲ ರೋಗಗಳನ್ನು ನಿವಾರಿಸುತ್ತೇವೆ ಎನ್ನುವ ದೇವರುಗಳ ಮುಖವಾಡ ಧರಿಸಿರುವ

## ಹೀಗಿದ್ದರು ಕಲಬುರ್ಗಿ ಮಾಮಾ

ಶಿಸ್ತಿಗೆ, ಅಧ್ಯಯನಕ್ಕೆ, ಸಮಯ ಪರಿಪಾಲನೆಗೆ ಇನ್ನೊಂದು ಹೆಸರು ಡಾ॥ ಎಂ. ಎಂ. ಕಲಬುರ್ಗಿ. ಅದನ್ನು ಅವರು ತಮ್ಮ ವಿದ್ಯಾರ್ಥಿ ಗಳಿಂದಲೂ ನಿರೀಕ್ಷಿಸುತ್ತಿದ್ದರು. ೧೯೮೦ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನಾನು ಅವರ ವಿದ್ಯಾರ್ಥಿ. ಸಂಶೋಧನಾ ಶಾಸ್ತ್ರವನ್ನು ಪಾಠ ಮಾಡುತ್ತಿದ್ದರು. ಯಾವಾಗಲೂ ಯುದ್ಧಕ್ಕೆ ಹೊರಟ ಕುದುರೆಯಂತೆ ಇರುತ್ತಿದ್ದ ಅವರನ್ನು ನೋಡಿದರೆ ವಿದ್ಯಾರ್ಥಿಗಳಿಗೆ ಪ್ರೀತಿ ತುಂಬಿದ ಭಯ. ಅದನ್ನು ಭಯ ಎನ್ನುವುದಕ್ಕಿಂತಲೂ ಪಾಂಡಿತ್ಯಪೂರ್ಣ ವ್ಯಕ್ತಿತ್ವಕ್ಕೆ ತೋರುವ ವಿನಯ ಎಂದೇ ಹೇಳಬೇಕು. ನಾವೆಲ್ಲಾ ಅವರನ್ನು ಪ್ರೀತಿಯಿಂದ ಕಲಬುರ್ಗಿ ಮಾಮಾ ಎಂದೇ ಕರೆಯುತ್ತಿದ್ದೆವು. ಮಾಮಾ ಎಂದರೆ ಅವರು ಎಂ. ಎಂ. ಎಂಬ ಇನೀಶಿಯಲ್ ಹೊಂದಿರುವುದಲ್ಲದೆ ಪ್ರೀತಿಯಿಂದ ವಿದ್ಯಾರ್ಥಿಗಳಿಗೆ ಕಿವಿ ಹಿಂಡಿ, ಬೆನ್ನಿಗೆ ಗುದ್ದುತ್ತಿದ್ದರು. ಬಹುಶಃ ಅವರ ಕೈಯಿಂದ ಹೆಚ್ಚು ಕಿವಿ ಹಿಂಡಿಸಿಕೊಂಡು, ಬೆನ್ನಿಗೆ ಗುದ್ದಿಸಿಕೊಂಡವನು ನಾನು. ಕ್ರಿಯಾಶೀಲ ವಿದ್ಯಾರ್ಥಿಗಳೆಂದರೆ ಅವರಿಗೆ ಪ್ರೀತಿ. ಎರಡೇ ಶಬ್ದಗಳಲ್ಲಿ ಎದುರಿಗಿರುವ ವ್ಯಕ್ತಿಯನ್ನು ಆತ್ಮೀಯ ಸಂಬೋಧನೆಯ ಮೂಲಕ ಸೆಳೆದುಬಿಡುವ ಶಕ್ತಿ ಅವರಿಗಿತ್ತು. ಅವರ ಪಾಂಡಿತ್ಯ, ವ್ಯಕ್ತಿತ್ವ, ನಗು, ಪ್ರೀತಿ ತುಂಬಿದ ನೋಟಗಳಿಂದಾಗಿ ನಾನು, ನನ್ನಂಥ ಸಾವಿರಾರು ವಿದ್ಯಾರ್ಥಿಗಳು ಆತ್ಮವಿಶ್ವಾಸದಿಂದ, ಕೀಳರಿಮೆಯನ್ನು ತೊರೆದು ಅವರೊಡನೆ ಬೆರೆಯಲು ಸಾಧ್ಯವಾಗಿತ್ತು.



ನಾನು ಅವರ ಉಡಾಳ ವಿದ್ಯಾರ್ಥಿ. ಆಗಲೇ ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್ ರಾಜ್ಯ ಪದಾಧಿಕಾರಿಯಾಗಿದ್ದೆ. ವಿಶ್ವವಿದ್ಯಾಲಯದಲ್ಲಿ ಯಾವಾಗಲೂ ಚಳುವಳಿ, ಹೋರಾಟ ನಡೆದಾಗ ಕ್ಲಾಸಿಗೆ ಗೈರುಹಾಜರು. ದಾರಿಯಲ್ಲಿ ಕಲಬುರ್ಗಿ ಗುರುಗಳು ಸಿಗುತ್ತಿದ್ದರು. 'ಬರೀ ಇದನ್ನ ಮಾಡು, ಕ್ಲಾಸಿಗ್ಯಾರು ಕುಂದ್ರಬೇಕು' ಅಂದು ಕಿವಿಹಿಡಿದು, ಬೆನ್ನಿಗೆ ಗುದ್ದಿ ಅಷ್ಟೇ ವೇಗದಿಂದ ಮುಂದೆ ಹೋಗುತ್ತಿದ್ದರು. ಅವರು ನನ್ನ ಮೇಲೆ ಉಡಾಳ ವಿದ್ಯಾರ್ಥಿ ಎಂದೇ ಹಕ್ಕು, ಪ್ರೀತಿ ಸ್ಥಾಪಿಸಿದ್ದರು. ಧಾರವಾಡದಲ್ಲಿ ಗೋಕಾಕ ಚಳುವಳಿ ನಡೆದಿತ್ತು. ಕಲಬುರ್ಗಿಯವರೂ ಅದರಲ್ಲಿ ನಿರಂತರವಾಗಿ ತೊಡಗಿಕೊಂಡು ನಾಯಕತ್ವ ವಹಿಸಿ ಕೊಂಡಿದ್ದರು. ವಿದ್ಯಾವರ್ಧಕ ಸಂಘದ ಮುಂದೆ ಧರಣಿ ಕುಳಿತಾಗ ನಾನು ಕೇಳಿದೆ 'ಸರ್ ಇಲ್ಲಿ ಬಂದು ಕುಂತ್ರೆಲ್ರಿ, ಅಲ್ಲಿ ಕ್ಲಾಸ್ ಯಾರ ತೊಗೋಬೇಕು' ಎಂದು ನಕ್ಕೆ. 'ಮುಯ್ಯಿ ಮುಯ್ಯಿ ತೀರಸ್ಕೋತೀ' ಅಂತ ನಕ್ಕು ಕಿವಿ ಹಿಡಿದು ಬೆನ್ನಿಗೆ ಗುದ್ದಿದರು. ಅವರು ಕೊನೇ ಬಾರಿ ಅಂದ್ರೆ ಕಳೆದ ವರ್ಷ ಬೆಂಗಳೂರಿನ ಶರಣ ಸಾಹಿತ್ಯ ಪರಿಷತ್ತಿನ ಸಮ್ಮೇಳನದಲ್ಲಿ ನಾನು 'ಕಾಯಕ ಮತ್ತು ದಾಸೋಹ ಪರಿಕಲ್ಪನೆ' ಕುರಿತು ಮಾತನಾಡಿ ವೇದಿಕೆಯಿಂದ ಕೆಳಗೆ ಬಂದಾಗ ಹುಡುಕಿಕೊಂಡು ಬಂದು ಬೆನ್ನಿಗೆ ಗುದ್ದಿ ಕಿವಿ ಹಿಂಡಿದರು. ಇದು ಉಡಾಳ ಶಿಷ್ಯನಿಗೆ ಆ ಉದಾತ್ತಗುರು ನೀಡುತ್ತಿದ್ದ ಪ್ರೀತಿ. ನನ್ನನ್ನು ಯಾವುದಾದರೂ ಕಾಲೇಜಿಗೋ, ವಿಶ್ವವಿದ್ಯಾಲಯಕ್ಕೋ ಸೇರಿಸಬೇಕು ಎಂಬುದು ಅವರ ಆಸೆಯಾಗಿತ್ತು. ಸಾಕಷ್ಟು ಸಲ ಹೇಳಿದರು : 'ನೀ ಹಿಂಗ ಹಾಳಾಗ್ತಿ, ನಾ ಹೇಳ್ತೀನಿ ಕೇಳು' ಅಂತ. ಅವರ ಆಸೆ ನೆರವೇರಲಿಲ್ಲ. 'ಮಹಾಮಾರ್ಗ' ಕಲಬುರ್ಗಿಯವರ ಅಭಿನಂದನ ಗ್ರಂಥ. ಬಿಡುಗಡೆಯ ಸಮಾರಂಭ ಧಾರವಾಡದ ಕಲಾಭವನದಲ್ಲಿ ನಡೆದಿತ್ತು. ಸಮಾರಂಭ ಮುಗಿದ ಮೇಲೆ ಜನ ಅವರನ್ನು ಮುತ್ತಿಕೊಂಡರು. ಅವರು ಹೊರಬರಲಿ ಅಂತ ನಾನು ಗೆಳೆಯರೊಡನೆ ಕಲಾಭವನದ ಮೆಟ್ಟಿಲ ಮೇಲೆ ಕುಳಿತೆ. ಹೊರಬಂದವರು 'ಏ ಇಲ್ಲ್ಯಾಕ ಕುಂತಿ' ಅಂದ್ರು. 'ಸರ್, ನಾನು ಮಹಾಮಾರ್ಗದ ಕಾಡುಗಲ್ಲು' ಎಂದೆ. ನಕ್ಕು 'ಖರೇನ ನೀ ಕಾಡಗಲ್ಲು. ನಿನ್ನ ಬದ್ಲೀ ಮಾಡಾಕ ಆಗಲಿಲ್ಲ ನನಗ. ನೀ ಹೀಂಗ ಇರು ಅದs ಚೆಂದ' ಅಂತ ಹೇಳಿಹೋದರು. ಅವರು ಹಂಪಿ ವಿಶ್ವವಿದ್ಯಾಲಯ ಕುಲಪತಿ ಗಳಾದ್ರು. ಬೆಳಿಗ್ಗೆ ಪೇಪರಿನ್ಯಾಗ ನೋಡಿದ್ವಿ. ಡಾ॥ ಬಾಳಣ್ಣ ಶೀಗಿಹಳ್ಳಿ, ಶಿವಾನಂದ ಶೆಟ್ಟರ ಬೆಳಿಗ್ಗೆ ಸಿಕ್ರು. ಮನೀಗೆ ಹೋಗಿ ಅಭಿನಂದಿಸಿ ಬರೂನು ಅಂದ್ರು. ಹೋದ್ವಿ. ಆಗ್ಲೇ ಬೇರೆ ಜನಾ ಬಂದಿದ್ರು. ಸ್ವಲ್ಪ ಹೊತ್ತು

ಆದಮ್ಯಾಲ ನೋಡಿ 'ಒಳಗ ಬರ್ರ್ಯೋ' ಅಂದ್ರು. ಹೋಗಿ ಅವರ ಎದುರುಗಡೆ ಕಾಟ್ ಮ್ಯಾಲ ಕೂತ್ವಿ. ಇನ್ನೇನು ನಾವು ಅಭಿನಂದನೆ ಹೇಳಬೇಕು ಅನ್ನೋದ್ರಾಗ ಅವ್ರಿಗೆ ಫೋನ್ ಬಂತು. ಅಭಿನಂದನೆ ಹೇಳ್ತಿದ್ರು ಆ ಕಡೆಯಿಂದ. ಇವರು ಉತ್ತರಿಸಿ ಫೋನ್ ಇಟ್ರು, ಮತ್ತ ನಮ್ಮ ಜೊತೆ ಮಾತನಾಡಬೇಕು ಅನ್ನೋದ್ರಾಗ ಮತ್ತ ಫೋನು, ಮತ್ತೆ ಇವರ ಮಾತು. ಹಿಂಗ ನಾಲ್ಕೈದು ಸರಿ ಆತು. ಅವರು ಫೋನ್ ಇಟ್ಟ ತಕ್ಷಣ ನಾನು ಹೇಳಿದೆ 'ಸರ್ ನಾನು ಹೊರಗ ಹೋಗಿ ನಿಮಗ ಫೋನ್ ಮಾಡ್ತೀನಿ ಬಿಡ್ರಿ' ಅಂದೆ. ಜೋರಾಗಿ ನಕ್ರು. ಅಷ್ಟೇ ಜೋರಾಗಿ ಗುದ್ದಿದ್ರು. ಉಡಾಳಾ ಅಂತ ಬೈದು 'ನೀನಂದ್ರ ನನಗ ಪ್ರೀತಿ. ತಾಯಿಗಿ ನೌಕ್ರಿ ಮಾಡು ಮಕ್ಕಳಿಗಿಂತ ಉಡಾಳ ಮಕ್ಕಳ ಮ್ಯಾಲ ಪ್ರೀತಿ ಜಾಸ್ತಿ ಇರ್ತದ' ಅಂದ್ರು. ವಿದ್ಯಾರ್ಥಿಗಳನ್ನ ಮಕ್ಕಳ ರೀತಿ, ಸ್ನೇಹಿತರ ರೀತಿ ಕಂಡ ಆ ಕಲಬುರ್ಗಿ ಮಾಮಾ ನಿವೃತ್ತಿ ಯಾಗದ ಗುರುವಾಗಿದ್ದರು. ಗುರುವಾದವನು ಸಾಯೂತನಕ ವಿದ್ಯಾರ್ಥಿಯಾಗಿರಬೇಕಾಗ್ತದ. ಅಂಥಾ ವಿದ್ಯಾರ್ಥಿ ಅವರಾಗಿದ್ರು. ಬೆಲ್ಲ ಎಲ್ಲ ಕಡೆ ಯಿಂದಲೂ ಸಿಹಿಯಾಗಿರುವಂತೆ ಗುರುಗಳಾಗಿ ಅವರು ಹಾಗೇ ಇದ್ದರು. ಆದರೆ ಚಿಂತನೆ, ಚರ್ಚೆಯ ವಿಷಯಕ್ಕೆ ಬಂದರೆ ಅವರೊಬ್ಬ ಶಿಕ್ಷಕರಾಗಿ, ಸಂಶೋಧಕರಾಗಿ ನಿಖರವಾಗಿ ವಾದಿಸುತ್ತಿದ್ದರು. ವಿಚಾರವನ್ನು ವಿರೋಧಿಸುತ್ತಲೇ ವ್ಯಕ್ತಿಯನ್ನು ಪ್ರೀತಿಸುವ ಗುಣವನ್ನು ನನಗೆ ಕಲಿಸಿದವರು ಅವರು. ಕಳೆದ ಮೇ ೨೬ರಂದು ಧಾರವಾಡದ ಗುಬ್ಬಚ್ಚಿ ಗೂಡು ಕಾರ್ಯಕ್ರಮದಲ್ಲಿ ಅವರೊಡನೆ ನಾನೂ ವೇದಿಕೆ ಹಂಚಿಕೊಂಡಿದ್ದೆ. ಸುಸ್ತಾಗಿದ್ದರು. ಕಾರ್ಯಕ್ರಮ ಆರಂಭಕ್ಕೆ ಇನ್ನೂ ಸಮಯ ಇತ್ತು. 'ಸರ್ ಬಸವಣ್ಣ ಮತ್ತು ವಚನಕಾರರು ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ, ಸಾಮಾಜಿಕ, ಆಚರಣೆ, ಚಿಂತನೆಗಳಲ್ಲಿ ಪರ್ಯಾಯ ತಂದ್ರು. ಆದರ ರಾಜಕೀಯ ಪರ್ಯಾಯ ತರಲಿಲ್ಲ' ಎಂದೆ. 'ರಾಜಕೀಯ ಅವರ ಉದ್ದೇಶ ಆಗಿರಲಿಲ್ಲ. ಧಾರ್ಮಿಕ, ಸಾಮಾಜಿಕ, ಆರ್ಥಿಕ ಬದಲಾವಣೆ ಅವರ ಗುರಿ ಆಗಿತ್ತು. ಇದರ ಬಗ್ಗೆ ಮಾತಾಡೂನು ಮನೀಗಿ ಬಾ' ಅಂದ್ರು. 'ಇನ್ನೊಂದಸಲಾ ಬರ್ತೀನ್ರಿ' ಅಂದೆ. ಮತ್ತೊಮ್ಮೆ ಅವರ ಅಂತ್ಯಸಂಸ್ಕಾರಕ್ಕೆ ಹೋಗ್ಬೇಕಾಯಿತು. ಕಣ್ಣ ಮುಂದೆ ಅವರ ಶವ ನೋಡಿದ್ದೇನೆ, ಅಂತ್ಯಕ್ರಿಯೆ ನೋಡಿದ್ದೇನೆ. ಆದರೆ ಅವರು ನಿಧನರಾದರು ಅನಿಸುತ್ತಿಲ್ಲ. ಅವರ ನಿರಂತರ ಅಧ್ಯಯನ, ಕ್ರಿಯಾಶೀಲತೆ ನೋಡಿದವರಿಗೆ, ಆ ನಗು, ಪ್ರೀತಿ, ವಾತ್ಸಲ್ಯ ಅನುಭವಿಸಿದವರಿಗೆ, ಅವರನ್ನು ಬಲ್ಲ ಎಲ್ಲರಿಗೂ ಹೀಗೆ ಅನಿಸುತ್ತದೇನೋ.

ಧಾರವಾಡದಲ್ಲಿ ಕಲಬುರ್ಗಿಯವರ ಹತ್ಯೆಯನ್ನು ವಿರೋಧಿಸಿ ನಡೆದ ಪ್ರತಿಭಟನೆ ಮುಗಿದ ನಂತರ ರಾಜ್ಯದ ಬೇರೆ ಬೇರೆ ಕಡೆಯಿಂದ ಬಂದ ಚಿಂತಕರ ಸಭೆಯಲ್ಲಿ ಕಲಬುರ್ಗಿಯವರ ಹತ್ಯೆಯನ್ನು ವಿರೋಧಿಸಿ ಹೋರಾಟ ಮುಂದುವರೆಸಲು ಒಂದು ವೇದಿಕೆ ಮಾಡಬೇಕು ಎಂಬ ಪ್ರಸ್ತಾಪ ಬಂದಿತು. ಆಗ ವಿಚಾರವಾದಿಗಳ ವೇದಿಕೆ, ಅಭಿವ್ಯಕ್ತಿ ಸ್ವಾತಂತ್ರ್ಯ ವೇದಿಕೆ ಹೀಗೆ ಕೆಲವು ಹೆಸರು ಬಂದಾಗ ನನ್ನ ಪಕ್ಕದಲ್ಲಿ ಕುಳಿತವರೊಬ್ಬರು ತೀವ್ರ ಆತಂಕದಿಂದ ಕೇಳಿದರು "ಸರ್ ನಾನು ಸಾಹಿತಿ ಅಲ್ಲ. ಕಲಬುರ್ಗಿಯವರ ಅಭಿಮಾನಿ. ನಮ್ಮಂಥವರೂ ಬರಬೇಕು ಅಂಥಾ ವೇದಿಕೆ ಮಾಡ್ರಿ" ಅಂದರು. ಹಾಗಂದವರು ಧಾರವಾಡದ ಅಂಕಿತ ಹೊಟೇಲ್ ಮಾಲೀಕ ರಾಜು ಮರಳಪ್ಪನವರ ಅವರು. ಇಂಥ ಸಾವಿರಾರು ಜನ ಅಂದಿನ ಪ್ರತಿಭಟನಾ ಸಭೆಯಲ್ಲಿ ಭಾಗವಹಿಸಿದ್ದರು. ಡಾ॥ ಕಲಬುರ್ಗಿಯವರು ತಮ್ಮ ಸಂಪರ್ಕಕ್ಕೆ ಬಂದವರಿಗೆಲ್ಲ ಒಬ್ಬ ಆದರ್ಶವ್ಯಕ್ತಿ ಯಾಗಿದ್ದರು. ಡಾ॥ ಕಲಬುರ್ಗಿಯವರ ದೈಹಿಕ ಹತ್ಯೆಯಾಗಿರಬಹುದು. ಅವರ ಚಿಂತನೆಗಳು ಅವರ ಶಿಷ್ಯರನ್ನು ಸಮಾಜವನ್ನು ಸದಾ ಎಚ್ಚರಗೊಳಿಸುತ್ತವೆ. ಎಚ್ಚರಗೊಳಿಸಲಿ.

## ಡಾ॥ ಕಲಬುರ್ಗಿಯವರ ಪತ್ರ

ದೂರವಾಣಿ : ೮೧೯೦ ರಿಂದ ೮೧೯೯ Phone : 8190 to 8199

ಕರ್ನಾಟಕ  ವಿಶ್ವವಿದ್ಯಾಲಯ
KARNATAK UNIVERSITY

ಧಾರವಾಡ - ೫೮೦ ೦೦೩
Dharwad-580 003

ಕನ್ನಡ ಅಧ್ಯಯನಪೀಠ.

Ref. No.:
ಆ. ಸಂ.

Date:
ದಿನಾಂಕ : 24-10-1985

ಪ್ರಿಯ ಸಿದ್ಧನಗೌಡ
ವಂದನೆಗಳು.

ಒಂದು ಕೈಯಿಂದ ನಿಮ್ಮ ಪತ್ರ ಸ್ವೀಕರಿಸಿ, ಇನ್ನೊಂದು ಕೈಯಿಂದ ಉತ್ತರಿಸುತ್ತಿದ್ದೇನೆ. ಇಷ್ಟು ಆತುರ ನನಗೆ.

ಒಂದು ಮಾತು: ನನ್ನ ಹತ್ತಿರ ನೀವು ಬಂದು ಹೋದ ದಿನ ನನಗೆ ನಿದ್ರೆ ಹತ್ತಲಿಲ್ಲ. ಇಷ್ಟು ವರ್ಷ ನನ್ನ ಸಂಪರ್ಕಕ್ಕೆ ಬಂದ ನೀವು ನನಗೆ ಒಮ್ಮೆಯೂ ಹಣ ಕೇಳಿರಲಿಲ್ಲ. ಅಗತ್ಯವಿದ್ದ ಸಂದರ್ಭದಲ್ಲಿ ನಾನು ಸುದಾಮನ ಸ್ಥಿತಿಯಲ್ಲಿದ್ದೆ. ಈ ಸಂಗತಿ ನೆನಪಾದಾಗಲೆಲ್ಲ ಈಗಲೂ ನೊಂದುಕೊಳ್ಳುತ್ತೇನೆ.

ನೀವು ತುಂಬಾ ಸಾಹಸಿಯೆಂದು ಬೇರೆ ಹೇಳಬೇಕಿಲ್ಲ. ಆದರೆ ಆರೋಗ್ಯವನ್ನು ಉಪೇಕ್ಷಿಸಿ ಮಾಡುವ ಸಾಹಸ ಅಪಾಯಕಾರಿ. ಧಾರವಾಡದಲ್ಲಿಯೇ ಈ ಮಾತನ್ನು ಅನೇಕ ಸಲ ಹೇಳಿದ್ದೇನೆ. ಈಗಲೂ ಹೇಳುತ್ತೇನೆ.

ನಿಮ್ಮ ಪತ್ರದಲ್ಲಿ ಅಲ್ಲಿಯ ಬದುಕನ್ನು ಕಣ್ಣಿಗೆ ಕಟ್ಟುವಂತೆ ಬರೆದಿರುವಿ, ಸಮಾಜವನ್ನು ವಿಶ್ಲೇಷಿಸಿರುವಿ. ಆದರೆ ಸಮಾಜದ ಆಳಕ್ಕೆ ಇಳಿದು ನೋಡಿದರೆ ಅವರ ಮನೆಯ ದೋಷ ನಮ್ಮಲ್ಲಿಯೂ ತಮಾತು ಕಾಣಬಹುದು. ಬಹುಶಃ ನಮಗಿಂತ ತಮಾತು ಕಡಿಮೆ ಇರಬಹುದು, ಅಷ್ಟೇ. ಇರಲಿ. ನಿಮ್ಮ ಅಧ್ಯಯನ ವಾಸ್ತವವಾಗಿರಲಿ; ನಿರ್ಲಿಪ್ತದೃಷ್ಟಿಯದಾಗಿರಲೆಂದು ಹಾರೈಸುತ್ತೇನೆ. ನಮ್ಮ ಸಂಸ್ಥೆ ಯಥಾ ಪ್ರಕಾರ.

" ಉತ್ತಮ ಪಠ್ಯಕ್ರಮ, ಉತ್ತಮ ಶಿಕ್ಷಕವರ್ಗ, ಉತ್ತಮ ಮೌಲ್ಯಮಾಪನ " – ಇವು ನಮ್ಮ ವಿದ್ಯಾರ್ಥಿಗಳ ಘೋಷಣೆಗಳಾಗದ ಹೊರತು ನಾವು ಸುಧಾರಿಸುವದಿಲ್ಲ; ನಮ್ಮ ಶಿಕ್ಷಣ ಸಂಸ್ಥೆಗಳು ಸುಧಾರಿಸುವದಿಲ್ಲ.

ಮತ್ತೆ ಬರೆಯಬೇಕು.

ವಂದನೆಗಳು.

ತಮ್ಮ,
(ಎಂ.ಎಂ. ಕಲಬುರ್ಗಿ)
ಪ್ರಾಧ್ಯಾಪಕರು.

*೧೯೮೫ರಲ್ಲಿ ಚಳುವಳಿಯೊಂದರ ಹಣ ಸಂಗ್ರಹಕ್ಕಾಗಿ ಡಾ॥ ಎಂ. ಎಂ. ಕಲಬುರ್ಗಿಯವರ ಹತ್ತಿರ ಹೋಗಿದ್ದೆ. ನಾನು ಹೋದಾಗ ಅವರಲ್ಲಿ ನನಗೆ ಕೊಡುವಷ್ಟು ದುಡ್ಡಿರಲಿಲ್ಲ. 'ಈಗಿಲ್ಲ ನಾಳೆ ಮಧ್ಯಾಹ್ನ ಬಾ' ಎಂದರು. ಮರುದಿನ ನನಗೆ ಹೋಗಲಾಗಲಿಲ್ಲ. ಅದಾದ ಒಂದು ವಾರದಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷ ನನ್ನನ್ನು ಒಂದು ವರ್ಷದ ಅವಧಿಗೆ ಜರ್ಮನ್ ದೇಶಕ್ಕೆ ಮಾರ್ಕ್ಸ್‌ವಾದದ ಅಧ್ಯಯನಕ್ಕೆ ಕಳಿಸಿತು. ಬರ್ಲಿನ್ ನಗರ ತಲುಪಿದ ಮೇಲೆ ಡಾ॥ ಕಲಬುರ್ಗಿ ಅವರಿಗೆ ಪತ್ರ ಬರೆದೆ. ಅದಕ್ಕವರು ಉತ್ತರಿಸಿದ ಪತ್ರ.*

ಮತಾಂಧರು ಎಲ್ಲ ಧರ್ಮ, ಜಾತಿಗಳಲ್ಲಿದ್ದಾರೆ. ಧರ್ಮದ ಹೆಸರಿನಲ್ಲಿ ರಾಜಕಾರಣ ಮಾಡುವ ರಾಜಕೀಯ ಶಕ್ತಿಗಳು ಇಂಥ ಮತಾಂಧರ ರಕ್ಷಣೆಗೆ ನಿಂತಿವೆ. ವಿವಿಧ ಸಂಘಟನೆಗಳ ಹೆಸರಿನಲ್ಲಿ ಧರ್ಮ ರಕ್ಷಣೆಯ ನೆಪದಲ್ಲಿ ಮೌಢ್ಯ ತುಂಬಿದ ಸಮಾಜದಲ್ಲಿನ ಅಮಾಯಕ ಜನರನ್ನು ತಮ್ಮ ದಾಳಿಗೆ ಬಳಸಿಕೊಳ್ಳುತ್ತಿವೆ. ಇಂಥ ಶಕ್ತಿಗಳಿಂದಲೇ ದಾಭೋಲ್ಕರ್, ಪಾನ್ಸರೆ ಮತ್ತು ಡಾ॥ ಎಂ. ಎಂ. ಕಲಬುರ್ಗಿಯವರ ಹತ್ಯೆಯಾಗಿರುವುದು.

ಡಾ॥ ಎಂ. ಎಂ. ಕಲಬುರ್ಗಿಯವರ ಮೇಲೆ ಹಲವಾರು ಬಾರಿ ಹಲ್ಲೆಗಳಾಗಿದ್ದವು. ಹಿಂದುತ್ವವಾದಿ ಸಂಘಟನೆಗಳು ಅವರ ಮನೆಯ ಮೇಲೂ ದಾಳಿ ಮಾಡಿದ್ದರು. ಆದರೆ ಇಂಥ ದಾಳಿಗಳಿಗೆ ಹೆದರಿ ಕಲಬುರ್ಗಿಯವರು ತಮ್ಮ ಸಂಶೋಧನಾ ಕ್ರಿಯೆಯನ್ನು ನಿಲ್ಲಿಸದೇ ಮುಂದುವರೆಸಿ ತಮ್ಮ ಧ್ಯೇಯಕ್ಕಾಗಿ ಪ್ರಾಣ ಕೊಟ್ಟಿದ್ದಾರೆ. ಅವರ ನಿಧನದ ನಂತರವೂ ಮತೀಯ ಶಕ್ತಿಗಳಿಂದ ಹತ್ಯೆಯನ್ನು ಸಮರ್ಥಿಸುವ ರೀತಿಯಲ್ಲಿ ವ್ಯಾಪಕವಾದ ಪ್ರಚಾರ ವಿವಿಧ ಮಾಧ್ಯಮಗಳ ಮುಖಾಂತರ ನಡೆದಿದೆ. ವಿಚಾರವಾದಿಗಳ ಹತ್ಯೆಯನ್ನು ಸಂಭ್ರಮಿಸುವ ಶಕ್ತಿಗಳು ಕಣ್ಣೆದುರಿಗೇ ಇವೆ. ಸರಕಾರ ಇವರನ್ನು ಗಂಭೀರವಾಗಿ ಪರಿಗಣಿಸಬೇಕಿದೆ. ಹತ್ಯೆಯ ಹಿಂದಿನ ಹಂತಕರನ್ನು ಗುರ್ತಿಸಿ ಬಂಧಿಸುವಷ್ಟೇ ಮುತುವರ್ಜಿಯನ್ನು ವಹಿಸಿ ಹತ್ಯೆಯನ್ನು ಸಂಭ್ರಮಿಸುವ ಮನಸುಗಳನ್ನು ಸದೆಬಡಿವ ಜವಾಬ್ದಾರಿ ಸರಕಾರದ ಮೇಲಿದೆ. ಇಲ್ಲವಾದರೆ ಕ್ರೂರ, ಮತಾಂಧ, ಹಂತಕ ಮನಸುಗಳಿಗೆ ಪೂರಕವಾದ ವಾತಾವರಣವನ್ನು ನಿರ್ಮಿಸಿದಂತಾಗುತ್ತದೆ. ಈಗಾಗಲೇ ಮುಂದೆ ಹತ್ಯೆಗೊಳಗಾಗಬೇಕಾದವರ ಪಟ್ಟಿಯನ್ನು ಕೊಡುವ ಮಟ್ಟಕ್ಕೆ ಈ ರಾಜ್ಯದಲ್ಲಿ ಮತೀಯ ಶಕ್ತಿಗಳು ಬೆಳೆದುನಿಂತಿವೆ. ಹೀಗಾದರೆ ಈ ರಾಜ್ಯದಲ್ಲಿ ಒಂದು ಸರಕಾರ, ಕಾನೂನು–ಸುವ್ಯವಸ್ಥೆ ಇದೆಯೋ ಎಂದು ಪ್ರಶ್ನಿಸಬೇಕಾಗುತ್ತದೆ. ಧರ್ಮರಕ್ಷಣೆ, ನೈತಿಕ ಪೊಲೀಸ್ ಹೆಸರಿನಲ್ಲಿ ವ್ಯವಸ್ಥೆಯನ್ನೇ ನಿಯಂತ್ರಿಸುವ ಮಟ್ಟಕ್ಕೇ ಹೋಗುತ್ತಿರುವ ಈ ಶಕ್ತಿಗಳನ್ನು ಒಂದೆಡೆ ಕಾನೂನಿನ ಮೂಲಕ ಮತ್ತೊಂದೆಡೆ ಜನಜಾಗೃತಿಯ ಮೂಲಕ ನಿಯಂತ್ರಿಸಿ ನಿರ್ಮೂಲನೆ ಮಾಡಬೇಕಿದೆ. ಈ ನಿಟ್ಟಿನಲ್ಲಿ ಧಾರವಾಡದಲ್ಲಿ ಡಾ॥ ಎಂ. ಎಂ. ಕಲಬುರ್ಗಿ ಹತ್ಯಾ ವಿರೋಧಿ ಸಂಘಟನೆ ನಡೆಸಿದ ಬೃಹತ್ ಪ್ರತಿಭಟನಾ ಹೋರಾಟ ರಾಜ್ಯದ ಎಲ್ಲ ಜನತೆಗೆ ಮಾದರಿಯಾಗಿದೆ. ಶಂಕರ ಹಲಗತ್ತಿ, ಎಂ. ಡಿ. ವಕ್ಕುಂದ, ಬಸೂ ಅವರು ಇತರ ಸ್ನೇಹಿತರೊಂದಿಗೆ ಸೇರಿ ಧಾರವಾಡದ ಜನತೆ, ವಿದ್ಯಾರ್ಥಿಗಳು, ಸಾಹಿತಿಗಳು ಮಾತ್ರವಲ್ಲ ನಾಡಿನ ಎಲ್ಲ ಭಾಗಗಳಿಂದ ಚಿಂತಕರು, ಸಾಹಿತಿಗಳು, ಪ್ರಗತಿಪರ ಸಂಘಟನೆಗಳು ಭಾಗವಹಿಸಿ ಪ್ರತಿಭಟಿಸುವಂಥ ಬೃಹತ್ ಕಾರ್ಯಕ್ರಮ ಮಾಡಿದರು. ಇಂಥ ಹೋರಾಟಗಳು ಕೇವಲ ಕೆಲ ಸಂಘಟನೆಗಳ ಪ್ರತಿಕ್ರಿಯೆ, ಪ್ರತಿರೋಧವಾಗದೇ ಜನಾಂದೋಲನಗಳಾಗಬೇಕು. ವಿಚಾರ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ವಿರೋಧಿಸುವ, ಹತ್ಯೆ ಹಾಗೂ ಹತ್ಯೆಯನ್ನು ಬೆಂಬಲಿಸುವ ಶಕ್ತಿಗಳ ನಿರ್ಮೂಲನೆ ಆಗುವವರೆಗೂ ಈ ಆಂದೋಲನ ಮುಂದುವರೆಯಬೇಕು.


ಡಾ॥ ಸಿದ್ದನಗೌಡ ಪಾಟೀಲ

ಸಿಪಿಐ ಆಫೀಸ್, ಘಾಟೆ ಭವನ, ಜಿ. ಡಿ. ಪಾರ್ಕ್

ಬಡಾವಣೆ, ಮಲ್ಲೇಶ್ವರಂ, ಬೆಂಗಳೂರು – ೫೬೦ ೦೦೩


## ಸಾದರ ಸ್ವೀಕಾರ

**ದ್ವಾಪರ** (ಸಂಕೀರ್ಣ ಮಹಾಭಾರತಕ್ಕೊಂದು ವಿಭಿನ್ನ ವಿಶ್ಲೇಷಣೆ) *ಕಂನಾಡಿಗಾ ನಾರಾಯಣ*

***ಪುಟ : ೩೬೪ ಬೆಲೆ : ರೂ. ೨೫೦***

**ಸಾವೇ, ಬರುವುದಿದ್ದರೆ ನಾಳೆ ಬಾ !** (ಬದುಕು ಬದಲಿಸಬಹುದು – ಭಾಗ–2) *ನೇಮಿಚಂದ್ರ*

***ಪುಟ : ೨೫೨ ಬೆಲೆ : ರೂ. ೧೯೦***

**ಸೋಲೆಂಬುದು ಅಲ್ಪವಿರಾಮ** (ಬದುಕು ಬದಲಿಸಬಹುದು – ಭಾಗ–3) *ನೇಮಿಚಂದ್ರ*

***ಪುಟ : ೨೪೮ ಬೆಲೆ : ರೂ. ೧೯೦***

**You Can Succeed in IAS & Other Competitive Exams** *Dr. Kartik H.*

***ಪುಟ : ೧೮೦ ಬೆಲೆ : ರೂ. ೧೩೫***

**ಆಶ್ಚರ್ಯಕರ ಚಟುವಟಿಕೆಗಳು**

*ಮೂಲ : ಅರವಿಂದ ಗುಪ್ತ,*

*ಕನ್ನಡಕ್ಕೆ : ವಿ. ಎಸ್. ಎಸ್. ಶಾಸ್ತ್ರಿ*

***ಪುಟ : ೫೬ ಬೆಲೆ : ರೂ. ೪೫***

**ನಿರುಪಯುಕ್ತ ವಸ್ತುಗಳಿಂದ ಉಪಯುಕ್ತ ಆಟಿಕೆಗಳು**

*ಮೂಲ : ಅರವಿಂದ ಗುಪ್ತ,*

*ಕನ್ನಡಕ್ಕೆ : ವಿ. ಎಸ್. ಎಸ್. ಶಾಸ್ತ್ರಿ*

***ಪುಟ : ೫೬ ಬೆಲೆ : ರೂ. ೪೫***

**ಪೂರ್ವ ಆಫ್ರಿಕಾದಲ್ಲಿ ಸಫಾರಿ ವನ್ಯಜೀವಿ ಛಾಯಾಗ್ರಹಣ** *ಮೂಲ : ಎಂ. ವೈ. ಘೋರ್ಪಡೆ,*

*ಕನ್ನಡಕ್ಕೆ : ಶಾಂತಾ ನಾಗರಾಜ್*

***ಪುಟ : ೩೬ ಬೆಲೆ : ರೂ. ೭೦***

ಮೇಲಿನ ಏಳು ಪುಸ್ತಕಗಳ ಪ್ರಕಾಶಕರು

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ಪಾರಂಪರಿಕ ಸಂವಹನ ಮತ್ತು ದಸರಾ**

*ಡಾ॥ ಬಸಪ್ಪ ಬಂಗಾರಿ*

***ಪುಟ : xvi + ೫೦ ಬೆಲೆ : ರೂ. ೫೫***

**ಪಾರಂಪರಿಕ ಸಂವಹನ ಮತ್ತು ಸಮೂಹ ಮಾಧ್ಯಮ**

*ಡಾ॥ ಬಸಪ್ಪ ಬಂಗಾರಿ*

***ಪುಟ : xx + ೬೦ ಬೆಲೆ : ರೂ. ೯೯***

**ಪಾರಂಪರಿಕ ಸಂವಹನ ಮತ್ತು ಜಾಗತೀಕರಣ**

*ಡಾ॥ ಬಸಪ್ಪ ಬಂಗಾರಿ*

***ಪುಟ : xviii + ೬೨ ಬೆಲೆ : ರೂ. ೯೯***

**ಪಾರಂಪರಿಕ ಸಂವಹನ ಮತ್ತು ರಂಗಭೂಮಿ**

*ಡಾ॥ ಬಸಪ್ಪ ಬಂಗಾರಿ*

***ಪುಟ : xiv + ೫೮ ಬೆಲೆ : ರೂ. ೮೫***

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು

**ಬಂಗಾರಿ ಪಬ್ಲಿಕೇಶನ್ಸ್,** ಗೊಟಗೋಡಿ – ೫೮೧ ೧೯೭, ಶಿಗ್ಗಾವಿ ತಾಲ್ಲೂಕು, ಹಾವೇರಿ ಜಿಲ್ಲೆ

**ನಿಜವನುಂಡ ಘನ ಪರಿಮಳ** (ಕವನ ಸಂಕಲನ)

*ಡಾ॥ ಅಶೋಕ ನರೋಡೆ*

***ಪುಟ : xvi + ೧೫೮ = ೧೭೪ ಬೆಲೆ : ರೂ. ೧೫೦***

**ಬಸವಣ್ಣನವರ ಕುರಿತ ಸಂಶೋಧನೆಗಳು** (ಸಂಶೋಧನಾ ಲೇಖನಗಳ ಸಂಕಲನ) *ಡಾ॥ ಅಶೋಕ ನರೋಡೆ*

***ಪುಟ : xvi + ೧೬೧ = ೧೭೮ ಬೆಲೆ : ರೂ. ೧೨೫***

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು

**ಅನುಪಮ ಪ್ರಕಾಶನ,** ಅಥಣಿ – ೫೯೧ ೩೦೪, ಸಾವಿತ್ರಿ ಸದನ, ಸತ್ಯಪ್ರಮೋದ ನಗರ, ಅಥಣಿ (ಬೆಳಗಾವಿ)

**ಮಾನಸ** (ಕವಿತಾ ಸಂಕಲನ)

*ಮಲ್ಲಿಕಾರ್ಜುನ ಯಾಳವಾರ*

***ಪುಟ : xviii + ೭೮ = ೯೬ ಬೆಲೆ : ರೂ. ೭೫***

**ಕೆಂಡದ ಬೆಳಕು** (ಕವಿತಾ ಸಂಕಲನ)

*ಸಂತೋಷ ಯಾಳವಾರ*

***ಪುಟ : xii + ೪೪ = ೫೬ ಬೆಲೆ : ರೂ. ೫೦***

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು

**ಮಂಕಸಂಕೀಅ ಪ್ರಕಾಶನ,** ಕುಂದರಗಿ ತಾಲೂಕು, ಬೀಳಗಿ ಜಿಲ್ಲೆ, ಬಾಗಲಕೋಟೆ

**ಸಿಂಹದ ಗರ್ಜನೆ : ವೈಚಾರಿಕ ಮತ್ತು ಆಧ್ಯಾತ್ಮಿಕ ಲೇಖನಗಳ ಸಂಕಲನ** *ಎಸ್. ಸಿ. ರಂಗನಾಥ್*

***ಪುಟ : xiv + ೧೦೧ = ೧೧೫ ಬೆಲೆ : ರೂ. ೮೦***

**ಜ್ಞಾನಾನಂದ ಪ್ರಕಾಶನ,** 'ಆತ್ಮಾನಂದ ನಿಲಯ', ಡಾ॥ ಎಸ್. ಶ್ರೀನಿವಾಸಮೂರ್ತಿ ಕಾಂಪೌಂಡ್, ಸಿದ್ಧಾಪುರ, ಮಧುಗಿರಿ ತಾ., ತುಮಕೂರು ಜಿ.

**ಬುದ್ಧತ್ವ – ಸಂತೋಷಕ್ಕೊಂದೆ ದಾರಿ**

*ಉದಯ ಕುಮಾರ್ ಹಬ್ಬು*

***ಪುಟ : ೧೩೬ + iv ಬೆಲೆ : ರೂ. ೭೫***

**ಅನಂತ ಪ್ರತಿಭಾ ಪ್ರಕಾಶನ,** ಕಿನ್ನಿಗೋಳಿ–೫೭೪೧೫೦

**ಇದೆಲ್ಲಾ ಈ ದೇಶದಲ್ಲಿ ಮಾಮೂಲಿ !**

*ಎಂ. ವಿ. ಭಟ್ (ಶ್ರೀ ಮಿತ್ತೂರು)*

***ಪುಟ : xvi + ೧೬೮ ಬೆಲೆ : ರೂ. ೧೦೦***

**ಯುಗಪುರುಷ ಪ್ರಕಟಣಾಲಯ,** ಕಿನ್ನಿಗೋಳಿ

**ಪುಟ್ಟನ ಹಾಡು** (ಮಕ್ಕಳ ಕವನ ಸಂಕಲನ)

*ಎಸ್. ಎಸ್. ಹಳ್ಳೂರ*

***ಪುಟ : ೬೨ ಬೆಲೆ : ರೂ. ೮೦***

**ಶ್ರೀಧರ ಪ್ರಕಾಶನ,** ಸೆಕ್ಟರ್ ನಂ. ೨೭, ಪ್ಲಾಟ್ ನಂ. ೫೦, ನವನಗರ, ಬಾಗಲಕೋಟೆ

# ಅಥರ್ವವೇದದ ಒಂದು ಕಿರುನೋಟ

ಜಿ. ರಾಮಕೃಷ್ಣ

**ಋಗ್ವೇದದ ಮೊದಲನೆಯ ಮಂಡಲದಲ್ಲಿ ಪೃಥ್ವಿಯನ್ನು ವಿಸ್ತೀರ್ಣವಾದ್ದು ಮತ್ತು ಕಂಟಕರಹಿತವಾದ್ದು ಎಂದು ಶ್ಲಾಘಿಸಲಾಗಿದೆ; ಸುಖ ನೀಡುವ ಒಂದು ನೆಲೆಯನ್ನು ನೀಡೆಂದು ಸಹ ಪ್ರಾರ್ಥಿಸಲಾಗಿದೆ (೧.೨೨.೧೫ : ಸ್ಯೋನಾ ಪೃಥಿವಿ ಭವ ಅನೃಕ್ಷರಾ ನಿವೇಶನೀ। ಯಚ್ಛಾ ನಃ ಶರ್ಮ ಸಪ್ರಥಃ॥). "ಶರ್ಮ" ಎಂದರೆ ಭೌತಿಕ ನೆಲೆಯೊಂದೇ ಅಲ್ಲ. ಆ ಶಬ್ದಕ್ಕೆ ಋಗ್ವೇದದಲ್ಲಿ ಬೇರೆ ವ್ಯಾಪಕಾರ್ಥಗಳೂ ಇವೆ. ಅಥರ್ವವೇದದ ೧೨ನೆಯ ಕಾಂಡದ ಆರಂಭದಲ್ಲಿ ಪೃಥ್ವೀ ಸೂಕ್ತವಿದೆ (೧೨.೧). ಕಾವ್ಯದ ದೃಷ್ಟಿಯಿಂದ ಅದು ಅಷ್ಟೇನೂ ಉನ್ನತಮಟ್ಟಕ್ಕೇರುವುದಿಲ್ಲವಾದರೂ ವೇದಕಾಲೀನ ಸಮಾಜದ ಬಗ್ಗೆ ವಿಪುಲವಾದ ತಿಳಿವಳಿಕೆಯನ್ನು ನೀಡುವುದರಲ್ಲಿ ಅದು ಪ್ರಮುಖ ಸ್ಥಾನವನ್ನು ಪಡೆಯುತ್ತದೆ.**

ಪೃಥ್ವಿಯ ಮೇಲೆ ಏನೆಲ್ಲಾ ಜರುಗುತ್ತದೆ, ಆದರೆ ಅದು ಮಾತ್ರ ಸುಭದ್ರವಾಗಿ ನಿಂತಿದೆ. ಅದಕ್ಕೆ ಅಂತಹ ಪುಷ್ಟಿ ದೊರೆಯುವುದು ಯಾವುದರಿಂದ ? ಋಗ್ವೇದದಂತೆ ಅಥರ್ವವೇದ ಸಹ ಅದನ್ನು 'ಬೃಹತ್ತಾದ ಋತ'ದ ಜೊತೆ ತಾಳೆ ಹಾಕುತ್ತದೆ. ಋತವು ಸ್ಥಿರವಾದ್ದು (೧೨.೧ : ಸತ್ಯಂ ಬೃಹತ್ ಋತಂ ಉಗ್ರಂ), ಉಳಿದಂತೆ ಆಚರಣೆಯ ವಿವಿಧ ರೂಪಗಳಿವೆ (ದೀಕ್ಷಾ, ತಪಃ, ಬ್ರಹ್ಮ, ಯಜ್ಞಃ). ಇವೆಲ್ಲಾ ಪೃಥ್ವಿಗೆ ಆಧಾರ ಒದಗಿಸುವಂಥವು. ಅಂತಹ ಪೃಥ್ವಿಯಲ್ಲಿ ಮಾನವ ತನಗಾಗಿ ಒಂದು ವಿಶಾಲವಾದ ಜಾಗವನ್ನು (ಉರುಂ ಲೋಕಂ) ಬಯಸುತ್ತಾನೆ. ಎಷ್ಟು ಜನರಿದ್ದರೂ ಪೃಥ್ವಿಯು ದಟ್ಟಣೆಯಿಂದ ಬಾಧಿತವಾಗುವುದಿಲ್ಲ (೨ : ಅಸಂಬಾಧಂ ಬಧ್ಯತೋ ಮಾನವಾನಾಂ). ಅದರ ಮೇಲ್ಮೈ ಲಕ್ಷಣವಾದರೋ ಅತ್ಯದ್ಭುತ. ಪರ್ವತ, ನದಿ, ಸಮತಟ್ಟಾದ ಭೂಮಿ, ಸಸ್ಯ, ಇತ್ಯಾದಿಗಳಿಂದ ಅದು ಅತಿ ಶಕ್ತಿಶಾಲಿ. ಸಸ್ಯಗಳಲ್ಲಿ ವಿಶೇಷವಾದವು ಓಷಧಿಗಳು (ಅಂದರೆ, ಗಿಡಮೂಲಿಕೆಗಳು). ಇಂತಹ ಸಮೃದ್ಧವಾದ ಪೃಥ್ವಿಯಲ್ಲಿ ಜೀವಿಗಳು ಸದಾ ಕ್ರಿಯಾಪರವಾಗಿರಲು ಹೇರಳವಾದ ಅವಕಾಶಗಳಿವೆ (೩ : ಕೃಷ್ಟಯಃ ಸಂಬಭೂವುಃ). ಇಲ್ಲಿ ಧಾನ್ಯ ಬೆಳೆಯಲು ಹೊಲಗಳಿವೆ, ಅವಕ್ಕೆ ನೀರುಣಿಸಲು ನದಿಗಳಿವೆ. ಜೊತೆಗೆ ಸಮುದ್ರವೂ ಇದೆ. ಅಂತಹ ಪೃಥ್ವಿಯಲ್ಲಿ ಜೀವಿಸಲು ಮಾನವನಿಗೆ ಪೃಥ್ವಿಯೇ ಆಸರೆ ನೀಡಬೇಕು (ಯಸ್ಯಾಮಿದಂ ಜಿನ್ವತಿ ಪ್ರಾಣದೇಜತ್ ಸಾ ನೋ ಭೂಮಿಃ ಪೂರ್ವಪೇಯೇ ದಧಾತು). ಕ್ರಿಯಾಪರನಾದ ಮಾನವ ಆಶಿಸುವುದು, ಇಲ್ಲಿ ಉಸಿರಾಟ ಮತ್ತು ಓಡಾಟಗಳೆಲ್ಲಾ ಸುಸಂಬದ್ಧವಾಗಿರುವಂತಹ ಪೋಷಣೆಯನ್ನು. ಗೋವು, ಹಾಲು, ಧಾನ್ಯ ಬೆಳೆಯಲು ನಾಲ್ಕು ದಿಕ್ಕುಗಳಿಗೂ ವಿಸ್ತರಿಸಿರುವ ಭೂಮಿ, ಇವೆಲ್ಲಾ ಸಹಸ್ರ ವಿಧದ ಜೀವಿಗಳಿಗೆ ತಾಣವಾಗಿದೆ (೪ : ಯಾ ಬಿಭರ್ತಿ ಬಹುಧಾ ಪ್ರಾಣದೇಜತ್).

ಇಂತಹ ಅಗಾಧ ಪೃಥ್ವಿಯು ಅಸ್ತಿತ್ವಕ್ಕೆ ಬಂದಿದ್ದಾದರೂ ಹೇಗೆ ? ಋಗ್ವೇದದ ಕವಿಗಳಂತೆ ಅಥರ್ವವೇದದ ಕವಿಯೂ ಆ ವಿಸ್ಮಯದಿಂದ ಗಾಢವಾಗಿ ಪ್ರಭಾವಿತನಾಗಿದ್ದಾನೆ ಮತ್ತು ತನ್ನದೇ ವ್ಯಾಖ್ಯಾನವನ್ನು ನೀಡಿಕೊಳ್ಳುತ್ತಾನೆ : ಪೂರ್ವಕಾಲದಲ್ಲಿ ಪ್ರಾಚೀನರು ಎಲ್ಲವನ್ನೂ ಸಂಯೋಜಿಸಿದರು ಮತ್ತು ದೇವತೆಗಳು ಅಸುರರನ್ನು (ಹಾನಿಯುಂಟುಮಾಡದಂತೆ) ತಡೆದರು. ಅಂತಹ ಪೃಥ್ವಿಯು ಇಂದಿನವರಿಗೆ ಗೋವು, ಅಶ್ವ, ಸಂಪತ್ತು, ವರ್ಚಸ್ಸು, ಮುಂತಾದುವನ್ನು ನೀಡಬೇಕು (೫ : ಯಸ್ಯಾಂ ಪೂರ್ವೇ ಪೂರ್ವಜನಾ ವಿಚಕ್ರಿರೇ ಯಸ್ಯಾಂ ದೇವಾ ಅಸುರಾನ್ ಅಭ್ಯವರ್ತಯನ್। ಗವಾಂ ಅಶ್ವಾನಾಂ ವಯಸಶ್ಚ ವಿಷ್ಠಾ ಭಗಂ ವರ್ಚಃ ಪೃಥಿವೀ ನೋ ದದಾತು ॥). ವೇದದ ನಂತರದ ಕಾಲದಲ್ಲಿ ರೂಢಿಗೆ ಬಂದ ಮಾತು "ರತ್ನಗರ್ಭಾ ವಸುಂಧರಾ" ಎಂಬುದು. ಅಥರ್ವವೇದವು ಅದನ್ನು "ವಿಶ್ವಂಭರಾ ವಸುಧಾನೀ ಪ್ರತಿಷ್ಠಾ ಹಿರಣ್ಯವಕ್ಷಾ ಜಗತೋ ನಿವೇಶನೀ" ಎಂದು ಗುರುತಿಸಿದೆ. ಪೃಥ್ವಿಯು ಸಂಪದ್ಭರಿತಳು, ಚಿನ್ನದಂತಹ ಲೋಹಗಳನ್ನು ತನ್ನಲ್ಲಿ ಅಡಗಿಸಿಕೊಂಡಿರುವಂಥವಳು. ಅಂತೆಯೇ ಅವಳು ಅಗ್ನಿಯನ್ನೂ ಧರಿಸಿದ್ದಾಳೆ. ಹೀಗಾಗಿ, ಜೀವಿಗಳಿಗೆ ಆಧಾರ ನೀಡುವವಳು ಮತ್ತು ಸಂಪತ್ತು ಕೊಡುವವಳು ಅವಳು (೬ : ವೈಶ್ವಾನರಂ ಬಿಭ್ರತೀ ಭೂಮಿಃ). ಅಗ್ನಿಯ ಬಳಕೆ ಮಾಡಿ

ಲೋಹಗಳನ್ನು ವಿಧವಿಧವಾಗಿ ಪರಿವರ್ತಿಸುವುದು ಹರಪ್ಪ ಸಂಸ್ಕೃತಿಯ ಕಾಲಕ್ಕಾಗಲೇ ಭವ್ಯವಾಗಿ ನಡೆದಿತ್ತು. ಅದರ ಮುಂದುವರಿಕೆ ಮತ್ತು ಕೃಷಿಯ ಪರಿಷ್ಕರಣೆ ಋಗ್ವೇದ ಮತ್ತು ಅಥರ್ವವೇದದಲ್ಲಿ ಪ್ರತಿಫಲನಗೊಂಡಿದೆ.

ಸರ್ವಸ್ವವನ್ನೂ ನೀಡುವ ಪೃಥ್ವಿಯನ್ನು ಎಳ್ಳಷ್ಟೂ ವಿಚಲಿತವಾಗದಂತೆ ದೇವತೆಗಳು ನಿರಂತರವಾಗಿ ನಿಗಾ ವಹಿಸುತ್ತಾರೆ (೭ : ಯಾಂ ರಕ್ಷಂತಿ ಅಸ್ವಪ್ನಾ ವಿಶ್ವದಾನೀ ದೇವಾ ಭೂಮಿಂ ಪೃಥಿವೀಂ ಅಪ್ರಮಾದಂ). ಅಸ್ಖಲಿತವಾದ ಪ್ರಕೃತಿಯ ಚಲನೆಯನ್ನು ಕವಿಯು ಗುರುತಿಸಿರುವುದು ಹಾಗೆ. ಅಂತಹ ಪೃಥಿವಿಯು ಅಮೃತ ನೀಡಬಲ್ಲಳು, ಸೌಭಾಗ್ಯ ಕರುಣಿಸಬಲ್ಲಳು. ಅವಳ ವೈಭವವನ್ನು ಗ್ರಹಿಸಲು ಅದೆಷ್ಟು ಪ್ರಜ್ಞಾವಂತರು ಹಲವು ವಿಧಗಳಲ್ಲಿ ಅನ್ವೇಷಣೆ ನಡೆಸಿದ್ದಾರೆ! ಉದಾಹರಣೆಗೆ, ಸಮುದ್ರದಲ್ಲಿ ಮೊದಲಿಗೆ ನೀರು ಆವಿರ್ಭವಿಸಿದ್ದೇ ಒಂದು ದೊಡ್ಡ ಕೌತುಕವಲ್ಲವೆ? ಇಂತಹ ಅಪೂರ್ವ ಲಕ್ಷಣಗಳನ್ನುಳ್ಳ ಪೃಥಿವಿಯ ಹೃದಯವು ನಿಜಕ್ಕೂ ದ್ಯುಲೋಕದಲ್ಲೇ ಹುದುಗಿರಬೇಕು. ಒಂದಿಷ್ಟೂ ವ್ಯತ್ಯಯವಾಗದ ಈ ಲಕ್ಷಣಗಳು ಅದೆಷ್ಟು ಕಾಲದಿಂದ ವ್ಯವಸ್ಥಿತವಾಗಿ ನಡೆದುಬಂದಿವೆಯೆಂಬುದನ್ನು ನೆನೆದಲ್ಲಿ ವಿಸ್ಮಯದ ಮಹಾಪೂರವು ಅನಿವಾರ್ಯ. ಮಾನವನಿಗೆ ಅಸದಳವಾದಂತಹ ವಿಶಿಷ್ಟ ಹೆಗ್ಗಳಿಕೆ ಈ ಪೃಥ್ವಿಯದು (೮–೯ : ಯಾ ಅರ್ಣವೇ ಅಧಿ ಸಲಿಲಂ ಅಗ್ರೇ ಆಸೀತ್ ಯಾಂ ಮಾಯಾಭಿಃ ಅನ್ವಚರನ್ ಮನೀಷಿಣಃ। ಯಸ್ಯಾ ಹೃದಯಂ ಪರಮೇವ್ಯೋಮನ್ ಸತ್ಯೇನಾವೃತಂ ಅಮೃತಂ ಪೃಥಿವ್ಯಾಃ। ಸಾ ನೋ ಭೂಮಿಃ ತ್ವಿಷಿಂ ಬಲಂ ರಾಷ್ಟ್ರೇ ದಧಾತು ಉತ್ತಮೇ। ಯಸ್ಯಾಂ ಆಪಃ ಪರಿಚರಾಃ ಸಮಾನೀಃ ಅಹೋರಾತ್ರೇ ಅಪ್ರಮಾದಂ ಕ್ಷರಂತಿ॥). ಈ ಮಂತ್ರದಲ್ಲಿ ಪೃಥ್ವಿಯ ಮೇಲಿನ ಬಹುರೂಪೀ ಚಲನೆಯ ಸಂಭ್ರಮ ಮತ್ತು ವಿಸ್ಮಯವನ್ನು ಎಷ್ಟು ದಟ್ಟವಾಗಿ ಕಟ್ಟಿಕೊಡಲಾಗಿದೆಯೆಂದರೆ ಇದಕ್ಕೆ ಸಮಾನವಾದ ಮಂತ್ರವು ಋಗ್ವೇದದಲ್ಲಿ ಇಲ್ಲವೇನೋ ಎನಿಸುವಷ್ಟು ಗಾಢವಾದ ವಿಸ್ಮಿತ ಭಾವನೆ ಇಲ್ಲಿ ವ್ಯಕ್ತವಾಗಿದೆ. ಇನ್ನೊಂದು ಅಂಶವನ್ನು ಗಮನಿಸಬೇಕಾದ್ದು ಅವಶ್ಯಕ : ಇಲ್ಲಿ 'ರಾಷ್ಟ್ರ' ಎಂಬ ಪದ ಬಂದಿದೆಯೆಂದು ಅದನ್ನು ಇಂದಿನ ಅರ್ಥದಲ್ಲಿ ವ್ಯಾಖ್ಯಾನಿಸುವ ಅಚಾತುರ್ಯಕ್ಕೆ ಬಲಿಯಾಗ ಬಾರದು. ಅದು "ನೆಲೆಗಳು" ಎಂಬರ್ಥದಲ್ಲಿ ಪ್ರಯೋಗವಾಗಿದೆ, ಅಷ್ಟೆ.

ಎಷ್ಟು ಪರಿಯಲ್ಲಿ ಯೋಚಿಸಿದರೂ ಪೃಥ್ವಿಯ ಅಗಾಧತೆ ಮತ್ತು ನಿಯಮಾನುಸರಣೆಯನ್ನು ವ್ಯಾಖ್ಯಾನಿಸಿಕೊಳ್ಳಲಾಗದು. ಯಾವ ವಿವರಣೆಯೂ ಪೂರ್ತಿ ಸಮಂಜಸವಾಗಿ ತೋರುವುದಿಲ್ಲ. ಆದ್ದರಿಂದ ಒಂದಷ್ಟು ದೇವತೆಗಳನ್ನು ಕಲ್ಪಿಸಿಕೊಳ್ಳುವುದಷ್ಟೇ ಉಳಿದ ಮಾರ್ಗ. ಯಾರೀ ಪೃಥ್ವಿಯ ಮಾಪನ ಮಾಡಿಯಾರು? ಅಶ್ವಿನೀ ದೇವತೆಗಳು ಬಹುಶಃ ಅದಕ್ಕೆ ಸಮರ್ಥರು; ವಿಷ್ಣುವಿನಂಥವರು ಇಲ್ಲಿ ಪಾದವಿರಿಸಲು ಶಕ್ಯ (ಅಂದರೆ, ಅವನು ಸುಸ್ಥಿರ, ಆದರೆ ಬೇರೆಯವರು ಅಸ್ಥಿರವಾಗಿಬಿಡುತ್ತಾರೆ). ಇಂದ್ರನು ಎಲ್ಲ ವಿರೋಧಿಗಳನ್ನೂ ಸದೆಬಡಿದು ಇದನ್ನು ತನ್ನದಾಗಿಸಿಕೊಂಡಿದ್ದಾನೆ. (ತನ್ನ ಸೀಮಿತ ಪರಿಸರವಷ್ಟೇ ಕವಿಗೆ ಜಗತ್ತು; ಆ ಪರಿಸರದಲ್ಲಿ ತನ್ನ ವಿರೋಧಿಗಳನ್ನು ಜಯಿಸುವವನು ವಿಶ್ವವಿಜಯಿಯ ಪಟ್ಟ ಧರಿಸುತ್ತಾನೆ). ಅಂತಹ ಭೂಮಿಯು ನಮ್ಮನ್ನು ಹಾಲುಣಿಸಿ ಪೋಷಿಸಬೇಕು, ತಾಯಿಯು ಮಗುವನ್ನು ಪೋಷಿಸುವಂತೆ (೧೦ : ಯಾಂ ಅಶ್ವಿನೌ ಅಮಿಮಾತಾಂ ವಿಷ್ಣುರ್ಯಸ್ಯಾಂ ವಿಚಕ್ರಮೇ। ಇಂದ್ರೋ ಯಾಂ ಚಕ್ರೇ ಆತ್ಮನೇ ಅನಮಿತ್ರಾಂ ಶಚೀಪತಿಃ। ಸಾ ನೋ ಭೂಮಿಃ ವಿಸೃಜತಾಂ ಮಾತಾ ಪುತ್ರಾಯ ಮೇ ಪಯಃ). ಇಲ್ಲಿ ವಿಷ್ಣುವು ಪಾದವನ್ನು ಸುಸ್ಥಿರವಾಗಿಡುತ್ತಾನೆಂದರೆ ಎಷ್ಟೋ ಶತಮಾನಗಳ ನಂತರದ ವಾಮನನು ಆಗಲೇ ಅವತರಿಸಿಬಿಟ್ಟಿದ್ದಾನೆಂದು ಕಲ್ಪಿಸಿಕೊಳ್ಳ ಬಾರದು. ಋಗ್ವೇದದಲ್ಲಿಯೂ ವಿಷ್ಣುವು ಸುಸ್ಥಿರವಾಗಿ ಪಾದವಿರಿಸುವುದರ ಪ್ರಸ್ತಾಪವಿದೆ. ಅದನ್ನು ಮಾಡಲು ಅವನು ಏಳು ಸಾಧನಗಳನ್ನು ತನ್ನಲ್ಲಿ ಹೊಂದಿದ್ದಾನೆ (೧.೨೨.೧೬ : ... ಯತೋ ವಿಷ್ಣುಃ ವಿಚಕ್ರಮೇ ಪೃಥಿವ್ಯಾಃ ಸಪ್ತ ಧಾಮಭಿಃ). ಅವನು ಮೂರು ಪ್ರಕಾರವಾಗಿ ಪಾದಗಳನ್ನಿರಿಸುತ್ತಾನೆ (೧೭ :... ತ್ರೇಧಾ ನಿದಧೇ ಪದಂ). ಅಂದರೆ, ದ್ಯುಲೋಕ–ಅಂತರಿಕ್ಷ–ಪೃಥಿವೀ, ಮೂರನ್ನೂ ಅವನ್ನು ಅಧೀನ ಮಾಡಿಕೊಂಡಿದ್ದಾನೆ. (ಇದರಿಂದ ಮುಂದೆಂದೋ ಆವಿರ್ಭವಿಸಿದವನು ವಾಮನ; ವೇದದಲ್ಲಿ ಬಲಿಚಕ್ರವರ್ತಿ ಇಲ್ಲ, ಅವನು ಯಾರನ್ನೂ ಹಿಂಸಿಸಿಲ್ಲ ಮತ್ತು ವಿಷ್ಣುವಿನ ಪಾದಾಕ್ರಾಂತಕ್ಕೆ ಸಿಲುಕಿ ನಾಶವಾಗಬೇಕಾಗಿಲ್ಲ). ಛಂದಸ್ಸು ಇತ್ಯಾದಿಗಳು ಅವನ ಏಳು ಸಾಧನಗಳೆಂದು ಸಾಯಣನು ವ್ಯಾಖ್ಯಾನಿಸಿದ್ದಾನೆ. ವಿಷ್ಣುವನ್ನು ಮುಂದಿರಿಸಿಕೊಂಡು ದೇವತೆಗಳು ಛಂದಸ್ಸುಗಳಿಂದ (ಅಂದರೆ, ಒಂದು ನಿರ್ದಿಷ್ಟ ಕ್ರಮ ಅನುಸರಿಸಿ) ಈ ಲೋಕಗಳನ್ನು ಜಯಿಸಿದರೆಂದು ತೈತ್ತಿರೀಯ ಸಂಹಿತೆಯು ಹೇಳುತ್ತದೆ (೫.೨.೧.೧ : ವಿಷ್ಣುಮುಖಾ ವೈ ದೇವಾಃ ಛಂದೋಭಿಃ ಇಮಾನ್ ಲೋಕಾನ್ ಅನಪಜಯ್ಯಂ ಅಭ್ಯಜಯನ್). ಸೃಷ್ಟಿ ವೈಶಾಲ್ಯ ಮತ್ತು ವೈಚಿತ್ರ್ಯ ಅಂದೂ ನಿಗೂಢವಾಗಿತ್ತು, ಇಂದೂ ನಿಗೂಢವಾಗಿದೆ; ದೇವತೆಗಳನ್ನು ಕಲ್ಪಿಸಿಕೊಂಡು ನಿಗೂಢತೆಯನ್ನು ಭೇದಿಸಬಹುದೆಂಬ ಭಾವವು ಜಗತ್ತಿನ ಎಲ್ಲ ಆದಿಚಿಂತನೆಗಳಲ್ಲೂ ಹಾಸುಹೊಕ್ಕಾಗಿದೆ. ಈ ವೈಶಾಲ್ಯವನ್ನು ಪೃಥ್ವೀ ಸೂಕ್ತವು ಮುಂದಿನ ಮಂತ್ರದಲ್ಲಿ ಕೈಗೆತ್ತಿಕೊಂಡಿದೆ : ಗಿರಿಶಿಖರಗಳು, ಪರ್ವತಗಳು, ಬೆಟ್ಟಗುಡ್ಡಗಳು, ಸಮೃದ್ಧವಾದ ಕಾಡು, ಎಲ್ಲಾ ಇರುವುದರಿಂದ ಪೃಥ್ವಿಯು ಅತಿವಿಸ್ತೀರ್ಣವಾದ್ದು. ಪರ್ವತಗಳು ಹಿಮಾಚ್ಛಾದಿತ ಕೂಡ. (ವೇದಕಾಲೀನ ಜನಸಮುದಾಯವು ಗಂಗಾಬಯಲಿಗೆ ಬರುವ ಮುಂಚಿನ ಚಿತ್ರಣ ಇದು. ದಕ್ಷಿಣದ ಸಮತಟ್ಟಾದ ಭೂಮಿ ಕಂಡಿದ್ದರೆ ವೇದದ ಕವನಗಳು ಇನ್ನೊಂದು ಸ್ವರೂಪವನ್ನು ಪಡೆಯಬಹುದಿತ್ತು). ಮಣ್ಣಿನ ಬಣ್ಣದಲ್ಲೂ ವೈವಿಧ್ಯವಿದೆ. ಇದನ್ನೆಲ್ಲಾ ಕಂಡ ಕವಿಯು ಅವಾಕ್ಕಾಗಿ ಎಲ್ಲವೂ ಶುಭದಿಂದಿರಲಿ ಎಂದು ಹಾರೈಸುತ್ತಾನೆ; ಅಂತಹ ಪೃಥ್ವಿಯ ಮೇಲೆ ತಾನಿರುವುದು ಅವನಿಗೆ ಧನ್ಯತೆಯ ಭಾವ ನೀಡುತ್ತದೆ. ಆ ಮನಸ್ಸನ್ನು ಹೊಕ್ಕು ನಾವವನ ಸಾಂದ್ರಭಾವವನ್ನು ನಮ್ಮದಾಗಿಸಿಕೊಳ್ಳಬೇಕು. (೧೧ : ಗಿರಯಸ್ತೇ ಪರ್ವತಾ ಹಿಮವಂತಃ ಅರಣ್ಯಂ ತೇ ಪೃಥಿವಿ ಸ್ಯೋನಮಸ್ತು। ಬಭ್ರುಂ ಕೃಷ್ಣಾಂ ರೋಹಿಣೀಂ ವಿಶ್ವರೂಪಾಂ ಧ್ರುವಾಂ ಭೂಮಿಂ ಪೃಥಿವೀಂ ಇಂದ್ರಗುಪ್ತಾಂ। ಅಜೀತಃ ಅಹತಃ ಅಧ್ಯಷ್ಠಾಂ ಪೃಥಿವೀಂ ಅಹಂ॥).

ಮಾನವನು ಪೃಥ್ವಿಯ ಮಗ; ಪರ್ಜನ್ಯ (ಮಳೆ, ನೀರು) ಅವನ ತಂದೆ. ತಾಯಿಯ ಮಧ್ಯಭಾಗ, ನಾಭಿಭಾಗ, ಎಲ್ಲಾ ವಿವಿಧ ಶಕ್ತಿಗಳು ಹೊಮ್ಮುವ ಭಾಗಗಳು. ಆ ಶಕ್ತಿಗಳೆಲ್ಲಾ ಮಾನವನವಾಗಬೇಕೆಂಬ ಭಾವವನ್ನು ಮುಂದಿನ ಮಂತ್ರವು (೧೨) ಪ್ರಕಟಿಸಿದೆ. ಈ ಸೂಕ್ತದ ರಚನೆಯ ವೇಳೆಗೆ ಯಜ್ಞಾದಿ ಆಚರಣೆಗಳು ಮಾಂತ್ರಿಕತೆಯ ವಿಸ್ತೃತ ರೂಪದಲ್ಲಿ ಕವಿಯ ಸುತ್ತಮುತ್ತ ವಿಜೃಂಭಿಸುತ್ತಿವೆ. ಅಲ್ಲಿಯ ವೇದಿ (ಅಂದರೆ ಆಹುತಿ ನೀಡುವ ಸಲುವಾಗಿ ರಚಿಸಿರುವ ಯಜ್ಞಶಾಲೆ), ಅಲ್ಲಿ ರಣರಣಿಸುವ ಸೂಕ್ತಗಳ ಪಠಣ, ಇತ್ಯಾದಿಗಳು ಪೃಥ್ವಿಯನ್ನು ವರ್ಧಿಸಿವೆ; ಆ ವರ್ಧನೆಯು ಕವಿಗೆ ವರ್ಧನೆ ನೀಡಬೇಕು. ಅದು ೧೩ನೆಯ ಮಂತ್ರದ ಆಶಯ.

ಏಳಿಗೆಯೆಂದರೆ ಯಥಾಪ್ರಕಾರ ವೈರಿಗಳ ಮತ್ತು ವಿರೋಧಿಗಳ ಹನನ ಮತ್ತು ಸ್ವಾಧೀನ (೧೪: ಯೋ ನೋ ದ್ವೇಷತ್ ಪೃಥಿವಿ ಯಃ ಪೃತನ್ಯಾತ್ ಯಃ ಅಭಿದಾಸಾನ್ ಮನಸಾ ಯೋ ವಧೇನ। ತಂ ನೋ ಭೂಮೇ ರಂಧಯ ಪೂರ್ವಕೃತ್ವರಿ॥). ಯಾರ ಮೇಲೆ ಆಕ್ರಮಣ ನಡೆದಿದೆಯೋ ಅವರು ಪ್ರತಿರೋಧ ಒಡ್ಡುತ್ತಲೇ ಇರುತ್ತಾರೆ; ಇದು ಎಲ್ಲ ಕಾಲಗಳ ವಿದ್ಯಮಾನ. ಮೊದಲು ಅವರ ಸಂಪತ್ತನ್ನು ಅಪಹರಿಸುವುದು, ಆಮೇಲೆ ಅವರನ್ನು ವಿರೋಧಿಗಳೆಂದು ಹಳಿಯುವುದು, ನಂತರ ದೇವತೆಗಳನ್ನು ಮಣಿಸಿ ಅವರನ್ನೆಲ್ಲಾ ಜಯಿಸುವುದು: ಇದು ವೇದಕಾಲದ ಬೆಳವಣಿಗೆಯ ಒಂದು ಭಾಗ. ಮಾನವ ಜನಾಂಗವು ಆ ಪ್ರಕ್ರಿಯೆಯನ್ನು ಯಥೇಚ್ಛವಾಗಿ ಮುಂದುವರಿಸಿಕೊಂಡು ಬಂದಿದೆ. ಅಥರ್ವವೇದವು (ಋಗ್ವೇದದಂತೆಯೇ) ವಿರೋಧಿಗಳನ್ನು "ಪಂಚ ಮಾನವಾಃ" ಎಂದು ಹೆಸರಿಸುತ್ತದೆ. ಅವು ಮೂಲ ಬುಡಕಟ್ಟುಗಳು, ಅವನ್ನು ಋಗ್ವೇದವು "ಪಂಚ ಜನಾಃ" ಎನ್ನುತ್ತದೆ. ಅವರ ಸಂಪತ್ತನ್ನು ಸೆಳೆಯಬೇಕಾದ್ದರಿಂದ ಅವರೊಡನೆ ಸಾಮರಸ್ಯವು ಸಾಧ್ಯವಿಲ್ಲ. ಆ "ಬೇರೆ" ಜನಸಮುದಾಯಗಳಿಗಲ್ಲದೆ ಪೃಥ್ವಿಯು ಎಲ್ಲ ಪ್ರಾಣಿಗಳಿಗೂ ಆಗರ. ಇಡೀ ಪೃಥ್ವಿಯು ಸೂರ್ಯಕಿರಣಗಳಿಂದ ಚೆಲುವು ಪಡೆದಿದೆ, ಕಂಗೊಳಿಸುತ್ತಿದೆ. ಆದರೆ "ಪಂಚ ಮಾನವ"ರ ಸಂಪತ್ತು ಕಣ್ಣು ಕುಕ್ಕುತ್ತದೆ. (ಶುಷ್ಣರನ್ನು, ಅಂದರೆ ವಿರೋಧಿಗಳನ್ನು, ಮತ್ತು ದಸ್ಯುಗಳನ್ನು ಇಂದ್ರನು ನಾಶ ಮಾಡುತ್ತಾನೆಂದು ಋಗ್ವೇದವು ಹಲವು ಬಾರಿ ಹೇಳಿದೆ; ಉದಾಹರಣೆಗೆ ೮.೧೬.೧೪ ನೋಡಬಹುದು). ಅಂತಿಮ ಆಶಯವು ಎಲ್ಲರೂ ನಮಗೆ ಶುಭ ಕೋರಬೇಕೆಂಬುದೇ ಆಗಿದೆ, ಎಲ್ಲರೂ ಸುಭಗವಾದ ಮಾತನಾಡಬೇಕೆಂಬುದೇ ಆಗಿದೆ; ಎಲ್ಲಕ್ಕೂ ಮಾತೃಸ್ಥಾನದಲ್ಲಿರುವ ಪೃಥ್ವಿಯು ಅದನ್ನು ಆಗುಮಾಡಬೇಕು (೧೬: ತಾ ನಃ ಪ್ರಜಾಃ ಸಂ ದುಹ್ರತಾಂ ಸಮಗ್ರಾ ವಾಚೋ ಮಧು ಪೃಥಿವಿ ಧೇಹಿ ಮಹ್ಯಂ).



ತೂಕಡಿಸುವವರಿಗೆ ಬೇಕಲ್ಲಾ ಸಾರ್...!

ಮುಂದಿನ ಮಂತ್ರದಲ್ಲಿ ನಮ್ರತೆ ಮತ್ತು ಕೃತಜ್ಞತೆಯ ಭಾವವು ವ್ಯಕ್ತವಾಗಿದೆ: ಎಲ್ಲ ಓಷಧಿಗಳೂ ನಿನ್ನಲ್ಲಿವೆ, ನೀನು ಅವಕ್ಕೆ ತಾಯಿರೂಪಿಣಿ; ನೀನು ನಿಷ್ಠುರವಾದ ಪ್ರಕೃತಿ ಧರ್ಮ ಉಳ್ಳವಳು. ನಾವು ಸದಾ ನಿನ್ನ ವಿಶಾಲ ಪ್ರದೇಶದಲ್ಲಿ ಹೆಜ್ಜೆ ಹಾಕುತ್ತಾ ಹೋಗುತ್ತೇವೆ. ನೀನು ನಮಗೆ ದಯಾಮಯಿಯಾಗಿರು (೧೭: ವಿಶ್ವಸ್ವಂ ಮಾತರಂ ಓಷಧೀನಾಂ ಧ್ರುವಾಂ ಭೂಮಿಂ ಪೃಥಿವೀಂ ಧರ್ಮಣಾ ಧೃತಾಂ। ಶಿವಾಂ ಸ್ಯೋನಂ ಅನು ಚರೇಮ ವಿಶ್ವಹಾ). ಪೃಥ್ವಿಯ ಮೇಲಿನ ಒತ್ತಡ ಎಷ್ಟೊಂದಿದೆ, ಅದನ್ನು ಹೊರಲು ಅವಳಿಗೆ ಹೇಗೆ ಸಾಧ್ಯವಾಯಿತು! ಇಂದ್ರನು ಸಹಾಯಹಸ್ತ ಚಾಚಿರಬೇಕು. ಸಂಪದ್ಭರಿತವಾದ ಈ ಭೂಮಿಯಲ್ಲಿ ಯಾರ ದ್ವೇಷಕ್ಕೂ ಎಡೆಯಿರದೆ ಬಾಳುವೆ ನಡೆಸಲು ಪೃಥ್ವಿಯು ಕಾರಣಳು (೧೮). ಪೃಥ್ವಿಯು ಅಗ್ನಿಮಯವಾಗಿದೆ: ತನ್ನಲ್ಲಿ, ತನ್ನಲ್ಲಿರುವ ಓಷಧಿಗಳಲ್ಲಿ, ನೀರು ಮತ್ತು ಕಲ್ಲುಗಳಲ್ಲಿ, ಕಡೆಗೆ ಪುರುಷರು ಮತ್ತು ಗೋವು ಹಾಗೂ ಅಶ್ವಗಳಲ್ಲಿ ಅಗ್ನಿಯನ್ನಿರಿಸಿಕೊಂಡಿದ್ದಾಳೆ ಪೃಥ್ವಿ (೧೯). ಅಗ್ನಿಯು ದ್ಯುಲೋಕದಲ್ಲಿದ್ದುಕೊಂಡು ಪ್ರಕಾಶ ನೀಡುತ್ತಾನೆ, ಅಂತರಿಕ್ಷದಲ್ಲಿ ಶಾಖ ನೀಡುತ್ತಾನೆ, ಮತ್ತು ಮರ್ತ್ಯರು ಘೃತಪ್ರಿಯನಾದ ಅವನ ಮುಖೇನ ಹವಿಸ್ಸು ನೀಡುತ್ತಾರೆ (೨೦). ದೇವತೆಗಳಿಗೆ ಪರಿಪೂರ್ಣವಾದ ಹವಿಸ್ಸು ನೀಡುವುದು ಪೃಥ್ವಿಯಲ್ಲಿ; ಪೌಷ್ಟಿಕ ಆಹಾರ ಸೇವಿಸಿ ಮಾನವರು ಜೀವಿಸುವುದೂ ಪೃಥ್ವಿಯಲ್ಲಿ. (ಅಂದರೆ, ಮಾನವರಿಗೆ ಆಹಾರವಿದ್ದಂತೆ ದೇವತೆಗಳಿಗೆ ಹವಿಸ್ಸಿದೆ; ಮಾನವರು ಅನ್ನವನ್ನು ಸ್ವಯಂ ಅರ್ಜಿಸಿಕೊಳ್ಳುತ್ತಾರೆ ಮತ್ತು ದೇವತೆಗಳಿಗೂ ಅರ್ಪಿಸುತ್ತಾರೆ).

ಪೃಥ್ವಿಯ ಅನನ್ಯ ಲಕ್ಷಣವನ್ನು ಹೇಳುವಾಗ ಭಾರತೀಯ ತತ್ತ್ವಶಾಸ್ತ್ರದಲ್ಲಿ "ಗಂಧವತೀ" ಎಂಬ ಪ್ರಯೋಗವಿದೆ; ಅಂದರೆ, ಗಂಧವನ್ನು ಸೂಸುವುದು ಪೃಥ್ವಿಯ ವಿಶಿಷ್ಟ ಲಕ್ಷಣ. ಬೇರೆಲ್ಲದರಿಂದಲೂ ಅದನ್ನು ಪ್ರತ್ಯೇಕಿಸುವುದು ಈ ಲಕ್ಷಣವೇ. ಆ ಲಕ್ಷಣವು ಪೃಥ್ವಿಯ ಮೇಲಿನ ಓಷಧಿ, ಇತ್ಯಾದಿಗಳಲ್ಲೂ ಇರುತ್ತದೆ. ಅವು ಗಂಧವನ್ನು ಪಸರಿಸುತ್ತವೆ. ಅಪ್ಸರ–ಗಂಧರ್ವರೂ ಪೃಥ್ವಿಯ ಗಂಧದಿಂದ ಶೋಭಿಸುತ್ತಾರೆ. ಅಂತಹ ಪೃಥ್ವಿಯಲ್ಲಿ ಯಾರೂ ದ್ವೇಷವನ್ನು ಕಾರುವುದು ಬೇಡ (೨೩: ಯಸ್ತೇ ಗಂಧಃ ಪೃಥಿವಿ ಸಂಬಭೂವ ಯಂ ಬಿಭ್ರತಿ ಓಷಧಯೋ ಯಮಾಪಃ। ಯಂ ಗಂಧರ್ವಾ ಅಪ್ಸರಸಶ್ಚ ಭೇಜಿರೇ ತೇನ ಮಾ ಸುರಭಿಂ ಕೃಣು ಮಾ ನೋ ದ್ವಿಕ್ಷತ ಕಶ್ಚನ॥). ಈ ಗಂಧದ ವ್ಯಾಪ್ತಿ ಮತ್ತು ಉಪಯೋಗ ಸರ್ವತೋ ಪ್ರಸಿದ್ಧ; ಅದು ಕಮಲದಲ್ಲಿದೆ, ಸೂರ್ಯಾಳ ಮದುವೆಯ ಸಂದರ್ಭದಲ್ಲಿ ಗಂಧವನ್ನು ಪೂಸಲಾಗಿತ್ತು, ದೇವತೆಗಳನ್ನೂ ಅದು ರಂಜಿಸುತ್ತದೆ. ಆದ್ದರಿಂದ ಮಾನವರಲ್ಲೂ ಅದರ ಸುರಭಿಯು ಹರಡಬೇಕು; ಅಂದರೆ, ಮಾನವನು ದ್ವೇಷಮುಕ್ತವಾಗಿರಬೇಕು (೨೪). ಪೃಥ್ವಿಯ ಲಕ್ಷಣವಾದ ಗಂಧವು ಪೃಥ್ವಿಯ ಮೇಲಿನ ಎಲ್ಲ ಪುರುಷ–ಸ್ತ್ರೀಯರಲ್ಲಿ, ಅಶ್ವಗಳಲ್ಲಿ, ವೀರರಲ್ಲಿ, ಆನೆಗಳಲ್ಲಿ ಹಾಗೂ ಬೇರೆ ಮೃಗಗಳಲ್ಲಿ, ಕನ್ಯೆಯರಲ್ಲಿ, ಹೀಗೆ ಎಲ್ಲೆಲ್ಲೂ ವ್ಯಾಪಿಸಿದೆ. ಮಾನವ ಸಾರ ಮತ್ತು ಸುಭಗತ್ವಕ್ಕೆ ಅದೇ ಕಾರಣ. ಹೀಗೆ ಸರ್ವಸ್ವವೂ ಗಂಧಮಯವಾಗಿರುವ ಪೃಥ್ವಿಯಲ್ಲಿ ದ್ವೇಷವು ಏಕಾದರೂ ಬೇಕು? (೨೫: ಯಸ್ತೇ ಗಂಧಃ ಪುರುಷೇಷು ಸ್ತ್ರೀಷು ಪುಂಸು ಭಗೋ ರುಚಿಃ। ಯೋ ಅಶ್ವೇಷು ವೀರೇಷು ಯೋ ಮೃಗೇಷು ಉತ ಹಸ್ತಿಷು। ಕನ್ಯಾಯಾಂ ವರ್ಚಃ ಯತ್ ಭೂಮೇ ತೇನ ಅಸ್ಮಾನ್ ಅಪಿ ಸಂ ಸೃಜ ಮಾ ನೋ ದ್ವಿಕ್ಷತ ಕಶ್ಚನ॥).

ಪೃಥ್ವಿಯ ಸಾಮಗ್ರಿಗಳು ಹಿರಣ್ಯೋಪೇತವಾದ ಪೃಥ್ವಿಯನ್ನು ದೃಢವಾಗಿಸಿವೆ. ಆ ಸಾಮಗ್ರಿಗಳೆಂದರೆ ನದಿಗಳು, ಮಣ್ಣು, ಕಲ್ಲು, ಧೂಳು, ಇತ್ಯಾದಿಗಳು. ಅಂತಹ ಪೃಥ್ವಿಗೆ ಕವಿಯು ತಲೆಬಾಗುತ್ತಾನೆ. ಪೃಥ್ವಿಯ ಮೇಲಿನ ಮರಗಳೂ, ವನಸ್ಪತಿಗಳೂ ಸ್ಥಾವರವಾಗಿ, ಸದಾ ಸ್ಥಿರವಾಗಿ, ಉಳಿದಿವೆ. ಅಲ್ಲೇ ಮಾನವ ನಿಂತು, ಕೂತು, ಅಡ್ಡಾಡಿ, ಎಡ ಮತ್ತು ಬಲ ಕಾಲುಗಳಿಂದ ಪೃಥ್ವಿಯನ್ನು ತುಳಿಯುತ್ತಿರುತ್ತಾನೆ; ಆದರೆ ಅವನ ಗೌರವಕ್ಕೇನೂ ಕಡಿಮೆಯಿಲ್ಲ (೨೭–೨೮). ಶುಚಿಯನ್ನು ಕಲಿಸುವ ಪೃಥ್ವಿಯ ಕ್ಷಮೆಯನ್ನವನು ಯಾಚಿಸುತ್ತಾನೆ. ಹೇಗಿದ್ದರೂ ಮಾನವನು ಪೃಥ್ವಿಯನ್ನು ಅವಲಂಬಿಸಿದ್ದಾನೆ, ಬ್ರಹ್ಮನಿಂದ ಪೃಥ್ವಿಗೆ ಪುಷ್ಟಿ ದೊರೆತಿದೆ, ಅವಳು ಸಹನಾಮಯಿ, ಅವಳಿಂದಲೇ ಮಾನವನ ವರ್ಧನೆ (೨೯). ಪೃಥ್ವಿಯು ನೀಡುವ ನೀರು ಮಾನವ ಶರೀರವನ್ನು ಶುದ್ಧೀಕರಿಸುತ್ತದೆ, ವೈರಿಯನ್ನು ಬಡಿದೋಡಿಸಲು ಅದು ಪ್ರೇರಣೆ ನೀಡುತ್ತದೆ (೩೦). ಯಾವ ಕಡೆ ಹೋದರೆ ಏನು ಭೀತಿಯೋ, ಮಾನವನಿಗೆ ಅದು ಅನಿಶ್ಚಿತ. ಆದ್ದರಿಂದ ಕವಿಯು ಪೃಥ್ವಿಯನ್ನು ಕೇಳಿಕೊಳ್ಳುತ್ತಾನೆ: ನಾಲ್ಕು ದಿಕ್ಕುಗಳಲ್ಲಿ ಎತ್ತಲಾದರೂ ಚಲಿಸುವಾಗ ರಕ್ಷಣೆಯನ್ನು ನೀಡು, ಎಂದು; ಎಲ್ಲಿಯೇ ಓಡಾಡಲಿ, ಎಡವದೆ ಮುಂದೆ ಸಾಗಲು ಅನುವು ಮಾಡಿಕೊಡು, ಎಂದು (೩೧). ತಾಯಿ ಪೃಥ್ವಿಯು ಮಾನವನನ್ನು ಕಾಂದಿಶೀಕನನ್ನಾಗಿಸಬಾರದು; ಅಂದರೆ, ಅವನಿಗೆ ನೆಲೆ ಇಲ್ಲದಂತಾಗಬಾರದು. (ಎಲ್ಲಿಗೆ ಹೋಗಲಿ ಎಂಬ ತವಕದಿಂದಿರುವವರನ್ನು ಕಾಂದಿಶೀಕರು ಎನ್ನುತ್ತಾರೆ; ಯಾವ ದಿಶೆಯಲ್ಲಿ ಸಾಗಲಿ ಎಂಬ ದುಗುಡ ಕಾಂದಿಶೀಕನದು). ಆಯುಧಧಾರಿಯಾಗಲಿ, ದರೋಡೆಕೋರನಾಗಲಿ ಅವನೆದುರು ಬಂದು ಹಿಂಸಿಸುವಂತಿರಬಾರದು. ಪೃಥ್ವಿಯು ಅದನ್ನವನಿಗೆ ಕರುಣಿಸಬೇಕು (೩೨: ... ಸ್ವಸ್ತಿ ಭೂಮೇ ನೋ ಭವ ಮಾ ವಿದನ್ ಪರಿಪಂಥಿನಃ ವರೀಯೋ ಯಾವಯಾ ವಧಂ).

ಪೃಥ್ವಿ ಮತ್ತು ಸೂರ್ಯಾ ಮಾನವನಿಗೆ ವಿಶ್ವಾಸಾರ್ಹ ನೇಹಿಗರು. ಅವರನ್ನು ಚಿರಕಾಲ ನೋಡುತ್ತಿರುವಂತೆ ಮಾಡಲು ದೃಷ್ಟಿಯು ಮಂದವಾಗಬಾರದು (೩೩). ಇಂಥದನ್ನೆಲ್ಲಾ ಕರುಣಿಸಬೇಕಾದ ಪೃಥ್ವಿಯನ್ನು ಮಾನವ ನಡೆಸಿಕೊಳ್ಳುವುದೆಂತು? ಅವಳ ಮೇಲೆ ಮಲಗಿಬಿಡುತ್ತಾನೆ, ಎಡ–ಬಲಗಳಿಗೆ

ಹೊರಳುತ್ತಿರುತ್ತಾನೆ. ಎಲ್ಲರಿಗೂ ಆವಾಸಸ್ಥಾನವನ್ನು ಒದಗಿಸುವ ಪೃಥ್ವಿಗೆ ಇಂತಹ ನಡತೆ ಹಿಡಿಸೀತೆ ? ಆದ್ದರಿಂದ ಕವಿಯು ಅವಳ ಕ್ಷಮೆ ಬೇಡುತ್ತಾನೆ (೩೪ : ... ಮಾ ಹಿಂಸೀಃ ತತ್ರ ನೋ ಭೂಮೇ ಸರ್ವಸ್ಯ ಪ್ರತಿಶೀವರಿ). ಶರೀರವನ್ನು ಪೃಥ್ವಿಯ ಮೇಲೆ ಇರಿಸುವುದಿರಲಿ, ಮಾನವ ಪೃಥ್ವಿಯ ಮೇಲಿನ ಸೊಂಪಾದ ಬೆಳೆಯನ್ನು ಬುಡಸಮೇತ ಕಿತ್ತುಬಿಡುತ್ತಾನೆ. ಪಶ್ಚಾತ್ತಾಪದಿಂದ ಅವನು ಬೇಡಿಕೊಳ್ಳುತ್ತಾನೆ, ತಾಯೆ, ನಾನು ಕಿತ್ತಿದ್ದು ಬೇಗನೆ ಮತ್ತೆ ಬೆಳೆಯಲಿ; ನಿನ್ನನ್ನು ಅಗೆದು ನಿನ್ನ ಹೃದಯವನ್ನು ಭಗ್ನಗೊಳಿಸಿದೆ, ಕ್ಷಮಿಸು, ಎಂದು (೩೫ : ಯತ್ ತೇ ಭೂಮೇ ವಿಖನಾಮಿ ಕ್ಷಿಪ್ರಂ ತದಪಿ ರೋಹತು। ಮಾ ತೇ ಮರ್ಮ ವಿಮೃಗ್ವರಿ ಮಾ ತೇ ಹೃದಯಮರ್ಪಿಷಂ ॥).

ಪ್ರಕೃತಿಯಲ್ಲಿ ನಿಯಮಾನುಸಾರ ಬದಲಾಗುವ ಋತುಗಳು ಅದೆಷ್ಟು ಮೋಹಕ ! ಒಣಗಿ ಬರಡಾಗಿ ನಿಂತ ಕಾಡು ಮತ್ತೆ ಚಿಗುರುತ್ತದೆ. ಹೀಗೆ ಪೃಥ್ವಿಯು ಮಾನವನಿಗೆ ಫಲಪ್ರದೆ (೩೬ : ಗ್ರೀಷ್ಮಸ್ತೇ ಭೂಮೇ ವರ್ಷಾಣಿ ಶರತ್ ಹೇಮಂತಃ ಶಿಶಿರೋ ವಸಂತಃ। ಋತವಸ್ತೇ ವಿಹಿತಾ ಹಾಯನೀಃ ಅಹೋರಾತ್ರೇ ಪೃಥಿವಿ ನಃ ದುಹಾತಾಂ ॥). ವರ್ಷವನ್ನು ಗ್ರೀಷ್ಮ ಋತುವಿನಿಂದ ಎಣಿಸಲಾಗಿದೆಯೆಂಬುದನ್ನು ನಾವಿಲ್ಲಿ ಗಮನಿಸಬೇಕು : ಪರ್ವತಪ್ರದೇಶದಲ್ಲಿ ಆ ಋತುವೇ ಹೆಚ್ಚಿನ ಮಹತ್ವದ್ದಿರಬೇಕು.

ಇಂದ್ರನು ವೃತ್ರನನ್ನು ಕೊಂದದ್ದು ವೇದಗಳಲ್ಲಿ ನೂರಾರು ಬಾರಿ ಪ್ರಸ್ತಾಪಿಸಲ್ಪಟ್ಟಿದೆ. ಹಿಂದೆಯೇ ನಾವು ನೋಡಿದಂತೆ ವೃತ್ರನು ಯಾರೆಂದು ತೀರ್ಮಾನಿಸುವುದರಲ್ಲಿ ವಿದ್ವಾಂಸರಲ್ಲಿ ಬಹಳ ಭಿನ್ನಾಭಿಪ್ರಾಯಗಳಿವೆ. ಮೋಡಗಳ ನೀರನ್ನು ಹಿಡಿದಿಡುವವನು ವೃತ್ರ, ಅವನು ಸರ್ಪಾಕಾರವುಳ್ಳವನು, ಅವನನ್ನು ಕೊಂದು ಇಂದ್ರನು ವೃಷ್ಟಿಯನ್ನು ಸುರಿಸುತ್ತಾನೆಂಬುದು ವೇದಗಳ ಕರ್ತೃಗಳ ನಂಬಿಕೆಯೆಂಬ ನಿಲುವನ್ನು ಬಹುತೇಕ ವಿದ್ವಾಂಸರು ಅಂಗೀಕರಿಸಿದ್ದಾರೆ. ಅದೇ ಅಂತಿಮ ತೀರ್ಮಾನವೆಂದು ಹೇಳಬರುವುದಿಲ್ಲ. ಏಕೆಂದರೆ, ಗವಿಯಲ್ಲಿ ಅಡಗಿದ್ದ ಸರ್ಪವನ್ನು ಕೊಂದು ಇಂದ್ರನು ನೀರು ಹರಿಸುತ್ತಾನೆಂಬ ಉಲ್ಲೇಖವೂ ಋಗ್ವೇದದಲ್ಲಿದೆ. ಪೃಥ್ವೀ ಸೂಕ್ತದ ಕವಿಯು ಪೃಥಿವಿಯನ್ನು ಶುದ್ಧೀಕರಣ ಗೊಳಿಸುವವಳೆಂದು ಬಣ್ಣಿಸಿದ್ದಾನೆ. ನೀರಿನಲ್ಲಿನ ಬಡಬಾಗ್ನಿಯನ್ನು ಸರ್ಪವು ಹಿಡಿದಿಟ್ಟುಕೊಂಡಿದ್ದಿತೆಂದೂ, ಇಂದ್ರನು ತನ್ನ ಇಷ್ಟದ ದೇವತೆಯೆಂದೂ, ಅವನು ದಸ್ಯುಗಳನ್ನು ಅಧೀನಪಡಿಸಿಕೊಟ್ಟನೆಂದೂ, ಪೃಥ್ವಿಯೂ ಪ್ರಬಲ ಇಂದ್ರನಿಗೆ ಕಟ್ಟುಬಿದ್ದಿದ್ದಾಳೆಂದೂ ಕವಿಯು ಹೇಳಿದ್ದಾನೆ (೩೭: ಯಾಪ ಸರ್ಪಂ ವಿಜಮಾನಾ ವಿಮೃಗ್ವರೀ ಯಸ್ಯಾಮಾಸನ್ ಅಗ್ನಯೋ ಯೇ ಅಪ್ಸ್ವಂತಃ। ಪರಾ ದಸ್ಯೂನ್ ದದತೀ ದೇವಪೀಯೂನ್ ಇಂದ್ರಂ ವೃಣಾನಾ ಪೃಥಿವೀ ನ ವೃತ್ರಂ ॥). ಮುಂದಿನ ಮಂತ್ರದಲ್ಲಿ ಮತ್ತೆ ಯಜ್ಞಗೃಹಕ್ಕೆ ಕವಿಯು ಹಿಂದಿರುಗುತ್ತಾನೆ. ಪೃಥ್ವಿಯು ಅದಕ್ಕೆ ಆಧಾರ. ಯಜ್ಞವು ಸಂಕೀರ್ಣತೆಯಿಂದ ಕೂಡಿದೆ : ಯೂಪ (ಪಶುವನ್ನು ಕಟ್ಟಲು ಇರುವ ಕಂಬ), ಋತ್ವಿಕ್ಕುಗಳು, ಮೂರು ವೇದಗಳ ಪಾಠಕರು, ಎಲ್ಲಾ ಇದ್ದಾರೆ ಮತ್ತು ಇಂದ್ರನನ್ನು ತಣಿಸುತ್ತಿದ್ದಾರೆ. ಯಜ್ಞಗೃಹದ ಸ್ಥೂಲ ವಿನ್ಯಾಸವನ್ನು ಈ ಮಂತ್ರದಿಂದ ಊಹಿಸಬಹುದು (೩೮). ಎಂತಹ ಸಂಪತ್ತನ್ನು ಆಶಿಸಬೇಕೆಂಬುದನ್ನು ಪೃಥ್ವಿಯು ನಿರ್ದೇಶಿಸುತ್ತಾಳೆ (೩೯ : ... ಸಾ ನೋ ಭೂಮಿಃ ಆದಿಶತು ಯತ್ ಧನಂ ಕಾಮಯಾಮಹೇ), ಆದರೆ ಅದನ್ನು ದಕ್ಕಿಸಿಕೊಡುವವನು ಇಂದ್ರ (೪೦).

ಕವಿಯ ಸಮುದಾಯದ ಇನ್ನೊಂದು ಜೀವನ ಚಿತ್ರವನ್ನು ಮುಂದಿನ ಕೆಲವು ಮಂತ್ರಗಳು ಕೊಡುತ್ತವೆ : ಕೆಲವು ಗುಂಪುಗಳಿಗೆ ಯುದ್ಧಾತುರ; ಅವನ್ನು ಹಿಮ್ಮೆಟ್ಟಿಸಲು ಕವಿಯ ಗುಂಪು ಸಿದ್ಧಗೊಳ್ಳುತ್ತಿದೆ. ಅದಕ್ಕಾಗಿ ಯುದ್ಧೋನ್ಮಾದದ ಹಾಡುಗಳು, ನೃತ್ಯಗಳು, ಕೂಗಾಡುವುದು, ತಮಟೆ ಹೊಡೆಯುವುದು, ಎಲ್ಲಾ ನಡೆಯುತ್ತವೆ. ಪೃಥ್ವಿ ಮಾತೆಯು ಕವಿಯ ಸಮುದಾಯದಲ್ಲಿ ಯಾವ ವೀರರೂ ಗತಿಸಿಹೋಗದಂತೆ ಅವರನ್ನು ಕಾಯಬೇಕು, ಮಹಿಳೆಯರು ಗಂಡಂದಿರನ್ನು ಕಳೆದುಕೊಳ್ಳಬಾರದು. ಯುದ್ಧದ ಕಾವಿನ ಚಿತ್ರಣ ಮತ್ತು ಯುದ್ಧದಲ್ಲಿ




ಸಹಜವಾದ ಮರಣಭೀತಿ ಇಲ್ಲಿ ಪ್ರತಿಫಲಿತವಾಗಿವೆ (೪೧ : ಯಸ್ಯಾಂ ಗಾಯಂತಿ ನೃತ್ಯಂತಿ ಭೂಮ್ಯಾಂ ಮರ್ತ್ಯಾಃ ವೈಲಬಾಃ। ಯುಧ್ಯಂತೇ ಯಸ್ಯಾಂ ಆಕ್ರಂದೋ ಯಸ್ಯಾಂ ವದತಿ ದುಂದುಭಿಃ। ಸಾ ನೋ ಭೂಮಿಃ ಪ್ರ ಣುದತಾಂ ಸಪತ್ನಾನ್ ಅಸಪತ್ನಂ ಮಾ ಪೃಥಿವೀ ಕೃಣೋತು ॥). ಯುದ್ಧಭೂಮಿಯಾಗಿ ಬಿಡುವ ಪೃಥ್ವಿಯು ಅಕ್ಕಿ, ಜವೆ, ಗೋಧಿ, ಮುಂತಾದ ಧಾನ್ಯಗಳ ಬೆಳೆಗೂ ಸಮರ್ಥಳು ಮತ್ತು "ಪಂಚಜನಾಃ" ಎನಿಸಿಕೊಳ್ಳುವ ಬುಡಕಟ್ಟು ಸಮುದಾಯಗಳಿಗೆ ಆಸರೆಯನ್ನೂ ನೀಡುವಂಥವಳು. ಅವಳು ಪರ್ಜನ್ಯ ಪ್ರಿಯೆ ; ಅವಳ ಮೂಳೆಗಳ ಮಜ್ಜೆಯೇ ಮಳೆ (೪೨).

ಹರಪ್ಪ ಸಂಸ್ಕೃತಿಯ ಜನರು ಕೋಟೆ–ಕೊತ್ತಲಗಳನ್ನು ಸುಭದ್ರವಾಗಿ ನಿರ್ಮಿಸಿಕೊಂಡಿದ್ದರು. ಅಥರ್ವವೇದದ ರಚನೆಯ ಕಾಲದ ವೈದಿಕ ಸಮುದಾಯವು ಅಷ್ಟು ಬಿಗಿಯಾದ ರಕ್ಷಣಾತಂತ್ರದಲ್ಲಿ ನಿಷ್ಣಾತವಾಗಿರಲಿಲ್ಲ. ಆದಾಗ್ಯೂ ಅವರಿಗೂ "ಪುರ"ಗಳಿದ್ದವು, ಅವನ್ನು ದೇವತೆಗಳು ನಿರ್ಮಿಸಿಕೊಟ್ಟಿದ್ದರು. ಅವುಗಳಾಚೆಯ ಬಯಲುಗಳಲ್ಲಿ ಈ ಜನ ತಮ್ಮ ವಿರೋಧಿಗಳನ್ನು ಯುದ್ಧದಲ್ಲಿ ಸೆಣಸುತ್ತಿದ್ದರು. ಪೃಥ್ವಿಯ ಗರ್ಭದಲ್ಲಿ ಪ್ರಜಾಪತಿಯು ರತ್ನಗಳನ್ನಿರಿಸಿರುವಂತೆ, ಯುದ್ಧ ವಿಜಯಿಗಳಾಗಿ ಹರ್ಷಿಸಲು ಅಗತ್ಯವಾದ್ದನ್ನೂ ಇರಿಸಿದ್ದಾನೆ (೪೩ : ... ಪ್ರಜಾಪತಿಃ ಪೃಥಿವೀಂ ವಿಶ್ವಗರ್ಭಾಂ ಆಶಾಮಾಶಾಂ ರಣ್ಯಾಂ ನಃ ಕರೋತು). ಅಷ್ಟೊಂದು ರತ್ನಗಳ ಆಗರವಾದ ಪೃಥ್ವಿಯು ಅವಳನ್ನಾಶ್ರಯಿಸಿರುವ ಮಾನವರಿಗೆ ರತ್ನಗಳನ್ನು ಸುರಿಸದಿರುತ್ತಾಳೆಯೆ ! ಪ್ರೀತ್ಯಾದರಗಳಿಂದ ಐಶ್ವರ್ಯವನ್ನು ನೀಡಬೇಕೆಂದು ಕವಿಯು ಪೃಥ್ವೀಮಾತೆಯನ್ನು ಕೇಳಿಕೊಳ್ಳುತ್ತಾನೆ (೪೪ : ನಿಧಿಂ ಬಿಭ್ರತೀ ಬಹುಧಾ ಗುಹಾ ವಸು ಮಣಿಂ ಹಿರಣ್ಯಂ ಪೃಥಿವೀ ದದಾತು ಮೇ। ವಸೂನಿ ನೋ ವಸುದಾ ರಾಸಮಾನಾ ದೇವೀ ದಧಾತು ಸುಮನಸ್ಯಮಾನಾ ॥). ಪೃಥ್ವಿಯು ತನ್ನಲ್ಲಿ ಅಡಗಿಸಿಕೊಂಡಿರುವ ರತ್ನಾದಿಗಳಲ್ಲಿ ವೈವಿಧ್ಯವಿರುವಂತೆ ಅವಳು ಸಲಹುವ ಮಾನವ ಸಮುದಾಯಗಳಲ್ಲೂ ವೈವಿಧ್ಯವಿದೆ. ವೈವಿಧ್ಯವನ್ನು ಈ ಸಮುದಾಯಗಳು ಅಂಗೀಕರಿಸಿವೆ. ಆ ಸಮುದಾಯಗಳ ಲಕ್ಷಣಗಳಲ್ಲೂ ವೈವಿಧ್ಯವಿದೆ. ದಸ್ಯುಗಳ ಭಾಷೆ ಮತ್ತು ಲಕ್ಷಣಗಳು ವೈದಿಕರ ಭಾಷೆ ಮತ್ತು ಲಕ್ಷಣಗಳಿಗಿಂತಲೂ ಭಿನ್ನ; ಅವರ ಆಚರಣೆಗಳಲ್ಲೂ ಭಿನ್ನತೆ ಇದೆ : ಎಲ್ಲಾ ಅವರವರಿಗೆ ತಕ್ಕಂತೆ. ಪುಷ್ಕಳವಾದ ಗೋವಿನಂತೆ ಪೃಥ್ವಿಯು ಸಾವಿರ ಹೊಳೆಗಳನ್ನು ಹರಿಸಲಿ ಎಂಬ ಭಾವವನ್ನು ಕವಿಯು ಅಭಿವ್ಯಕ್ತಿಸಿದ್ದಾನೆ. (ಹೀಗಿರುವಾಗ "ಎಲ್ಲರಿಗೂ ಒಂದೇ ಆಚರಣೆ ಇರಬೇಕು" ಎಂದು ಆಗ್ರಹಿಸುವುದು ವೈದಿಕ ಸಂಸ್ಕೃತಿಗೆ ತೀರಾ ವಿರೋಧವಾದದ್ದೆಂಬುದನ್ನು ಮನಸ್ಸಿಗೆ ತಂದುಕೊಳ್ಳಬೇಕಲ್ಲವೆ ?) – ೪೫ : ಜನಂ ಬಿಭ್ರತೀ ಬಹುಧಾ ವಿವಾಚಸಂ ನಾನಾಧರ್ಮಾಣಂ ಪೃಥಿವೀ ಯಥಾ ಔಕಸಂ। ಸಹಸ್ರಂ ಧಾರಾ ದ್ರವಿಣಸ್ಯ ಮೇ ದುಹಾಂ ಧ್ರುವೇವ ಧೇನುಃ ಅನಪಸ್ಫುರಂತೀ ॥ "ಸಾವಿರ ಹೂವುಗಳು ಅರಳಲಿ" ಎಂಬ ಮಾನವ ಸಂಸ್ಕೃತಿಯ ಆಶಯವು ಅಥರ್ವವೇದದಷ್ಟು ಪ್ರಾಚೀನವೆಂದು ನಾವು ಹೆಮ್ಮೆಯಿಂದ ಬೀಗಬಹುದು. ಅದಕ್ಕೆ ವ್ಯತಿರಿಕ್ತವಾದ 'ಏಕತ್ವ'ದ ಪ್ರತಿಪಾದನೆಯು ವೈದಿಕ ಪರಂಪರೆಗೆ ಹೊರತಾದ್ದು ಎಂಬುದನ್ನು ಒತ್ತಿಹೇಳಬೇಕಾಗಿದೆ.

ಪ್ರಪಂಚದಲ್ಲಿ ಕೆಡುಕು ಇರಬೇಕಿತ್ತಾದರೂ ಏಕೆ ಎಂಬ ಪ್ರಶ್ನೆಯು ಗಾಂಧೀಜಿಯನ್ನು ಬಾಧಿಸುತ್ತಿದ್ದಿತಂತೆ; ಆದ್ದರಿಂದ ಅವರು ಹೇಳುತ್ತಿದ್ದರು, "ಎಲ್ಲಾ ಸರಿ, ಆದರೆ ಮುಳ್ಳು ಮತ್ತು ಚೇಳನ್ನು ಭಗವಂತ ಏಕೆ ಸೃಷ್ಟಿಸಬೇಕಿತ್ತು ?" ಎಂದು. ಅಥರ್ವವೇದದ ಕವಿಯು ಅಂತಹ ಪ್ರಶ್ನೆಯನ್ನು ಹಾಕಿಕೊಳ್ಳಲಿಲ್ಲ, ಆದರೆ ಅವೆಲ್ಲಾ ಇವೆಯೆಂಬುದನ್ನು ಗುರುತಿಸಿದ. ಅಂತೆಯೇ, ಕೆಲವು ಜೀವಿಗಳು ಶಿಶಿರಸ್ವಾಪ ಅಥವಾ ಶೀತನಿದ್ರೆಗೆ ತಮ್ಮನ್ನು ತೆರೆದುಕೊಳ್ಳುತ್ತವೆ ಎಂಬುದನ್ನೂ ಅವನು ಗಮನಿಸಿದ. ಕಪ್ಪೆ ಮತ್ತು ಇನ್ನು ಕೆಲವು ಹುಳುಗಳಿಗೆ ಪ್ರಕೃತಿಯು ಇಂತಹ ಸ್ಥಿತಿಯನ್ನು ವಿಧಿಸಿದೆ. ವರ್ಷದ ಕಾಲ ನಿದ್ದೆಯಲ್ಲಿದ್ದು ಮಳೆ ಸುರಿದಾಗ ಎಚ್ಚರಗೊಳ್ಳುವ ಕಪ್ಪೆಗಳ ಬಗ್ಗೆ ಋಗ್ವೇದದ ಮಾತನ್ನು ಹಿಂದೆಯೇ

ನೋಡಿದ್ದೇವೆ. ಅದಕ್ಕೆ ಪೂರಕವಾಗಿ ಅಥರ್ವವೇದದ ಕವಿ ಹೇಳುತ್ತಾನೆ, **"**ಪೃಥ್ವಿಯಲ್ಲಿ ಹಾವು, ಚೇಳು, ಎಲ್ಲಾ ಅಂತಸ್ಥವಾಗಿವೆ. ಅವು ಕೆಲವೇಳೆ ಕಾಣಸಿಗವು. ಅವಕ್ಕೂ ಚಳಿ, ಭಯ, ಇರಬೇಕು. ಮಳೆಯ ನಂತರ ಅವು ಹೊರಬಂದಾಗ ನಮ್ಮ ಮೇಲೆ ಬರದಿರಲಿ ಮತ್ತು ಎಲ್ಲಾ ಮಂಗಳಕರ ವಾಗಲಿ**"**, ಎಂದು (೪೬ : ಯಸ್ತೇ ಸರ್ಪೋ ವೃಶ್ಚಿಕಃ ತೃಷ್ಟದಂಶ್ಮಾ ಹೇಮಂತ ಜಬ್ಧೋ ಭೃಮಲೋ ಗುಹಾ ಶಯೇ। ಕ್ರಿಮಿಃ ಜಿನ್ವತ್ ಪೃಥಿವಿ ಯದ್ಯದೇಜತಿ ಪ್ರಾವೃಷಿ ತನ್ನಃ ಸರ್ಪನ್ ಮಾ ಉಪಸೃಪತ್ ಯಚ್ಛಿವಂ ತೇನ ನೋ ಮೃಡ ॥).

ಪೃಥಿವಿಯು ಸಂಚಾರಕ್ಕೆ ಎಷ್ಟೊಂದು ಹಾದಿಗಳನ್ನು ಮಾಡಿಕೊಟ್ಟಿದೆ, ಎಷ್ಟು ದಿಕ್ಕುಗಳಲ್ಲಿ ಮಾನವ ಸಂಚರಿಸಬಹುದು, ಎಂದು ಕವಿಯು ಭಾವುಕನಾಗುತ್ತಾನೆ. ರಥಗಳಿಗೆ ಬೇರೆಯೇ ರಸ್ತೆ, ಅಲ್ಲಿ ಅವಕ್ಕೆ ಒಳಿತು ಮತ್ತು ಕೆಡುಕಿನ ಸಾಧ್ಯತೆಗಳುಂಟು. ಪೃಥ್ವಿದೇವಿಯ ಶುಭಕಾಮನೆ ಇದ್ದರೆ ಶತ್ರುಗಳ ಮತ್ತು ಕಳ್ಳರ ಹಿಂಸೆಯೇನೂ ಎದುರಾಗದು ಎಂಬುದು ಅವನ ಭಾವ (೪೭). ಪೃಥ್ವಿಗೆ ಯಾರ ಬಗೆಗೂ ಅನಾದರವಿಲ್ಲ; ಆದ್ದರಿಂದ ಪ್ರಾಜ್ಞರನ್ನು ಹೊರುವಂತೆ ಮೂರ್ಖರನ್ನೂ ಹೊರುತ್ತಾಳೆ. ಹೊರೆಯು ಹಗುರವೋ ಭಾರವೋ ಎಂಬ ಯೋಚನೆ ಅವಳಿಗಿಲ್ಲ. ಒಳಿತು–ಕೆಡುಕುಗಳಲ್ಲಿ ಯಾವುದು ನಷ್ಟವಾದರೂ ಅವಳಿಗೆ ಕ್ಷೋಭೆಯಿಲ್ಲ. ಅವಳಿಗೆ ಹಂದಿಯೂ ಒಂದೇ ಮುಳ್ಳುಹಂದಿಯೂ ಒಂದೇ, ಎಲ್ಲವನ್ನೂ ಏಕಪ್ರಕಾರವಾಗಿ ಸಹಿಸುತ್ತಾಳೆ, ಸಲಹುತ್ತಾಳೆ (೪೮ : ಮಲ್ವಂ ಬಿಭ್ರತೀ ಗುರುಭೃತ್ ಭದ್ರಪಾಪಸ್ಯ ನಿಧನಂ ತಿತಿಕ್ಷುಃ। ವರಾಹೇಣ ಪೃಥಿವೀ ಸಂವಿಧಾನಾ ಸೂಕರಾಯ ವಿ ಜಿಹೀತೇ ಮೃಗಾಯ ॥). ಕಾಡಿನಲ್ಲಿ ಸಹ ಎಷ್ಟು ವಿಧದ ಮೃಗಗಳು ಸಂಚರಿಸುತ್ತವೆ, ಅವೆಲ್ಲಾ ಕಾಡಿನ ಪ್ರಿಯರು, ಕಾಡಿಗೂ ಪ್ರಿಯರು. ಅವುಗಳಲ್ಲಿ ಮಾನವ ಭಕ್ಷಕಗಳಿವೆ, ಸಿಂಹ–ಹುಲಿ–ನರಿ–ತೋಳ, ಎಲ್ಲಾ ಇವೆ. ಕೆಡುಕುಂಟುಮಾಡುವ ಕೆಲವು ಭೂತಗಳು ಇದ್ದಾವು. ಪೃಥ್ವಿಯು ಮಾನವನಿಗೆ ಅವುಗಳಿಂದ ರಕ್ಷಣೆ ನೀಡಬೇಕು (೪೯). ಗಂಧರ್ವರು, ಅಪ್ಸರೆಯರು, ಪಿಶಾಚಿಗಳು, ರಾಕ್ಷಸರು, ಇತ್ಯಾದಿ ಯಾರಾದರೂ ಸರಿಯೆ, ಅವರನ್ನೂ ಪೃಥ್ವಿಯು ಮಾನವನಿಂದ ದೂರವಿಡಬೇಕು (೫೦). (ಗಂಗಾಬಯಲಿಗೆ ಕಾಲಿಡುವವರೆಗೆ ವೈದಿಕ ಸಮುದಾಯಕ್ಕೆ ಹುಲಿಯ ಪರಿಚಯವಿರಲಿಲ್ಲವೆಂದು ಕೆಲವು ವಿದ್ವಾಂಸರು ಹೇಳಿದ್ದಾರೆ. ಅಥರ್ವವೇದದ ಪೃಥ್ವೀಸೂಕ್ತಕ್ಕಂತೂ ಅದು ಪರಿಚಯವಿದೆ, ಆದರೆ ಅದನ್ನು ರಚಿಸಿದ ಕವಿ ಎಲ್ಲಿದ್ದನೆಂಬುದು ನಮಗೆ ತಿಳಿಯದು). ಅರಣ್ಯವಾಸಿಗಳು ಮತ್ತು ಗಂಧರ್ವಾಪ್ಸರೆಯರು ಸಾಲದೆಂಬಂತೆ ಪೃಥ್ವಿಯು ಬೇರೇನೆಲ್ಲಾ ಕ್ರಿಮಿ–ಕೀಟಗಳು ಮತ್ತು ಪಕ್ಷಿಗಳಿಗೆ ಆಶ್ರಯ ನೀಡಿದೆ ಎಂದು ಕವಿಯು ಮೋಹಿತನಾಗುತ್ತಾನೆ. ರೆಕ್ಕೆಗಳು ಮತ್ತು ಎರಡು ಪಾದಗಳಿರುವ ಹಕ್ಕಿಗಳು, ಹಂಸಗಳು, ಕಾಗೆಗಳು, ಮುಂತಾದ ಪಕ್ಷಿಗಳು, ಪೃಥ್ವಿಯನ್ನಾಶ್ರಯಿಸಿವೆ. ಭೋರ್ಗರೆಯುವ ಬಿರುಗಾಳಿ, ಸುಂಟರಗಾಳಿ, ಇವು ಮಾತರಿಶ್ವನ ಕ್ರೀಡೆ. ಧೂಳೆಬ್ಬಿಸುವುದು, ಗಿಡ–ಮರಗಳನ್ನು ಜಗ್ಗಿಸಿಬಿಡುವುದು, ಸಿಡಿಲು–ಮಳೆಯ ಅಬ್ಬರ, ಎಲ್ಲಾ ಈ ಮಾತರಿಶ್ವನ ಪ್ರತಾಪಗಳೇ ಆಗಿವೆ (೫೧ : ಯಾಂ ದ್ವಿಪಾದಃ ಪಕ್ಷಿಣಃ ಸಂಪತಂತಿ ಹಂಸಾಃ ಸುಪರ್ಣಾಃ ಶಕುನಾ ವಯಾಂಸಿ। ಯಸ್ಯಾಂ ವಾತೋ ಮಾತರಿಶ್ವಾ ಈಯತೇ ರಜಾಂಸಿ ಕೃಣ್ವನ್ ಚ್ಯಾವಯಂಶ್ಚ ವೃಕ್ಷಾನ್। ವಾತಸ್ಯ ಪ್ರವಾಂ ಉಪವಾಂ ಅನ ವಾತ್ಯರ್ಚಿಃ॥). ಪೃಥ್ವಿಯ ಮೋಹಕತೆ ಮತ್ತು ಭೀಕರತೆ, ಎರಡೂ ಕವಿಗೆ ರಮ್ಯವೇ ಇರಬೇಕು. ರಾತ್ರಿ–ಹಗಲುಗಳ ವರ್ಣಮಯ ಸೊಗಸು ಸಹ ಅವನಿಗೆ ಒಂದು ಆಕರ್ಷಣೆಯೇ. ಹೊಂಬಣ್ಣವೂ ಉಂಟು, ಮಬ್ಬಾಗುವುದೂ ಉಂಟು; ಅವುಗಳೊಟ್ಟಿಗೆ ಕೆಲವೇಳೆ ಮಳೆಯು ಬೇರೆ. ಇವುಗಳಿಂದ ರಕ್ಷಣೆ ನೀಡಲು ಪೃಥ್ವಿಯು ಮನೆಗಳನ್ನು ಸಂರಕ್ಷಿಸುತ್ತಾಳೆ (೫೨). ದ್ಯುಲೋಕ–ಅಂತರಿಕ್ಷ–ಪೃಥಿವೀ ಎಲ್ಲವೂ ಅತಿ ವಿಶಾಲ; ಅಗ್ನಿಯು ಮಾನಸಿಕ ಸ್ಥೈರ್ಯವನ್ನು ತುಂಬುವ ಶಕ್ತಿ (೫೩). ಇಷ್ಟೆಲ್ಲಾ ಅನಿಶ್ಚಿತ–ಘೋರ ವಿಪತ್ತುಗಳ ನಡುವೆಯೂ ಮಾನವನಿಗೆ ಭೂಪತಿಯ ಸ್ಥಾನವಿದೆ; ಆದರೆ ಪೃಥ್ವಿಯ ಮೇಲೆ ಅವನು ಬೇರೆ ಜೀವಿಗಳ ನಂತರದವನು (೫೪ : ಅಹಮಸ್ಮಿ ಸಹಮಾನ ಉತ್ತರೋ ನಾಮ ಭೂಮ್ಯಾಂ). ಪ್ರಕೃತಿಮಾತೆಯನ್ನು ದೇವತೆಗಳು ಪೂರ್ವಕ್ಕೆ ಪಸರಿಸುವಂತೆ ಮಾಡಿದಾಗ ಏನು ಶೋಭೆ, ಎಷ್ಟು ಅದ್ಭುತಗಳು, ಏನು ಚಮತ್ಕಾರ! ಅವಳು ನಾಲ್ಕು ದಿಕ್ಕುಗಳನ್ನು ರಚಿಸಿಕೊಂಡುಬಿಟ್ಟಿದ್ದಾಳೆ (೫೫). ಇವೆಲ್ಲವುಗಳ ಜೊತೆ ಸುಖದಿಂದ ಜನಸಮುದಾಯಗಳಿವೆ, ಕಾಡುಪ್ರದೇಶಗಳಿವೆ, ಸಭೆ–ಸಮಿತಿಗಳಿವೆ, ಸಂಗ್ರಾಮಗಳಿವೆ : ಅಲ್ಲೆಲ್ಲಾ ಪೃಥ್ವಿಯ ಶ್ಲಾಘನೆ ಕೇಳಿಬರುತ್ತದೆ. (೫೬ ...ತೇಷು ಚಾರು ವದೇಮ ತೇ॥). ಪೃಥ್ವಿಯು ಎಂದೂ ಸ್ಥಗಿತವಲ್ಲ. ಒಂದೆಡೆ ಕುದುರೆಯು ಧೂಳೆಬ್ಬಿಸಿದಂತೆ ಇನ್ನೊಂದೆಡೆ ಭೂಮಿಯ ನಿವಾಸಿಗಳು ಚದುರಿಹೋಗುತ್ತಿರುತ್ತಾರೆ. ಆದರೆ ಪೃಥ್ವಿಯು ಒಡತಿಯಾಗಿ, ನಾಯಕಿಯಾಗಿ, ಸತ್ಯಪಾಲಕಿಯಾಗಿ (ಅಂದರೆ, ನಿಯಮಗಳಿಗೆ ಸ್ಥಿರವಾಗಿ ಬದ್ಧಳಾಗಿ), ಸುಭಗೆಯಾಗಿ, ಗಿಡಗಳ ಸಂರಕ್ಷಕಿಯಾಗಿ, ಹಲವು ಮುಖಗಳನ್ನು ಹೊಂದುತ್ತಾಳೆ, ಜವಾಬ್ದಾರಿ ಹೊರುತ್ತಾಳೆ (೫೭ : ಅಶ್ವ ಇವ ರಜೋ ದುಧುವೇ ವಿ ತಾನ್ ಜನಾನ್ ಯ ಆಕ್ಷಿಯನ್ ಪೃಥಿವೀಂ ಯಾದಜಾಯತ। ಮಂದ್ರಾಗ್ರೇತ್ವರೀ ಭುವನಸ್ಯ ಗೋಪಾ ವನಸ್ಪತೀನಾಂ ಗೃಭಿಃ ಓಷಧೀನಾಂ॥).

ಸೂಕ್ತದ ಅಂತಿಮ ಭಾಗಕ್ಕೆ ಬರುತ್ತಾ ಕವಿಯು ಹೆಚ್ಚು ಹೆಚ್ಚು ನಮ್ರನಾಗುತ್ತಾನೆ, ಕೃತಜ್ಞತಾ ಭಾವದಿಂದ ತುಂಬಿಹೋಗುತ್ತಾನೆ. **"**ನಾನು ಕಾಣುವುದೆಲ್ಲಾ ಸೊಬಗು, ಆಡುವುದೆಲ್ಲಾ ಸಿಹಿ ಮಾತು. ಕಣ್ಣಿಗೆ ಆನಂದಮಯ, ನಾನು ಭಾವುಕನಾಗಿ ಸ್ತಂಭೀಭೂತನಾಗಿದ್ದೇನೆ. ಇಷ್ಟು ಸುಂದರವಾದ ಪೃಥ್ವಿಗೆ ಗಾಯ ಮಾಡಹೊರಡು ವವರನ್ನು, ಉತ್ಪಾಟನೆಗೆ ಕೈಹಾಕುವವರನ್ನು ಕೊಲ್ಲುತ್ತೇನೆ**"** ಎನ್ನುತ್ತಾನವನು (೫೮ : ಯದ್ವದಾಮಿ ಮಧುಮತ್ ತದ್ವದಾಮಿ ಯದೀಕ್ಷೇ ತತ್ ವನಂತಿ ಮಾ। ತ್ವಿಷೀಮಾನಸ್ಮಿ ಜೂತಿಮಾನವಾನ್ ಯಾನ್ ಹನ್ಮಿ ದೋಧತಃ॥). ಪೃಥ್ವಿಯು ಶಾಂತಿಮಯಿ, ಸುರಭಿಯುಕ್ತೆ, ಸಿಹಿಮಾಧುರ್ಯಯುಕ್ತೆ, ಮೊಲೆಗಳಲ್ಲಿ ಹಾಲು ತುಂಬಿಕೊಂಡಿರುವವಳು; ಅವಳು ನನಗೆ ಹಾಲುಣಿಸಿ ಪೋಷಿಸಲಿ (೫೯ : ಶಾಂತಿವಾ ಸುರಭಿಃ ಸ್ಯೋನಾ ಕೀಲಾಲೋಘ್ನೀ ಪಯಸ್ವತೀ। ಭೂಮಿರಧಿ ಬ್ರವೀತು ಮೇ ಪೃಥಿವೀ ಪಯಸಾ ಸಹ॥). ಸೃಷ್ಟಿಕಾಲದಲ್ಲಿ ವಿಶ್ವಕರ್ಮನು ಹವಿಸ್ಸು ತಂದಾಗ ಅವಳು ಅಂತರಿಕ್ಷದ ಅಲೆಗಳ ಸಾಗರದಲ್ಲಿದ್ದಳು; ಹೀಗಾಗಿ, ಮಾನವನಿಗೆ ಆಕೆ ಅತ್ಯುಪಯುಕ್ತ ನಾವೆ; ಅಂತರ್ಧಾನಳಾಗಿಯೂ ಅವಳು ಎಲ್ಲರಿಗೂ ಸುಖ ನೀಡಲು ಮುಂದಾಗಿ ದ್ದಂಥವಳು (೬೦). **"**ತಾಯೆ, ನೀನು ಜನಸಮುದಾಯಗಳನ್ನೆಲ್ಲಾ ತುಂಬಿಕೊಂಡಿರುವ ದೋಣಿ. ಆ ಅರ್ಥದಲ್ಲಿ ನೀನು ಅದಿತಿ. ಅಪೇಕ್ಷೆಗಳನ್ನು ಪೂರೈಸುವ ನೀನು ಎಲ್ಲವನ್ನೂ ನಿನ್ನ ತೆಕ್ಕೆಗೆ ತೆಗೆದುಕೊಂಡಿದ್ದೀಯೆ. ಆದಿನಿಯಮವಾದ ಋತದ ಮೊದಲ ಉತ್ಪನ್ನನು ಪ್ರಜಾಪತಿ. ನಿನ್ನಲ್ಲಿರುವುದನ್ನೆಲ್ಲಾ ನಿನಗೆ ತಂದೀಯುವವನು ಅವನು (೬೧). ನಿನ್ನ ಸ್ತನಗಳು ನಿರೋಗಿಯಾಗಿರಲಿ, ಆಗ ನೀನು ನಮ್ಮನ್ನು ಸರ್ವಥಾ ಉಪಕರಿಸುವೆ; ದೀರ್ಘಾಯುಗಳಾಗಿ, ಎಚ್ಚರದಿಂದ ಎಲ್ಲವನ್ನೂ ಗಮನಿಸುತ್ತಾ ನಾವು ನಿನ್ನ ಸೇವಕರಾಗಿರುವ ಪ್ರಾಪ್ತಿ ನಮಗಿರಲಿ (೬೨ : ಉಪಸ್ಥಾಃ ತೇ ಅನಮೀವಾ ಅಯಕ್ಷ್ಮಾ ಅಸ್ಮಭ್ಯಂ ಸಂತು ಪೃಥಿವೀ ಪ್ರಸೂತಾಃ। ದೀರ್ಘಂ ನ ಆಯುಃ ಪ್ರತಿಬುಧ್ಯಮಾನಾ ವಯಂ ತುಭ್ಯಂ ಬಲಿಹೃತಃ ಸ್ಯಾಮ॥). ತಾಯಿ, ಭೂಮಾತೆ, ಸುಸ್ಥಿರನಾಗಿರುವಂತೆ ನನ್ನನ್ನು ನೋಡಿಕೊ; ಶ್ರೇಯಸ್ಸು ಮತ್ತು ಸಂಪತ್ತು ನನಗೆ ಕರುಣಿಸು; ದ್ಯುಲೋಕದ ಆಣತಿಗೆ ತಲೆಬಾಗಿ ನಡೆಯುವಂತೆ ಮಾಡು**"** (೬೩ : ಭೂಮೇ ಮಾತಃ ನಿ ಧೇಹಿ ಮಾ ಭದ್ರಯಾ ಸುಪ್ರತಿಷ್ಠಿತಂ। ಸಂವಿದಾನಾ ದಿವಾಕವೇ ಶ್ರಿಯಾಂ ಮಾ ಧೇಹಿ ಭೂತ್ಯಾಂ॥).

ಮೂರು ಸಾವಿರ ವರ್ಷಗಳ ಹಿಂದಿನ ಕವಿಯ, ಜನಸಮುದಾಯದ, ಪ್ರಸನ್ನ ಆಶಯವು ಇಂದಿನ ನಮ್ಮದೂ ಆಗಿದೆ. ಇಂದಿನ ಕವಿಗಳು ಅದನ್ನು ಹಲವು ರೀತಿಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಉದಾಹರಣೆಗೆ, ಸುಜಲಾಂ ಸುಫಲಾಂ ಮಲಯಜ ಶೀತಲಾಂ ಸಸ್ಯಶ್ಯಾಮಲಾಂ ಮಾತರಂ ...ಸುಹಾಸಿನೀಂ ಸುಮಧುರಭಾಷಿಣೀಂ ಸುಖದಾಂ ವರದಾಂ ಮಾತರಂ ವಂದೇ.

ಈ ಹಾಡಿನ ಮುಂದಿನ ಭಾಗದಲ್ಲಿ ಬಂಕಿಂಚಂದ್ರರು 'ನಾನು ಕರಾಳ ಸ್ವರೂಪಿಣಿ, ಸಹಸ್ರ ಭುಜಗಳನ್ನುಳ್ಳವಳು, ಶತ್ರುಗಳ ಮರ್ದನ ಮಾಡುತ್ತೇನೆ' ಎಂಬರ್ಥ ಬರುವಂತೆ ಮಾತೆಯನ್ನು ಚಿತ್ರಿಸಿದ್ದಾರೆ. ಅಥರ್ವವೇದದ ಕವಿಯು ಪೃಥ್ವಿಯ ಬಾಯಲ್ಲಿ ಅಂತಹ ಕರ್ಕಶ ಮಾತುಗಳನ್ನಾಡಿಸಿಲ್ಲ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ ಬೆಂಗಳೂರು – ೫೬೦ ೦೮೫

# ಜೀವ ಚೆಲ್ಲಿ ಹೋದವರು !




ಯಾರದೊ ಸಿಟ್ಟು,
ಯಾವ್ಯಾವುದೊ ಮತ್ಸರ,
ಯಾರದೊ ಹೊಣೆಗೇಡಿತನ,
ಮತ್ತ್ಯಾರದೊ ಅಸಹಾಯಕತೆಗೆ
ಹೆಣವಾಗಬೇಕೆ ನೀ ಕಂದ ?

ಎಷ್ಟು ತಾರೆ ಸೂರ್ಯಚಂದ್ರ
ಬಿಗಿಮುಷ್ಟಿಯಲ್ಲಿಟ್ಟ ಅಯ್ಲರ್ ಕೂಸೆ !
ಇದೀಗ ಬಂದವ ಈಗ ಹೊರಟುಬಿಟ್ಟೆ ?
ಮೆಡಿಟರೇನಿಯನ್ ಕಡಲ ತಾಯಿ
ಮುಟ್ಟಿ ಎಬ್ಬಿಸುತ್ತಿರುವಳೆ?
ದಂಡೆ ಬಂಡೆಗೆ ಜಜ್ಜಿ ತಲೆ
ರೋದಿಸುತ್ತಿರುವಳೆ ಅಕ್ಕ ಅಲೆ ??

ಯಾರು  ಚೆಲ್ಲಿ ಹೋದರೋ ನಿನ್ನ
ಹೇಗೆ ಮರೆತು ಬಿಟ್ಟರೊ?
ಮರೆಯಬಾರದು ಚರಿತ್ರೆ
ಜೀವಚೆಲ್ಲಿ ಹೊದವರ ಕತೆಯ !
ಏನು ವಚನ ಕೊಡಲಿ ನಿನಗೆ
ಭೋರ್ಗರೆಯುತಿದೆ ಕಡಲುಕ್ಕಿ
ನೋವು ನಿರಾಸೆ ತೆಕ್ಕಿ ಮುಕ್ಕಿ ??

**ಮಾಲತಿ ಪಟ್ಟಣಶೆಟ್ಟಿ**
ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ
ಜೆ. ಸಿ. ರಸ್ತೆ, ಬೆಂಗಳೂರು – ೫೬೦ ೦೦೨

ಲೋಕಸಭೆಗೆ ೨೦೧೪ರಲ್ಲಿ ನಡೆದ ಚುನಾವಣೆಗಳು ಎಲ್ಲ ರೀತಿಯಲ್ಲೂ ವಿಶಿಷ್ಟವಾದ್ದಾಗಿತ್ತು. ಹತ್ತು ವರ್ಷಗಳು ಆಡಳಿತದ ಚುಕ್ಕಾಣಿ ಹಿಡಿದಿದ್ದ ಕಾಂಗ್ರೆಸ್ ನೇತೃತ್ವದ ಯುಪಿಎ ಸಂಪೂರ್ಣವಾಗಿ ನೆಲ ಕಚ್ಚಿತು. ಸ್ವಾತಂತ್ರ್ಯಾನಂತರದಲ್ಲಿ ಅರ್ಧ ಶತಮಾನಕ್ಕೂ ಹೆಚ್ಚು ಕಾಲ ಕೇಂದ್ರದಲ್ಲಿ ಅಧಿಕಾರದಲ್ಲಿದ್ದ ಕಾಂಗ್ರೆಸ್ ಪಕ್ಷ ಧೂಳೀಪಟವಾಯಿತು. ಹಾಗೆಯೇ ಇಷ್ಟು ವರ್ಷಗಳೂ ಸಾಕಷ್ಟು ಸಂಖ್ಯೆಯಲ್ಲಿ ಪ್ರಾತಿನಿಧ್ಯ ಪಡೆದಿದ್ದ ಎಡಪಕ್ಷಗಳು ನಗಣ್ಯವಾದವು. ಭಾರತೀಯ ಜನತಾಪಕ್ಷ ಬಹುಮತ ಗಳಿಸಿತು. ಅದರ ನಾಯಕತ್ವದಲ್ಲಿ ಸ್ಥಾಪನೆಗೊಂಡಿದ್ದ ಎನ್‌ಡಿಎ ಮೂರನೇ ಎರಡಕ್ಕೂ ಹೆಚ್ಚು ಸ್ಥಾನಗಳನ್ನು ಪಡೆಯಿತು. ಭಾಜಪ ೨೮೩ ಸ್ಥಾನಗಳನ್ನೂ, ಅದರ ಅಂಗ ಪಕ್ಷಗಳಾದ ತೆಲುಗು ದೇಶಂ ಪಕ್ಷ ೧೬, ಶಿವಸೇನೆ ೧೮, ಶಿರೋಮಣಿ ಅಕಾಲಿದಳ ೪ ಸ್ಥಾನಗಳನ್ನು ಗಳಿಸಿದವು. ಎನ್‌ಡಿಎ ಒಟ್ಟು ೩೩೬ ಸ್ಥಾನಗಳನ್ನು ಪಡೆಯಿತು. ಪ್ರತಿ ಪಕ್ಷಗಳ ಪ್ರಾಬಲ್ಯ ತೀವ್ರವಾಗಿ ಕುಗ್ಗಿತು. ಯುಪಿಎ ೫೩ ಸ್ಥಾನಗಳನ್ನು ಪಡೆದು ನಿರ್ನಾಮವಾಯಿತು. ಇದರಲ್ಲಿ ಕಾಂಗ್ರೆಸ್ ೪೪, ಎನ್‌ಸಿಪಿ ೫, ಆರ್‌ಜೆಡಿ ೪ ಸ್ಥಾನಗಳಿಗೆ ತೃಪ್ತಿಪಟ್ಟುಕೊಳ್ಳಬೇಕಾಯಿತು. ಹೊಸದಾಗಿ ಸ್ಥಾಪನೆಗೊಂಡ ಆಮ್ ಆದ್ಮಿ ಪಕ್ಷ ೪ ಸ್ಥಾನಗಳನ್ನು, ಎಐಎಡಿಎಂಕೆ ೩೬, ಸಮಾಜವಾದಿ ಪಕ್ಷ ೫, ತೃಣಮೂಲ ಕಾಂಗ್ರೆಸ್ ೩೪, ಸಿಪಿಐ ೧, ಸಿಪಿಎಂ ೯. ಇದು ೨೦೧೪ರ ಚುನಾವಣೆ ಫಲಿತಾಂಶಗಳ ಒಂದು ನೋಟ. ಪ್ರತಿಪಕ್ಷಗಳಲ್ಲಿ ಯಾವೊಂದೂ ಎರಡಂಕಿ ದಾಟದೇ ಹೋದದ್ದು ವಿಶೇಷ . ಯಾವತ್ತಿನಂತೆ ಈ ಚುನಾವಣೆಗಳಲ್ಲೂ ಮಹಿಳೆಯರ  ಪ್ರಾತಿನಿಧ್ಯ ಶೇ. ೧೧ರಷ್ಟು ಮಾತ್ರ . ಹೆಚ್ಚು ಕಡಿಮೆ ಮೂರನೇ ಒಂದರಷ್ಟು ಆಯ್ಕೆಯಾಗಿರುವ ಸದಸ್ಯರ ಮೇಲೆ (೧೫೮) ಕ್ರಿಮಿನಲ್ ಮೊಕದ್ದಮೆಗಳಿವೆ. ಇವರ ಪೈಕಿ ೭೮ ಸದಸ್ಯರು ಗಂಭೀರವಾದ ಆರೋಪ ಎದುರಿಸುತ್ತಿದ್ದಾರೆ. ಗಮನಿಸಬೇಕಾದ ಸಂಗತಿ ಎಂದರೆ ಒಟ್ಟು ೫೪೩ ಲೋಕಸಭಾ ಸದಸ್ಯರ ಪೈಕಿ ೩೯೩ ಮಂದಿ ಪದವೀಧರರಿದ್ದಾರೆ, ೩೦೦ ಸದಸ್ಯರು ಬಹುಕೋಟಿ ರೂ.ಗಳನ್ನು ಹೊಂದಿರುವ ಶ್ರೀಮಂತರು. ಇವಿಷ್ಟು ಅಂಕಿಅಂಶಗಳು.

ಚುನಾವಣೆಗಳು ಇನ್ನೊಂದು ರೀತಿಯಲ್ಲಿ ವಿಶೇಷವಾಗಿದ್ದವು. ಅದೆಂದರೆ ಕಾರ್ಪೊರೇಟ್ ಸಂಸ್ಥೆಗಳು ವಹಿಸಿದ ಪಾತ್ರ. ಇದುವರೆಗೆ ಕಾಂಗ್ರೆಸ್ಸನ್ನು ಬೆಂಬಲಿಸುತ್ತಿದ್ದ ಬಂಡವಾಳಗಾರರು ಈ ಚುನಾವಣೆಗಳಲ್ಲಿ ಭಾಜಪವನ್ನು ಬೆಂಬಲಿಸಿದ್ದು, ಇದು ಬಹಿರಂಗವಾಗಿಯೇ ವ್ಯಕ್ತಗೊಂಡಿದ್ದಲ್ಲದೆ ಹಣದ ಹೊಳೆಯೇ ಹರಿಯಿತು. ಕಾರ್ಪೊರೇಟ್ ಒಡೆತನದಲ್ಲಿರುವ ಮಾಧ್ಯಮಗಳು, ಮುಖ್ಯವಾಗಿ ಖಾಸಗಿ ಟೆಲಿವಿಷನ್ ಚಾನಲ್‌ಗಳು ಬಹಿರಂಗವಾಗಿಯೇ ಭಾಜಪ ಪರ ಪ್ರಚಾರ ಮಾಡಿದುವು. ಭಾರತೀಯ ಜನತಾ ಪಕ್ಷ ಗುಜರಾತಿನ ಮುಖ್ಯಮಂತ್ರಿ ನರೇಂದ್ರ ಮೋದಿ ಅವರನ್ನು ಪ್ರಧಾನಮಂತ್ರಿ ಅಭ್ಯರ್ಥಿಯನ್ನಾಗಿ ಮುಂದೆ ಮಾಡಿತು. 'ಗುಜರಾತ್ ಮಾದರಿ', 'ಒಳ್ಳೆಯ ಆಡಳಿತ', 'ಅಭಿವೃದ್ಧಿಗೆ ಆದ್ಯತೆ' – ಮುಂತಾದ ಘೋಷಣೆಗಳೊಂದಿಗೆ ಚುನಾವಣಾ ಕಣಕ್ಕೆ ಇಳಿಯಿತು. ೨೦೦೨ರಲ್ಲಿ ಗುಜರಾತ್‌ನಲ್ಲಿ ನಡೆದ ಮತೀಯ ಘರ್ಷಣೆಗಳಲ್ಲಿ ಸಂಭವಿಸಿದ ಅನಾಹುತಗಳೆಲ್ಲ ಹಿಂದೆ ಸರಿದುವು. ನರೇಂದ್ರ ಮೋದಿಯನ್ನು ಭವ್ಯ ಭಾರತದ ರೂವಾರಿಯಾಗಿ ಪ್ರತಿಬಿಂಬಿಸಲಾಯಿತು. ಸಾಕಷ್ಟು ಅಬ್ಬರದ ಪ್ರಚಾರ ನಡೆಸಿ ದೇಶಾದ್ಯಂತ ಒಂದು ಬಗೆಯ ಮೋದಿ ಅಲೆಯನ್ನು ಸೃಷ್ಟಿಸಲಾಯಿತು. ಎಲ್ಲ ಚುನಾವಣೆಗಳಲ್ಲಿ ನಡೆಯುವಂತೆಯೇ ಭರವಸೆಗಳ ಮಹಾಪೂರವೇ ಹರಿಯಿತು. – ಭ್ರಷ್ಟಾಚಾರಮುಕ್ತ ಆಡಳಿತ, ವಿದೇಶಗಳಲ್ಲಿರುವ ಕಪ್ಪು ಹಣದ ವಾಪಸಾತಿ, ಅಭಿವೃದ್ಧಿಗೆ ಆದ್ಯತೆ, ಎಲ್ಲ ಜನವಿಭಾಗಗಳ ಏಳಿಗೆ, ಇತ್ಯಾದಿ. ಸಂಘಪರಿವಾರ ಸಂಪೂರ್ಣವಾಗಿ ಮೋದಿ ಬೆಂಬಲಕ್ಕೆ ನಿಂತಿತ್ತು. ಅಂತೂ ಬಲಪಂಥೀಯ ಮತೀಯವಾದಿ ಪಕ್ಷ ಪ್ರಚಂಡ ಬಹುಮತ ಪಡೆದುಕೊಂಡಿತು. ವಾಜಪೇಯಿ ನಾಯಕತ್ವದ ಎನ್‌ಡಿಎಗಿಂತ ಮೋದಿ ನೇತೃತ್ವದ ಎನ್‌ಡಿಎ ಭಿನ್ನವಾಗಿತ್ತು.

ಪ್ರಧಾನಮಂತ್ರಿಯಾಗಿ ನರೇಂದ್ರ ಮೋದಿ ಆಯ್ಕೆಯಲ್ಲಿ ಭಾಜಪದ ಮಾತೃ ಸಂಸ್ಥೆ

## ಸ್ವಾತಂತ್ರ್ಯಾನಂತರದ ಭಾರತ – ೨೨

# ಎನ್‌ಡಿಎಗೆ ಅತ್ಯಧಿಕ ಬಹುಮತ ಮೋದಿ ಯುಗದ ಆರಂಭ

ಸಿ. ಆರ್. ಕೃಷ್ಣರಾವ್



ಆರೆಸ್ಸೆಸ್ ಪ್ರಮುಖ ಪಾತ್ರ ವಹಿಸಿತ್ತು. 'ಸಾಂಸ್ಕೃತಿಕ ಸಂಘಟನೆ' ಎಂದು ಕರೆದುಕೊಳ್ಳುವ ಆರೆಸ್ಸೆಸ್ ಸರಕಾರಕ್ಕೂ ಅದೇ ಬಗೆಯ ಮುಚ್ಚಳಿಕೆಯನ್ನು ಬರೆದುಕೊಟ್ಟಿತ್ತು, ಗಾಂಧಿ ಕೊಲೆಯ ನಂತರ ಸಂಘಟನೆಯನ್ನು ನಿಷೇಧಗೊಳಿಸಿದ್ದಾಗ. ಆದರೆ ಈಗ ಬಹಿರಂಗವಾಗಿಯೇ ಅದು ತನ್ನ ನಿಜವಾದ ಬಣ್ಣವನ್ನು ತೋರಿದೆ. ಹಿಂದೆ ವಾಜಪೇಯಿ ಕಾಲದಲ್ಲಿ ಆರೆಸ್ಸೆಸ್ ಒಂದು ರೀತಿಯ ಅಂತರವನ್ನು ಕಾಪಾಡಿಕೊಂಡು ಬಂದಿತ್ತು. ನರೇಂದ್ರ ಮೋದಿ ಆರೆಸ್ಸೆಸ್ ಪ್ರಚಾರಕರಾಗಿ ಮುಂದೆ ಬಂದವರು. ಆಡ್ವಾನಿ ರಥಯಾತ್ರೆ ಕೈಗೊಂಡಾಗ ಅವರಿಗೆ ಆಪ್ತರಾಗಿ ಭಾಗಿಯಾಗಿದ್ದವರು. ಪ್ರಧಾನಿ ಅಭ್ಯರ್ಥಿಯಾಗಿ ನೇಮಕಗೊಂಡಾಗ ಭಾಜಪದ ಹಿರಿಯ ಮುಖಂಡರನ್ನು ಕಡೆಗಣಿಸ ಲಾಯಿತು. ಪ್ರಧಾನಿಯಾಗಿ ನೇಮಕಗೊಂಡ ಮೇಲೆ ನರೇಂದ್ರ ಮೋದಿ ಮೊದಲು ನಜರು ಒಪ್ಪಿಸಿದ್ದು ಆರೆಸ್ಸೆಸ್ ಸರಸಂಘ ಚಾಲಕ ಮೋಹನ್ ಭಾಗವತರಿಗೆ. ತಮಗೆ ಬೇಕಾದ ಆರೆಸ್ಸೆಸ್ ಸಿದ್ಧಾಂತಿಗಳನ್ನು ಭಾಜಪದ ಆಯಕಟ್ಟಿನ ಸ್ಥಾನಗಳಿಗೆ ನೇಮಿಸಿಕೊಂಡರು. ಭಾಜಪ ಸಂಘಟನೆಯ ಮೇಲೆ ಪೂರ್ಣ ನಿಯಂತ್ರಣ ಸ್ಥಾಪಿಸಲು ತಮ್ಮ ನೆಚ್ಚಿನ ಭಂಟ ಅಮಿತ್ ಷಾರನ್ನೂ ಭಾಜಪದ ಅಧ್ಯಕ್ಷರಾಗಿ ನೇಮಿಸಿಕೊಂಡರು. ಈಗ ಈ ಜೋಡಿ ಭದ್ರವಾಗಿ ನೆಲೆಯೂರಿದೆ. ಈಚೆಗೆ ಭಾಜಪ–ಆರೆಸ್ಸೆಸ್ ಪ್ರಮುಖರ ಸಮ್ಮುಖದಲ್ಲಿ ಕೇಂದ್ರ ಸಚಿವರುಗಳು ತಮ್ಮ ಸಾಧನೆಗಳ ಕುರಿತು ವರದಿ ಒಪ್ಪಿಸಿದ್ದು ಸಾಕಷ್ಟು ಚರ್ಚೆಗೀಡಾಗಿದೆ. ಈ ಜಂಟಿ ಸಭೆ, "ಚಿಂತನಮಂಥನ" ಆರೆಸ್ಸೆಸ್ಸಿನ ಬಿಗಿ ಹಿಡಿತವನ್ನು ದೃಢಪಡಿಸಿದೆ.



ದೊಡ್ಡ ಬಾಜಾಬಜಂತ್ರಿಯಿಂದಲೇ ನರೇಂದ್ರ ಮೋದಿ ಮತ್ತು ಅವರ ಸಂಪುಟದ ಸಚಿವರುಗಳು ಪ್ರಮಾಣವಚನ ಸ್ವೀಕರಿಸಿದರು. ಈ ಸಮಾರಂಭಕ್ಕೆ 'ಸಾರ್ಕ್' ದೇಶಗಳಾದ – ನೇಪಾಳ, ಭೂತಾನ, ಮ್ಯೆನ್‌ಮಾರ್, ಆಫ್ಘಾನಿಸ್ತಾನ, ಶ್ರೀಲಂಕಾ, ಬಂಗ್ಲಾದೇಶ ಮತ್ತು ಪಾಕಿಸ್ತಾನದ ಅಧಿಪತಿಗಳನ್ನು ಆಹ್ವಾನಿಸಿದ್ದುದು, ಅವರುಗಳೂ ಭಾಗವಹಿಸಿದ್ದುದು ವಿಶೇಷ. ಇದನ್ನು ಮೋದಿಯವರ ಮುತ್ಸದ್ದಿತನ ಮತ್ತು ನೆರೆರಾಷ್ಟ್ರಗಳ ಜೊತೆ ಸಂಬಂಧಗಳನ್ನು ಬೆಸೆಯುವ ಕ್ರಮ ಎಂದು ಕೊಂಡಾಡಲಾಯಿತು. ಕೇಂದ್ರ ಸಂಪುಟದಲ್ಲಿ ಮಾಮೂಲಿಯಂತೆ ಸಾಕಷ್ಟು ಸಚಿವರುಗಳಿದ್ದಾರೆ. ಮುಖ್ಯವಾದ ಖಾತೆಗಳೆಲ್ಲ ಭಾಜಪದವರ ಕೈಯಲ್ಲೇ ಇದೆ. ಭಾಜಪದ ಮಾಜಿ ಅಧ್ಯಕ್ಷ ರಾಜನಾಥ ಸಿಂಗ್‌ಗೆ ಗೃಹಖಾತೆ, ಅರುಣ್ ಜೇಟ್ಲಿಗೆ ಹಣಕಾಸು, ಸುಷ್ಮಾ ಸ್ವರಾಜ್‌ಗೆ ವಿದೇಶಾಂಗ ಖಾತೆ ನೀಡಲಾಗಿದೆ. ಪ್ರಮುಖವಾದ ರಕ್ಷಣಾ ಸಚಿವಾಲಯ, ಶಿಕ್ಷಣ, ಕಾನೂನು ಮೊದಲಾದುವೆಲ್ಲ ಭಾಜಪದ ಬಳಿಯೇ ಇದೆ. ಪ್ರಧಾನಮಂತ್ರಿ ಮೋದಿಯವರ ಕಾರ್ಯಾಲಯವನ್ನು ಎಲ್ಲ ಸಚಿವಾಲಯ ಗಳನ್ನು ನಿಯಂತ್ರಿಸುವ ಕೇಂದ್ರವನ್ನಾಗಿ ಬೆಳೆಸಲಾಗಿದೆ. ಇಬ್ಬರು ಮೂವರು ಸಚಿವರನ್ನು ಬಿಟ್ಟರೆ ಬೇರಾವ ಸಚಿವರೂ ಸೊಲ್ಲೆತ್ತುವಂತಿಲ್ಲ. ಮೋದಿ ಗುಜರಾತ್ ಮಾದರಿಯಲ್ಲೇ ಕೇಂದ್ರದಲ್ಲೂ ಕೂಡ ಒಂದು ಬಗೆಯ ಸರ್ವಾಧಿಕಾರವನ್ನು ಸ್ಥಾಪಿಸಿದ್ದಾರೆ. ಯಾವುದೂ ಪ್ರಧಾನಿಯವರ ಕಣ್ಣು ತಪ್ಪುವಂತಿಲ್ಲ.

ಪ್ರಧಾನಿಯಾಗಿ ಮೋದಿ ಅಧಿಕಾರ ವಹಿಸಿಕೊಂಡು ಒಂದು ವರ್ಷದ ಮೇಲಾಗಿದೆ. ಅವರ ಕಾರ್ಯವೈಖರಿಯನ್ನು ಕಂಡಿದ್ದೇವೆ. ಯಾವುದೇ ವಿವಾದಾತ್ಮಕ ಸಮಸ್ಯೆ ಉದ್ಭವಿಸಿದಾಗಲೂ ಮೌನವಾಗಿರುವುದನ್ನು ಅವರು ರೂಢಿಸಿಕೊಂಡಿದ್ದಾರೆ. ಈ ಕಾಲಾವಧಿಯಲ್ಲಿ ಅವರು ಹದಿನೆಂಟಕ್ಕೂ ಹೆಚ್ಚು ದೇಶಗಳನ್ನು ಸಂದರ್ಶಿಸಿದ್ದಾರೆ. ಪ್ರಾಯಶಃ ಪ್ರಪಂಚದ ಅತಿ ಹೆಚ್ಚು ದೇಶಗಳಿಗೆ ಭೇಟಿ ನೀಡಿರುವ ಪ್ರಧಾನಿ ಎಂಬ ದಾಖಲೆ ಸ್ಥಾಪಿಸಿಯಾರು. ತಮ್ಮ ವಿದೇಶೀ ಪ್ರವಾಸದ ಸಮಯದಲ್ಲಿ ಸಂಪೂರ್ಣವಾಗಿ ವಿದೇಶಾಂಗ ಸಚಿವೆ ಸುಷ್ಮಾ ಸ್ವರಾಜ್ ಅವರನ್ನು ಕಡೆಗಣಿಸಿರುವುದು ಎದ್ದುಕಾಣುತ್ತದೆ. ಇದುವರೆಗೆ ಆಕೆ ಯಾವ ಪ್ರವಾಸದಲ್ಲೂ ಭಾಗಿಯಾಗಿಲ್ಲ. ಇದು ಒಂದು ಬಗೆಯಾದರೆ ಭಾರತದ ಪ್ರಧಾನಿ ಜವಾಹರಲಾಲ್ ನೆಹರೂರವರು ಸ್ವತಂತ್ರ ಭಾರತದ ನಿರ್ಮಾಣಕ್ಕೆ ಸಲ್ಲಿಸಿರುವ ಕಾಣಿಕೆಯನ್ನು ಅಳಿಸಿಹಾಕಲು ಎಲ್ಲ ಕ್ರಮಗಳನ್ನು ಕೈಗೊಳ್ಳುತ್ತಿದ್ದಾರೆ. ಇದುವರೆಗೆ ಅಸ್ತಿತ್ವದಲ್ಲಿದ್ದ ಯೋಜನಾ ಆಯೋಗವನ್ನು ರದ್ದುಗೊಳಿಸಿ ಅದರ ಸ್ಥಾನದಲ್ಲಿ 'ನೀತಿ ಆಯೋಗ' ಎಂಬುದನ್ನು ಸ್ಥಾಪಿಸಿದ್ದಾರೆ. ರಾಜ್ಯದ ಮುಖ್ಯಮಂತ್ರಿಗಳನ್ನು ಸದಸ್ಯರನ್ನಾಗಿ ಹೊಂದಿರುವ ಈ ನೀತಿ ಆಯೋಗ ಯಾವ ರೀತಿ ಕಾರ್ಯ ನಿರ್ವಹಿಸುವುದೆಂಬುದು ಇನ್ನೂ ನಿರ್ಧಾರವಾಗಿಲ್ಲ. ನೆಹರೂಗೆ ಪ್ರತಿಯಾಗಿ ಸರ್ದಾರ್ ಪಟೇಲರನ್ನು ಎತ್ತಿಕಟ್ಟಲು ಪ್ರಯತ್ನಿಸುತ್ತಿದ್ದಾರೆ. ಗುಜರಾತ್‌ನ ಕಡಲತೀರದಾಚೆ ಅತಿ ಎತ್ತರದ ಸರ್ದಾರ್ ಪಟೇಲರ ಮೂರ್ತಿಯನ್ನು ಸ್ಥಾಪಿಸಲು ಯೋಜನೆ ರೂಪಿಸಲಾಗಿದೆ. ಇದು ಅಮೆರಿಕದ ನ್ಯೂಯಾರ್ಕ್‌ನಲ್ಲಿರುವ ಸ್ವಾತಂತ್ರ್ಯ ದೇವಿ ಮೂರ್ತಿಗಿಂತ ಎತ್ತರವಾಗಿರುವುದೆಂದು ಹೇಳಲಾಗಿದೆ. ಇಲ್ಲಿ ವಲ್ಲಭಭಾಯಿ ಪಟೇಲರ ಜನ್ಮದಿನವನ್ನೂ ಅದ್ದೂರಿಯಾಗಿ ಆಚರಿಸಿದ್ದನ್ನು ನೆನಪು ಮಾಡಿಕೊಳ್ಳಬಹುದು.

ಮೋದಿ ಸರಕಾರ ಅಸ್ತಿತ್ವಕ್ಕೆ ಬಂದ ಒಡನೆಯೇ ಸಂಘಪರಿವಾರದ ಅಂಗಸಂಸ್ಥೆಗಳಾದ ವಿಶ್ವ ಹಿಂದೂ ಪರಿಷತ್, ಭಜರಂಗದಳ, ಶ್ರೀರಾಮ ಸೇನೆ, ಮುಂತಾದವು ಗರಿಗೆದರಿಕೊಂಡು ಕ್ರಿಯಾಶೀಲವಾದವು. ಈ ಸಂಘಟನೆಗಳ ಉಗ್ರಗಾಮಿಗಳು, 'ಘರ್ ವಾಪಸಿ', 'ಬೇಟಿ ಬಚಾವ್, ಬಹು ಲಾವ್' ಮುಂತಾದ ಘೋಷಣೆಗಳನ್ನು ಮಾಡಿ ದೊಡ್ಡ ಪ್ರಮಾಣದಲ್ಲಿ ಅಲ್ಪಸಂಖ್ಯಾತ ಮತೀಯರನ್ನು ಹಿಂದೂ ಧರ್ಮಕ್ಕೆ ಮತಾಂತರಗೊಳಿಸುವ ಕಾರ್ಯಕ್ರಮ ರೂಪಿಸಿಕೊಂಡರು. ಮುಸಲ್ಮಾನರು, ಕ್ರಿಶ್ಚಿಯನ್ನರಿಗೆ ಬೆದರಿಕೆ ಹಾಕಲು ಪ್ರಾರಂಭಿಸಿದರು. ಆರೆಸ್ಸೆಸ್ ಸರಸಂಘ ಚಾಲಕ ಮೋಹನ್ ಭಾಗವತ್, 'ಅನ್ಯಮತೀಯರು ಹಿಂದೂಗಳ ಆಶ್ರಯದಲ್ಲಿರುವವರೆಂಬುದನ್ನು ಒಪ್ಪಿಕೊಳ್ಳಬೇಕು. ಹಾಗಿಲ್ಲದಿದ್ದರೆ ಹೊರ

---



**ಡಾ॥ ಸಿ. ಸೀತಾರಾಮ್**

ಹಿರಿಯ ಪತ್ರಕರ್ತ, ಲೇಖಕ ಡಾ॥ ಸಿ. ಸೀತಾರಾಮ್ (೭೪) ದಿನಾಂಕ ೧೫-೯-೨೦೧೫ರಂದು ಹೃದಯಾಘಾತದಿಂದ ನಿಧನರಾದರು. ಕನ್ನಡಪ್ರಭ, ಇಂಡಿಯನ್ ಎಕ್ಸ್‌ಪ್ರೆಸ್ ಮತ್ತು ಸಂಯುಕ್ತ ಕರ್ನಾಟಕ ಪತ್ರಿಕೆಗಳಲ್ಲಿ ಕೆಲಸ ಮಾಡಿದ್ದ ಇವರು ಹಲವು ಪುಸ್ತಕಗಳನ್ನೂ ರಚಿಸಿದ್ದರು. ನವಕರ್ನಾಟಕದ 'ವಿಶ್ವಕಥಾಕೋಶ' ಸಂಪುಟಗಳ ಸಂಪಾದಕರಲ್ಲೊಬ್ಬರಾಗಿದ್ದರು. ಡಾ॥ ಸಿ. ಸೀತಾರಾಮ್ ಅವರ ನಿಧನಕ್ಕೆ 'ನವಕರ್ನಾಟಕ' ಮತ್ತು 'ಹೊಸತು' ಬಳಗ ಸಂತಾಪ ವ್ಯಕ್ತಪಡಿಸುತ್ತದೆ.

ಹೋಗಬೇಕು’ ಎಂದು ಎಚ್ಚರಿಸಿದರು. ಬಲವಂತದಿಂದ ಮತಾಂತರಗೊಂಡವರನ್ನು ಹಿಂದೂ ಧರ್ಮಕ್ಕೆ ಪರಿವರ್ತಿಸುವುದರಲ್ಲಿ ತಪ್ಪೇನಿಲ್ಲ ಎಂದು ವಾದಿಸಲಾಯಿತು. ಇಂಥ ಬೆದರಿಕೆಯ ಹೇಳಿಕೆಗಳ ಮಹಾಪೂರವೇ ಹರಿದರೂ ನರೇಂದ್ರ ಮೋದಿಯವರು ಮಾತ್ರ ದಿವ್ಯಮೌನ ತಾಳಿದರು. ಕೆಲ ತಿಂಗಳುಗಳ ನಂತರ ಈ ಬಗೆಯ ಆರ್ಭಟಗಳು, ಚಟುವಟಿಕೆಗಳು ತಣ್ಣಗಾದರೂ ಅಲ್ಪಸಂಖ್ಯಾತರು ಮಾತ್ರ ಭಯದಿಂದಲೇ ಬಾಳು ಸಾಗಿಸಬೇಕಾಗಿ ಬಂದಿದೆ ಈಗ. ಚುನಾವಣೆಯ ಕಾಲದಲ್ಲಿ ನೀಡಿದ್ದ ಭರವಸೆಗಳೆಲ್ಲ ಗಾಳಿಯಲ್ಲಿ ಹಾರಾಡಿದವೇ ಹೊರತು ಒಂದೂ ಜಾರಿಗೆ ಬರಲಿಲ್ಲ. ವಿದೇಶಗಳಲ್ಲಿರುವ ಕಪ್ಪು ಹಣವನ್ನು ಭಾರತಕ್ಕೆ ಹಿಂದಕ್ಕೆ ತರುವುದಾಗಿ ಸಾಕಷ್ಟು ಅಬ್ಬರಿಸಿದ್ದ ಮೋದಿ ಸರಕಾರ ಈಗ ಅದರ ಬಗ್ಗೆ ಮಾತಾಡುವುದನ್ನು ನಿಲ್ಲಿಸಿದೆ. ಘೋಷಣೆಗಳನ್ನು ಹೊಸೆಯುವುದರಲ್ಲಿ ನರೇಂದ್ರ ಮೋದಿ ಗಟ್ಟಿಗರು. ‘ಸ್ವಚ್ಛ ಭಾರತ ಅಭಿಯಾನ’ ಪ್ರಾರಂಭಿಸಿ ಪ್ರಧಾನಿ ಹಾಗೂ ಸಚಿವರು ಪೊರಕೆ ಹಿಡಿದು ರಸ್ತೆ ಗುಡಿಸಿದ ದೃಶ್ಯ ಸಮೂಹ ಮಾಧ್ಯಮಗಳಲ್ಲಿ ಮೆರೆಯಿತು. ಒಂದು ವರ್ಷವಾದ ಮೇಲೆ ಯಾವ ನಗರವೂ ಶುದ್ಧವಾಗಲಿಲ್ಲ. ನಮ್ಮ ಬೆಂಗಳೂರೇ ಅದಕ್ಕೆ ಸಾಕ್ಷಿ. ಎರಡನೇ ವರ್ಷ ಗಾಂಧಿ ಜಯಂತಿ ದಿನ ‘ಸ್ವಚ್ಛ ಭಾರತ’ದ ಘೋಷಣೆ ಕರಗಿತು. ಗಾಂಧಿ ಜಯಂತಿಯ ದಿನ ಒಂದು ಬಗೆಯಾದರೆ ‘ಶಿಕ್ಷಕರ ದಿನಾಚರಣೆ’ಯ ದಿನ ಮೋದಿಯವರು ದೆಹಲಿಯ ಆಯ್ದ ವಿದ್ಯಾರ್ಥಿಗಳ ಜೊತೆ ನಡೆಸಿದ ಸಂವಾದ ಕಡ್ಡಾಯವಾದ ಶಿಕ್ಷೆಯಾಯಿತು. ದಕ್ಷಿಣ ಭಾರತದ ವಿದ್ಯಾರ್ಥಿಗಳು ಮೋದಿಯವರ ಹಿಂದಿ ಭಾಷಣವನ್ನು ಆಲಿಸಲು ಶಾಲೆಗಳಿಗೆ ಹಾಜರಾಗಬೇಕಾಯಿತು. ಶಿಕ್ಷಕರ ದಿನಾಚರಣೆಯ ದಿನ ಮಾಜಿ ರಾಷ್ಟ್ರಪತಿ ರಾಧಾಕೃಷ್ಣನ್ ಅವರ ಹೆಸರೇ ಕೇಳಿಬರಲಿಲ್ಲ. ಪ್ರಾಯಶಃ ಭಾಜಪದ ಉದ್ದೇಶವೇ ಅದೇ ಏನೋ. ಗಂಗಾನದಿ ಶುದ್ಧೀಕರಣಕ್ಕೆ ಮತ್ತೆ ಕೋಟಿ ಕೋಟಿ ಹಣ ಸುರಿಯಲು ನಿರ್ಧರಿಸಲಾಗಿದೆ.

ಆಗಸ್ಟ್ ೧೫ರಂದು ಸಾಲಂಕೃತವಾಗಿ ಆಗಮಿಸಿದ ಪ್ರಧಾನಿ ಮೋದಿ ದೆಹಲಿ ಕೆಂಪುಕೋಟೆಯ ವೇದಿಕೆಯಿಂದ ದೊಡ್ಡದಾಗಿ ‘ಭಾರತದಲ್ಲೇ ತಯಾರಿಸಿ’ ಎಂದು ಘೋಷಣೆ ನೀಡಿದರು ಬಹಳ ಅದ್ದೂರಿಯಿಂದ. ಇದು ವಿದೇಶೀ ಕಂಪೆನಿಗಳಿಗೆ ನೀಡಿದ ದೊಡ್ಡ ಆಮಂತ್ರಣ. ‘ಭಾರತದಲ್ಲೇ ತಯಾರಿಸಿದ್ದು’ ಎನ್ನುವುದಾಗಿದ್ದರೆ ಅದು ಸ್ವಾವಲಂಬನೆಯತ್ತ ಇಡುವ ಹೆಜ್ಜೆಯಾಗುತ್ತಿತ್ತು. ‘ಮೇಕ್ ಇನ್ ಇಂಡಿಯಾ’ ಘೋಷಣೆಯನ್ನು ವಿವರಿಸಿದ ಪ್ರಧಾನಿ ವಿದೇಶೀ ಬಂಡವಾಳಗಾರರಿಗೆ ಎಲ್ಲ ಸೌಲಭ್ಯಗಳನ್ನು ಒದಗಿಸುವ ಭರವಸೆ ನೀಡಿದರು. ಇಲ್ಲಿನ ನೆಲ, ಜಲ ಒದಗಿಸುವುದರ ಜೊತೆಗೆ, ಅಗ್ಗದ ಶ್ರಮವನ್ನೂ ಒದಗಿಸಲು ಮುಂದಾದರು. ಈ ಘೋಷಣೆಯ ನಿಜವಾದ ಅರ್ಥ ದೇಶವನ್ನು ಪರಾಧೀನಗೊಳಿಸುವ ಹುನ್ನಾರ ಎನ್ನಬಹುದು. ಜನವರಿ ೨೬ರಂದು ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮ ಅತಿಥಿಯಾಗಿ ಗಣರಾಜ್ಯೋತ್ಸವದಲ್ಲಿ ಉಪಸ್ಥಿತರಾಗಿದ್ದೇ ಮೋದಿಯವರ ಸಾಧನೆ. ಇದನ್ನು ಮೋದಿಯ ಮುತ್ಸದ್ದಿತನದ ಸಾಕ್ಷಿ ಎಂದು ವೈಭವೀಕರಿಸಲಾಯಿತು. ಈ ಭೇಟಿಯ ಸಂದರ್ಭದಲ್ಲಿ ನ್ಯೂಕ್ಲಿಯರ್ ಸಹಕಾರ, ಅಂದರೆ ನ್ಯೂಕ್ಲಿಯರ್ ರಿಯಾಕ್ಟರುಗಳ ಸ್ಥಾಪನೆ ಕುರಿತ ಒಪ್ಪಂದದ ಕಗ್ಗಂಟು ಬಿಡಿಸಲು ನಡೆಸಿದ ಪ್ರಯತ್ನ ಹಾಗೆಯೇ ಉಳಿದಿದೆ. ಮೋದಿ ಸರಕಾರ ಇನ್ಶೂರೆನ್ಸ್ ಕವಚದ ಒಂದು ಫಾರ್ಮುಲಾ ತಯಾರಿಸಿದರು. ಪ್ರಯೋಜನವಾಗಲಿಲ್ಲ. ಹೆಚ್ಚು ಕಡಿಮೆ ಒಂದು ದಶಕದಿಂದ ಈ ವಿಚಾರದಲ್ಲಿ ಎರಡೂ ದೇಶಗಳ ಮಧ್ಯೆ ಜಗ್ಗಾಟ ನಡೆದಿದೆ. ಕೇಂದ್ರ ಸರಕಾರದ ಚುಕ್ಕಾಣಿ ಹಿಡಿದಿರುವ ಭಾಜಪ ಅಧಿಕಾರ ವಹಿಸಿಕೊಂಡು ವರ್ಷದ ಮೇಲಾದರೂ ಸಾಧನೆಗಳು ಮಾತ್ರ ಸೊನ್ನೆ ಎಂದೇ ಹೇಳಬೇಕು. ಹೇಳಿಕೊಳ್ಳುವಂಥ ಘನವಾದ ಕಾರ್ಯ ಏನೂ ಸಾಧನೆಯಾಗಿಲ್ಲ. ಭಾಜಪಗೆ ಅಧಿಕ ಬಹುಮತ ನೀಡಿದ ಜನಸಾಮಾನ್ಯರು ನಿಧಾನವಾಗಿ ನಿರಾಶೆಗೊಳ್ಳುತ್ತಿದ್ದಾರೆ.

***(ಮುಂದುವರಿಯುವುದು)***

**ಸಿ. ಆರ್. ಕೃಷ್ಣರಾವ್**
‘ಚೌಬೀನ’, ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ,
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦೦೮೫









ನವಕರ್ನಾಟಕ ಪ್ರಕಾಶನದ ೩ ಕೃತಿಗಳ ಲೋಕಾರ್ಪಣೆ ಕಾರ್ಯಕ್ರಮವು ೬–೯–೨೦೧೫ರಂದು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ನಡೆಯಿತು. ಶ್ರೀಮತಿ ನೇಮಿಚಂದ್ರ ಅವರ ‘ಸಾವೇ, ಬರುವುದಿದ್ದರೆ ನಾಳೆ ಬಾ !’ ಮತ್ತು ‘ಸೋಲೆಂಬುದು ಅಲ್ಪವಿರಾಮ’ ಎಂಬ ಎರಡು ಪುಸ್ತಕಗಳನ್ನು ಪ್ರೊ॥ ಎಸ್. ಜಿ. ಸಿದ್ಧರಾಮಯ್ಯ ಅವರು ಹಾಗೂ ಶ್ರೀ ಕಂನಾಡಿಗಾ ನಾರಾಯಣ ಅವರ ‘ದ್ವಾಪರ’ ಪುಸ್ತಕವನ್ನು ಡಾ॥ ಕೆ. ಸತ್ಯನಾರಾಯಣ ಅವರು ಲೋಕಾರ್ಪಣೆ ಮಾಡಿದರು. ಡಾ॥ ಚಂದ್ರಶೇಖರ ಕಂಬಾರ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ವೇದಿಕೆಯಲ್ಲಿ, ಶ್ರೀ ಆರ್. ಎಸ್. ರಾಜಾರಾಮ್, ಪ್ರೊ॥ ಎಸ್. ಜಿ. ಸಿದ್ಧರಾಮಯ್ಯ, ಡಾ॥ ಚಂದ್ರಶೇಖರ ಕಂಬಾರ, ಡಾ॥ ಕೆ. ಸತ್ಯನಾರಾಯಣ, ಶ್ರೀ ಕಂನಾಡಿಗಾ ನಾರಾಯಣ ಮತ್ತು ಶ್ರೀಮತಿ ನೇಮಿಚಂದ್ರ ಉಪಸ್ಥಿತರಿದ್ದರು.






## ಸಾಧು ಹೃದಯ
**(ಶ್ರೀ ರಘುವಲ್ಲಭತೀರ್ಥರ ಜೀವನ ಚಿತ್ರಗಳು)**

*ಭಾರತೀ ಕಾಸರಗೋಡು*

**ಪುಟ : ೧೩೨ + iv**

**ಬೆಲೆ : ರೂ. ೮೫**

**ನ್ಯೂ ವೇವ್ ಬುಕ್ಸ್,** ನಂ. ೯೦/೩, ಒಂದನೇ ಮಹಡಿ, ಈ.ಎ.ಟಿ. ಸ್ಟ್ರೀಟ್, ಬಸವನಗುಡಿ, ಬೆಂಗಳೂರು – ೫೬೦ ೦೦೪

*ಭಾರತಿ ಕಾಸರಗೋಡು ಅವರ 'ಸಾಧು ಹೃದಯ' ಕೃತಿ – ಶ್ರೀ ರಘುವಲ್ಲಭತೀರ್ಥರು ಬಾಲ್ಯದಲ್ಲಿ ಸನ್ಯಾಸ ಸ್ವೀಕರಿಸಿದ ಮತ್ತು ಯೌವನದಲ್ಲಿ ತ್ಯಜಿಸಿದ ನಂತರದ ಬದುಕಿನಲ್ಲಿ ಕಾಲಾಂತರದಲ್ಲಿ ಉಂಟಾದ ಪಲ್ಲಟಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತದೆ. ಸುಮಾರು ಮೂವತ್ತು ವರ್ಷಗಳ ಕಾಲ ಗೊಂದಲ ಮತ್ತು ಒತ್ತಡದಲ್ಲೇ ವೇದಾಂತ ಸಾಮ್ರಾಜ್ಯವನ್ನು ಆಳಿ, ನಂತರದಲ್ಲಿ ಏನಕೇನ ಕಾರಣಗಳಿಂದಾಗಿ ಸನ್ಯಾಸವನ್ನು ತೊರೆದು ಸಂಸಾರಿ ಆದ ಮೇಲೂ ವಿರಾಗಿಯಾಗಿಯೇ ಉಳಿದ ಸಾಧುಹೃದಯಿ ಎಸ್. ಎಲ್. ರಾವ್ (ಶ್ರೀ ರಘುವಲ್ಲಭತೀರ್ಥ) ಅವರು ಎದುರಿಸಿದ ಸಂಘರ್ಷಾತ್ಮಕ ಬದುಕಿನಲ್ಲಿ ಬಂದೊದಗಿದ ರೋಚಕ ಸಂಗತಿಗಳು ಓದುಗನ ಮನಕಲಕುತ್ತವೆ. ಹಾಗೆ ನೋಡಿದರೆ, ಅಧ್ಯಾತ್ಮ ಬದುಕಿನ ವ್ಯಂಗ್ಯದಂತಿರುವ ಬಾಲಸನ್ಯಾಸ ಪದ್ಧತಿಯನ್ನು ಸಹಜ ಸಾಮಾಜಿಕ ಬದುಕು ಕೇವಲ ಆಂತರ್ಯದಲ್ಲಿ ತಿರಸ್ಕರಿಸುತ್ತಲೇ ಬಾಹ್ಯದಲ್ಲಿ ಮಾತ್ರ ಒಪ್ಪಿಕೊಂಡು ಅರಗಿಸಿಕೊಳ್ಳುತ್ತದೆ ಎಂಬುದನ್ನು ರಘುವಲ್ಲಭತೀರ್ಥರು ಆ ಸಂದರ್ಭದಲ್ಲಿ ನಿರ್ವಹಿಸಿದ ಸಂಕೀರ್ಣ ಬದುಕಿನ ಸಂಗತಿಗಳ ಮೂಲಕ ಬಿಚ್ಚಿಡುತ್ತದೆ. ಅಷ್ಟಕ್ಕೂ, ಈ ಕೃತಿ, ಶ್ರೀ ರಘುವಲ್ಲಭತೀರ್ಥ ಮತ್ತು ಎಸ್. ಎಲ್. ರಾವ್ ಎಂಬ ಎರಡು ವ್ಯಕ್ತಿತ್ವಗಳ ಮೂಲಕ ಸಾಧಾರಣ ಹಾಗೂ ಅಸಾಧಾರಣ ವ್ಯಕ್ತಿತ್ವಗಳ ನಡುವಿನ ಅಂತರವನ್ನು ತುಲನೆ ಮಾಡಿ ನೋಡುವಂತೆ ಮಾಡುತ್ತದೆ.*

– ***ಕಲ್ಲೇಶ್ ಕುಂಬಾರ್,*** *ಹಾರೂಗೇರಿ, ಬೆಳಗಾವಿ*

## ಅಕ್ವೇರಿಯಮ್ ಮೀನು (ಕವನ ಸಂಕಲನ)

*ಮಲ್ಲಿಕಾರ್ಜುನ ಹಿರೇಮಠ*

**ಪುಟ : xvi + ೬೮** **ಬೆಲೆ : ರೂ. ೮೦**

**ಸಂಗಮ ಪ್ರಕಾಶನ,** ಹುನಗುಂದ

*ಮಲ್ಲಿಕಾರ್ಜುನ ಹಿರೇಮಠ ಅವರು, ತಮ್ಮ ಕವಿತೆಗಳಲ್ಲಿ ವರ್ತಮಾನವನ್ನು ಪುನಾರಚನೆ ಮಾಡುವ ಕಲೆ ಗೊತ್ತಿರುವವರು. ಒಂದು ಕಾಲಘಟ್ಟದ ಸುತ್ತಲಿನ ಲೋಕದ ವಿದ್ಯಮಾನಗಳ ಕುರಿತಾದ ನೋವು, ಸಂಕಟ, ಸಂತೋಷ, ಸಂತೃಪ್ತಿ, ಚಡಪಡಿಕೆ – ಇವೆಲ್ಲವುಗಳನ್ನು ತಮ್ಮ ಏಕಾಗ್ರ ಧ್ಯಾನದಲ್ಲಿ ಒಳಗೊಳಿಸುತ್ತಲೇ ಹೊರಗಿನ ಸೃಜನಶೀಲ ಅಭಿವ್ಯಕ್ತಿಯಾಗಿಸುವಂಥ ಸೂಕ್ಷ್ಮ ಸಂವೇದನೆಯ ಕವಿ. ಇವರು, ತಮ್ಮ 'ಅಕ್ವೇರಿಯಂ ಮೀನು' ಕವನ ಸಂಕಲನದಲ್ಲಿನ ಕವಿತೆಗಳಲ್ಲಿ, ಈ ಲೋಕದ ಸಕಲ ಜೀವಾತ್ಮಗಳ ಕುರಿತಾದ ಸಂಗತಿಗಳಿಗೆ ವಿಮುಖನಾಗಿ; ಮನುಷ್ಯ, ಏಕ ಬಿಂದುವಿಗೆ ಬದ್ಧವಾದ ತಟಸ್ಥ ಬದುಕನ್ನು ಬಾಳುವುದರ ಹಿಂದಿನ ಘೋರ ಅಪಾಯದ ಬಗ್ಗೆಯೂ, ಏಕಾಂಗಿತನದ ಹಿಂದಿನ ಸಂಕಟಗಳು ಮತ್ತು ಲೋಕ ಒಪ್ಪಿತ ಸಹಬಾಳ್ವೆ ಹೊಂದಿರಬಹುದಾದ ನೆಮ್ಮದಿ ಮತ್ತು ಸುಖದ ಬಗ್ಗೆ ತಮ್ಮದೇ ಗ್ರಹಿಕೆಯ ನೆಲೆಯಲ್ಲಿ ಗಹನವಾದ ಕಲ್ಪನೆಯೊಂದನ್ನು ಅನಾವರಣ ಮಾಡುತ್ತಾರೆ. ಹಾಗೆಯೇ, ವಯೋಸಹಜವಾಗಿ ದೇಹಕ್ಕೆ ಬರುವ ಮುಪ್ಪು, ಮನಸ್ಸಿಗೆ ಬಾರದಂತೆ ತಡೆಹಿಡಿದು ಯುವ ಜನಾಂಗವನ್ನು ಉತ್ತೇಜಿಸುವ ಮೂಲಕ ಸ್ವಸ್ಥ ನಾಗರಿಕ ಸಮಾಜ ನಿರ್ಮಾಣ ಮಾಡುವುದು ಪ್ರಸ್ತುತ ಸಂದರ್ಭದ ಅನಿವಾರ್ಯತೆಯಾಗಿದೆ ಎಂಬುದನ್ನು ಇಲ್ಲಿನ ಕವಿತೆಯೊಂದರ ಮುಖಾಂತರ ಬಿಚ್ಚಿಡುತ್ತಾರೆ. ಈ ಮೂಲಕ, ವರ್ತಮಾನಕ್ಕೆ ಪ್ರತಿಕ್ರಿಯಾತ್ಮಕವಾಗಿ ಕಾವ್ಯ – ಎಂಬ ಮಾತಿಗೆ ಬದ್ಧವಾಗಿರುವ ಕವಿ ಮಲ್ಲಿಕಾರ್ಜುನ ಹಿರೇಮಠರ ಪ್ರಸ್ತುತ ಕವನ ಸಂಕಲನದ ಇಡಿಯಾಗಿ ಕವಿತೆಗಳು ಎಲ್ಲ ಕಾಲದ ವರ್ತಮಾನದ ಸಂವೇದನೆಗಳಿಗೆ ಪೂರಕವೆಂಬಂತಿದ್ದು ಓದುಗನನ್ನು ಭಿನ್ನ ನೆಲೆಯಲ್ಲಿ ಚಿಂತನೆಗೀಡುಮಾಡುತ್ತವೆ.*



## ನಿಜವನುಂಡ ಘನ ಪರಿಮಳ (ಕವನ ಸಂಕಲನ)

*ಡಾ॥ ಅಶೋಕ ನರೋಡೆ*

**ಪುಟ : ೧೬ + ೧೫೮** **ಬೆಲೆ : ರೂ. ೧೫೦**

**ಅನುಪಮ ಪ್ರಕಾಶನ,** ಅಥಣಿ

*ಡಾ॥ ಅಶೋಕ ನರೋಡೆಯವರು ವ್ಯವಸ್ಥೆಯ ಅಂಗವಾಗಿ, ಆ ವ್ಯವಸ್ಥೆ ರೂಢಿಸಿಕೊಂಡಿರುವ ಪರಂಪರೆಯಿಂದ ಪ್ರೇರಿತರಾಗಿರುವ ಕವಿ. ಆ ಪ್ರೇರಣೆಗಳೊಂದಿಗೆ ನಿರಂತರವಾಗಿ ಮುಖಾಮುಖಿಯಾಗುತ್ತಲೇ ಅವುಗಳ ಕುರಿತಾದ ತಮ್ಮ ತಾತ್ವಿಕತೆಯನ್ನು ಒಳಗೊಳಿಸುತ್ತಲೇ ಅದನ್ನೊಂದು (ಕವಿತೆ) ವಿಶಿಷ್ಟವಾದ ಆಕೃತಿಯಾಗಿಸುವುದರ ಮೂಲಕ ಹೊರಗಿನ ಅಭಿವ್ಯಕ್ತಿಯಾಗಿಸುವ ಕಲೆ ಗೊತ್ತಿರುವವರು. ಸದ್ಯ, 'ನಿಜವನುಂಡ ಘನ ಪರಿಮಳ' ಕವನ ಸಂಕಲನದಲ್ಲಿನ ಕವಿತೆಗಳಲ್ಲಿ ಆಧುನಿಕ ಜಗತ್ತಿನಲ್ಲಿ ಕಳೆದುಹೋಗುತ್ತಿರುವ ಮನುಷ್ಯ ಸಂಬಂಧಗಳನ್ನು ಪುನರ್ ರೂಪಿಸಬೇಕಾದ ಅನಿವಾರ್ಯತೆಯ ಬಗ್ಗೆಯೂ, ಬದಲಾದ ಕಾಲಘಟ್ಟದಲ್ಲಿ ರಾಜಕಾರಣಿಗಳ ಇಚ್ಛಾಶಕ್ತಿಯ ಕೊರತೆಯಿಂದಾಗಿ ಸಂಕಷ್ಟದ ಸುಳಿಗೆ ಸಿಲುಕಿರುವ ಈ ನಾಡಿನ ರೈತರು ಅನುಭವಿಸುತ್ತಿರುವ ಘೋರ ಬದುಕಿನ ಬಗ್ಗೆಯೂ, ಒಂದಾನೊಮ್ಮೆ ಜಾರಿಯಲ್ಲಿದ್ದ ಸತಿಸಹಗಮನ ಪದ್ಧತಿಯಂಥ ಅನಿಷ್ಟ ಆಚರಣೆಯ ಹಿಂದಿದ್ದ ಪುರುಷ ದೌರ್ಜನ್ಯದ ಬಗ್ಗೆಯೂ ತಮ್ಮದೇ ಗ್ರಹಿಕೆಯ ನೆಲೆಯಲ್ಲಿ ಸಾಮಾಜಿಕ ಪಾತಳಿಯ ಮೇಲೆ ಉತ್ತರವನ್ನು ಕಂಡುಕೊಳ್ಳುತ್ತ ಹೋಗುತ್ತಾರೆ. ಹಾಗೆಯೇ, ಈ ಸಂಕಲನದಲ್ಲಿ ಸಾಮಾಜಿಕ ಮತ್ತು ಶೈಕ್ಷಣಿಕ ರಂಗದ ಹಿತ ಕಾಪಾಡಿದ ಮಹನೀಯರ ಕುರಿತಾಗಿ ಬರೆದಿರುವ ವ್ಯಕ್ತಿ ಚಿತ್ರ ರೂಪದ ಕವಿತೆಗಳೂ ಇಲ್ಲಿವೆ. ಇವು, ಸ್ವಸ್ಥ ಸಮಾಜದ ನಿರ್ಮಾಣದ ಬಗ್ಗೆ ಕವಿಗಿರುವ ಕಳಕಳಿ ಮತ್ತು ಕನಸನ್ನು ವ್ಯಕ್ತಪಡಿಸುತ್ತವೆ. ಹೀಗೆ, ತಮ್ಮ ಅನುಭವಗಳನ್ನು ತಮ್ಮದೇ ಭಾಷೆಯೊಂದಿಗೆ ಒಳಗೊಳಿಸುತ್ತಲೇ ಕವಿತೆ ರಚಿಸುವ ಡಾ॥ ಅಶೋಕ ನರೋಡೆಯವರ ಕವಿತೆಗಳೇ ಅವರ ಆರೋಗ್ಯಕರ ಮನಸ್ಸು ಮತ್ತು ಅದಮ್ಯ ಜೀವನಪ್ರೀತಿಗೆ ಸಾಕ್ಷಿಯಾಗಿ ನಿಲ್ಲುತ್ತವೆ.*

– ***ಕಲ್ಲೇಶ್ ಕುಂಬಾರ್,*** *ಹಾರೂಗೇರಿ, ಬೆಳಗಾವಿ*

## ಕ್ರಾಂತಿ ಜ್ಯೋತಿ ಸಾವಿತ್ರಿ ಬಾಯಿ ಫುಲೆ

*ಡಾ॥ ಎಚ್. ಎಸ್. ಅನುಪಮಾ*

**ಪುಟ : ೮೮** **ಬೆಲೆ : ರೂ. ೬೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧




*ಹೂವು ಕಟ್ಟಿ ಮಾರುವ ಸಮುದಾಯದಲ್ಲಿ ಹುಟ್ಟಿ ಇಂಗ್ಲಿಷ್ ವಿದ್ಯಾಭ್ಯಾಸ ಪಡೆದ ಫುಲೆ ಜ್ಞಾನ ಮೂರನೇ ಕಣ್ಣೆಂದು ಹೇಳುವುದರ ಜೊತೆಗೆ ಬ್ರಿಟಿಷರು ಬಂದ ಮೇಲೆ ಭಾರತದಲ್ಲಿ ದಲಿತರು ಮತ್ತು ಮಹಿಳೆಯರಿಗೆ ಮುಚ್ಚಿಹೋಗಿದ್ದ ಶಿಕ್ಷಣ ಮತ್ತೆ ಬೆಳಕು ಚೆಲ್ಲುತ್ತದೆ ಎಂದು ಹೇಳುತ್ತಿದ್ದರು. ೧೭ ವರ್ಷದ ಜ್ಯೋತಿ ಬಾ ಫುಲೆ ೯ ವರ್ಷದ ಸಾವಿತ್ರಿ ಬಾಯಿಯನ್ನು ಮದುವೆಯಾಗಿ ಆಕೆಗೆ ಶಿಕ್ಷಕ ತರಬೇತಿ ಕೊಡಿಸಿ ಭಾರತದ ಪ್ರಥಮ ಶಿಕ್ಷಕಿಯಾಗಿಸಿ ದಲಿತರಿಗೆ, ಹೆಣ್ಣುಮಕ್ಕಳಿಗೆ ವಿದ್ಯೆ ನೀಡಲು ಸರಣಿ ಶಾಲೆಗಳನ್ನು ತೆರೆದರು. ಉಚ್ಚ ಜಾತಿಯ ಜನರು ಸಾವಿತ್ರಿ ಬಾಯಿ ಬೀದಿಯಲ್ಲಿ ನಡೆದುಹೋಗುವಾಗ ಕಲ್ಲು, ಸಗಣಿ ಎಸೆಯುತ್ತಿದ್ದರು. ಒಂದು ದಿನ ಹೀಯಾಳಿಸುವ ಜನರ ಮೇಲೆ ಸಾವಿತ್ರಿ ತಿರುಗಿಬಿದ್ದರು. ಅಂದಿನಿಂದ ಆಕೆಯ ಮೇಲಿನ ದೌರ್ಜನ್ಯ ಸ್ವಲ್ಪ ಕಡಿಮೆಯಾಯಿತು. ೧೮೪೬ರಲ್ಲಿ ಮೊದಲಿಗೆ ಅಸ್ಪೃಶ್ಯರಿಗೆ ಮಹಾರವಾಡಾದಲ್ಲಿ ಶಾಲೆಯನ್ನು ತೆರೆದರು. ಮುಂದಿನ ದಿನಗಳಲ್ಲಿ ಇವರ ಕೆಲಸ ನೋಡಿ ಗೆಳೆಯರು, ಪುಣೆ ರಾಜರು ಮತ್ತು ಬ್ರಿಟಿಷರು ಅವರ ಸಹಾಯಕ್ಕೆ ನಿಂತು ನೂರಾರು ಶಾಲೆ, ಕಾಲೇಜುಗಳನ್ನು ಪ್ರಾರಂಭಿಸಿದರು. ೧೮೫೩ರಲ್ಲಿ ೨೩೭ ವಿದ್ಯಾರ್ಥಿನಿಯರು ಪುಣೆ ಕಾಲೇಜಿನಲ್ಲಿ ಪರೀಕ್ಷೆ ಬರೆದರು. ೧೮೫೬ರಲ್ಲಿ ೨೫೮ ಅಸ್ಪೃಶ್ಯ ಮಕ್ಕಳು ಇವರ ಶಾಲೆಗಳಲ್ಲಿ ಓದುತ್ತಿದ್ದರು. ಲಿಂಗಸಮಾನತೆಯ ಬಗ್ಗೆಯೂ ಅವರು ಹೋರಾಟಗಳನ್ನು ನಡೆಸಿ ಅನೇಕ ಅಂತರ್ಜಾತೀಯ ಮದುವೆಗಳನ್ನು ನೆರವೇರಿಸಿದರು. ಪತಿ ಜ್ಯೋತಿ ಬಾ ಫುಲೆಗೆ ೧೮೮೭ರಲ್ಲಿ ಹೃದಯಾಘಾತವಾಗಿ ಬಲಬದಿಗೆ ಪಾರ್ಶ್ವವಾಯು ಹೊಡೆದು ೧೮೯೦ರಲ್ಲಿ ತೀರಿಕೊಂಡುಬಿಟ್ಟರು. ಅನಂತರ ಸಾವಿತ್ರಿಬಾಯಿಗೆ ಹೇಳತೀರದ ಕಷ್ಟಗಳು ಸಾಲುಸಾಲಾಗಿ ಬಂದರೂ ದಿಟ್ಟವಾಗಿ ಎದುರಿಸಿದರು. ಹೀಗೆ ದಣಿವರಿಯದೆ ಶುಶ್ರೂಷೆ ಮಾಡುತ್ತಿದ್ದಾಗಲೇ ಸಾವಿತ್ರಿಗೆ ಪ್ಲೇಗ್ ತಗುಲಿ ೧೮೯೭ರಲ್ಲಿ ಪ್ರಾಣಬಿಟ್ಟರು. ಇಂತಹ ಮಹಾತ್ಮ ದಂಪತಿಗಳ ಜೋಡಿ ಭಾರತದ ಚರಿತ್ರೆಯಲ್ಲಿ ಇನ್ನೊಂದಿಲ್ಲ. ಅಂತರಾಳ ಕಲಕುವ ಈ ಹೊತ್ತಿಗೆಯನ್ನು ಬರೆದಿರುವ ಡಾ॥ ಎಚ್. ಎಸ್. ಅನುಪಮಾ ಕನ್ನಡದ ಖ್ಯಾತ ವೈದ್ಯೆ ಮತ್ತು ಲೇಖಕಿ.*

– ***ಡಾ॥ ಎಂ. ವೆಂಕಟಸ್ವಾಮಿ,*** *ಬೆಂಗಳೂರು*

ಎಂ. ಎಂ. ಕಲಬುರ್ಗಿ

# ಸಂಶೋಧನೆಯ ಸ್ವರೂಪ

ಪ್ರಾಮಾಣಿಕತೆ ತೀಕ್ಷ್ಣವಾಗಿದ್ದಷ್ಟೂ ಸಂಶೋಧನೆಯು ಪರಿಸರಕ್ಕೆ ಹೆಚ್ಚು ಕಹಿಯೆನಿಸುತ್ತದೆ. ಹೀಗಿದ್ದೂ, ಅದನ್ನು ಪ್ರಕಟಿಸುವ ಧೈರ್ಯ ಅವನಲ್ಲಿರಬೇಕಾದ ಇನ್ನೊಂದು ಲಕ್ಷಣವಾಗಿದೆ. ಕಂಡ ಸತ್ಯವನ್ನು ಖಂಡಿತವಾಗಿ ಹೇಳಿ ಸಿಲುಬೆಗೆ ಗುರಿಯಾದ, ಮರಣದಂಡನೆಗೆ ತುತ್ತಾದ, ವಿಷಪ್ರಾಶನಕ್ಕೆ ಈಡಾದ ಮಹಾತ್ಮರು ಸಂಶೋಧಕನ ಧೈರ್ಯಕ್ಕೆ ಶಾಶ್ವತ ನಿದರ್ಶನವೆನಿಸಿದ್ದಾರೆ.

'ಸಂಶೋಧನೆ' ಎನ್ನುವುದು ಕಳೆದ ಶತಮಾನದಲ್ಲಿ ಕರ್ನಾಟಕವನ್ನು ಪ್ರವೇಶಿಸಿದ ಒಂದು ಹೊಸ ಶೈಕ್ಷಣಿಕ ಶಿಸ್ತು. ಇದು ಪಾಶ್ಚಾತ್ಯರ research ಎಂಬ ಚಟುವಟಿಕೆಗೆ ಸಮಾಂತರವಾಗಿ ನಾವು ನಡೆಸುತ್ತಲಿರುವ ಬೌದ್ಧಿಕ ಕ್ರಿಯೆಯಾಗಿದೆ.

ಸಂಶೋಧನೆ ಎರಡು ತೆರನಾಗಿದೆ. ಒಂದು : ಇದ್ದೂ ಕಣ್ಮರೆಯಾಗಿರುವ ಹಳೆಯದನ್ನು ಹುಡುಕುವುದು, ಭೂತಕಾಲಕ್ಕೆ ಸಂಬಂಧಿಸಿದುದು. ಇದು discovery. ಕಲೆ–ಸಂಸ್ಕೃತಿ ಕ್ಷೇತ್ರಕ್ಕೆ ಸಂಬಂಧಿಸಿದುದು. ಇನ್ನೊಂದು : ಈವರೆಗೆ ಇಲ್ಲದ ಹೊಸದನ್ನು ಹುಡುಕುವುದು, ಭವಿಷ್ಯತ್ಕಾಲಕ್ಕೆ ಸಂಬಂಧಿಸಿದುದು. ಇದು invention. ವಿಜ್ಞಾನ–ತಂತ್ರಜ್ಞಾನ ಕ್ಷೇತ್ರಕ್ಕೆ ಸಂಬಂಧಿಸಿದುದು. ಹೀಗೆ, ಶೋಧಕ್ರಿಯೆಯನ್ನು ಇಂಗ್ಲಿಷಿನಲ್ಲಿ discovery ಮತ್ತು invention ಪದಗಳಿಂದ ಬಿಡಿಸಿ ಹೇಳುತ್ತಾರೆ. ಕನ್ನಡದಲ್ಲಿ ಮಾತ್ರ ಈ ಎರಡೂ ಪ್ರಕ್ರಿಯೆಗಳಿಗೆ 'ಸಂಶೋಧನೆ' ಎಂಬ ಒಂದೇ ಪದವನ್ನು ಬಳಸುತ್ತಲಿರುವುದರಿಂದ ಈ ವಿಷಯದ ಬಗೆಗೆ ಒಂದಿಷ್ಟು ಗೊಂದಲ ಉಳಿದುಕೊಂಡಿದೆ. ಇದರ ಪರಿಹಾರಕ್ಕಾಗಿ ನಾವು ಇನ್ನು ಮುಂದೆ discoveryಗೆ ಪರ್ಯಾಯವಾಗಿ 'ಅನ್ವೇಷಣ'ವೆಂಬ ಹೊಸ ಪದವನ್ನು, inventionಗೆ ಪರ್ಯಾಯವಾಗಿ 'ಆವಿಷ್ಕರಣ'ವೆಂಬ ಹೊಸ ಪದವನ್ನು ಕಟ್ಟುನಿಟ್ಟಾಗಿ ಬಳಸಬೇಕಾಗಿದೆ.

Discovery ಪ್ರಕಾರದ ಹಿಂದೆಯೂ research ಇರುತ್ತದೆ. invention ಪ್ರಕಾರದ ಹಿಂದೆಯೂ research ಇರುತ್ತದೆ. ಆದುದರಿಂದ discovery ಮತ್ತು invention ಗಳಂತೆ research ಎಂಬುದು ಒಂದು ಸಂಶೋಧನ ಪ್ರಕಾರವಲ್ಲ. ಇವೆರಡರ ಹಿಂದೆ ನಡೆಯುವ ಒಂದು ಬೌದ್ಧಿಕ ಪ್ರಕ್ರಿಯೆಯಾಗಿದೆ.

ಕಲೆ–ಸಾಹಿತ್ಯ–ಸಂಸ್ಕೃತಿ ಕ್ಷೇತ್ರಗಳಲ್ಲಿ ಜರುಗುವ 'ಅನ್ವೇಷಣಾತ್ಮಕ ಸಂಶೋಧನೆ'ಯು ಆಕರಸಾಮಗ್ರಿಯನ್ನು ಅಪೇಕ್ಷಿಸುತ್ತದೆ. ಅದಕ್ಕಾಗಿಯೇ no source, no research ಎಂದು ಹೇಳುತ್ತಾರೆ. ಸಂಶೋಧಕನಾದವನು ಗತಕಾಲ ನಮಗಾಗಿ ಬಿಟ್ಟುಹೋಗಿರುವ ಆಕರ ಸಾಮಗ್ರಿಯನ್ನು ಮೊದಲು ಸಂಗ್ರಹಿಸಬೇಕಾಗುತ್ತಿದ್ದು, ಭಾರತದ ಮಟ್ಟಿಗೆ ಅವುಗಳ ಪ್ರಮಾಣ ಅಧಿಕವಾಗಿದ್ದರೂ ಪ್ರಾಮಾಣಿಕತೆ ಪ್ರಶ್ನಾರ್ಹವಾಗಿದೆ. ಏಕೆಂದರೆ, ಭಾರತೀಯರ ಧಾರ್ಮಿಕ ಮನಸ್ಸು ಕಾರಣವಾಗಿ ನಮ್ಮಲ್ಲಿ ಇತಿಹಾಸ ಸಂಪ್ರದಾಯ ಗೌಣಸ್ಥಾನಕ್ಕೆ ಸರಿದು, ಪುರಾಣ ಸಂಪ್ರದಾಯ ಪ್ರಮುಖ ಸ್ಥಾನ ಪಡೆಯಿತು. ನಮ್ಮ ಕವಿಗಳು *ಕೆಳದಿ ನೃಪವಿಜಯ*, *ಕುಮಾರರಾಮನ ಸಾಂಗತ್ಯ*ದಂತಹ ಕಾವ್ಯಗಳನ್ನು ಬರೆಯಲು ಹೊರಟರೂ ಉತ್ಪ್ರೇಕ್ಷೆಯ ಕಾಟ ಅವರ ಬೆನ್ನುಬಿಡಲಿಲ್ಲ. ಹೀಗಾಗಿ, ನಮ್ಮ ಕೈಗೆ ಉಳಿದುಬಂದ ಆಕರಸಾಮಗ್ರಿಯನ್ನು ಕಣ್ಣು ಮುಚ್ಚಿ, ಸ್ವೀಕರಿಸಲು ಸಾಧ್ಯವಿಲ್ಲವಾಗಿದೆ. ಕಾಲಕ್ರಮೇಣ, ಈ ಸಾಮಗ್ರಿಯಲ್ಲಿ ಅರ್ಧದಷ್ಟು ಉಪೇಕ್ಷೆಗೆ ಗುರಿಯಾಗಿ ಕಳೆದೇ ಹೋಯಿತು. ಮಿಕ್ಕರ್ಧ ಸಾಮಗ್ರಿ ಹೊಣೆಗೇಡಿ–ಕಿಡಿಗೇಡಿ ಜನವರ್ಗದಿಂದಾಗಿ ರೂಪವ್ಯತ್ಯಾಸ ಮಾಡಿಕೊಳ್ಳುತ್ತ ಸಾಗಿಬಂದಿತು. ಹೀಗಾಗಿ ಸಂಶೋಧಕನಾದವನು ತನ್ನ ಕೈಗೆ ಬಂದ ಆಕರಸಾಮಗ್ರಿಯಲ್ಲಿ ಸತ್ಯಾಸತ್ಯತೆ ಎಷ್ಟು? ಪೂರ್ಣಾಪೂರ್ಣತೆ ಎಷ್ಟು? ಎಂಬುದನ್ನು ಮೊದಲು ಶೋಧಿಸಬೇಕಾಗುತ್ತದೆ. ಅಂದರೆ ಮೊದಲನೆಯ ಹಂತದಲ್ಲಿ ಆಕರವನ್ನು ಶೋಧಿಸುವುದು, ಎರಡನೆಯ



ಡಾ|| ಎಂ. ಎಂ. ಕಲಬುರ್ಗಿ ಅವರಿಗೆ "1998ರಲ್ಲಿ ಸಮರ್ಪಿಸಿದ 'ಮಹಾಮಾರ್ಗ' ಎಂಬ ಅಭಿನಂದನ ಗ್ರಂಥದಲ್ಲಿ ಅವರೇ ಬರೆದ ಲೇಖನವನ್ನು ಇಲ್ಲಿ 'ಹೊಸತು' ಓದುಗರಿಗಾಗಿ ಪುನರ್ ಮುದ್ರಿಸಲಾಗಿದೆ."

– ಸಂ.

ಹಂತದಲ್ಲಿ ಶೋಧಿತ ಆಕರವನ್ನು ಪರೀಕ್ಷಿಸುವುದು, ಮೂರನೆಯ ಹಂತದಲ್ಲಿ ಈ ಪರೀಕ್ಷಿತ ಆಕರಗಳ ಸಹಾಯದಿಂದ ಸತ್ಯವನ್ನು ಕಂಡುಹಿಡಿಯುವುದು ಹೀಗೆ ಮೂರು ನೆಲೆಗಳಲ್ಲಿ ಸಂಶೋಧನೆ ಸಾಗಬೇಕಾಗುತ್ತದೆ.

ಸಂಶೋಧಕನಾದವನು ಶೋಧಿಸಬೇಕಾದ ಆಕರಗಳು ನಾಲ್ಕು ಬಗೆಯಾಗಿವೆ. ವಸ್ತುಸಾಮಗ್ರಿ, ಭಾಷಾಸಾಮಗ್ರಿ, ಕ್ರಿಯಾಸಾಮಗ್ರಿ ಮತ್ತು ಜ್ಞಾನಸಾಮಗ್ರಿ. ಇವು ಒಂದೇ ಸತ್ಯದ ಪರ್ಯಾಯ ರೂಪಗಳಾಗಿವೆ. ಕರ್ನಾಟಕಕ್ಕೆ ಬಂದರೆ ಭೂಮಿಯ ಮೇಲೆ ಮತ್ತು ಒಳಗೆ ಸಿಗುವ "ವಸ್ತುಸಾಮಗ್ರಿ" ವಿಪುಲ ಪ್ರಮಾಣದಲ್ಲಿದೆ. "ಭಾಷಾಸಾಮಗ್ರಿ"ಗೆ ಸಂಬಂಧಪಟ್ಟ ಲಿಖಿತಸಾಮಗ್ರಿಯಲ್ಲಿ ದಾಖಲುಸಾಮಗ್ರಿ ಮತ್ತು ಸಾಹಿತ್ಯ ಸಾಮಗ್ರಿಯೂ ತಕ್ಕಮಟ್ಟಿಗೆ ಸಿಗುತ್ತದೆ. ಇತ್ತೀಚೆಗೆ ಜಾನಪದದ ಹೆಸರಿನಲ್ಲಿ ಮೌಖಿಕ ಸಾಮಗ್ರಿಯ ಶೋಧ ನಡೆದು, ಆಕರಗಳ ಕ್ಷೇತ್ರ ವಿಸ್ತಾರಗೊಂಡಿದೆ. ಜನರ ದೈನಂದಿನ ಕ್ರಿಯೆ, ಆಚರಣಾತ್ಮಕ ಕ್ರಿಯೆಗಳು "ಕ್ರಿಯಾಸಾಮಗ್ರಿ" ಗಳಾದರೆ ಕಾಯಕ ದಾಸೋಹಗಳಂಥ ವಿಚಾರಗಳೂ ನಂಬಿಕೆಗಳೂ "ಜ್ಞಾನಸಾಮಗ್ರಿ"ಯೆನಿಸುತ್ತವೆ. ಈ ನಾಲ್ಕು ಬಗೆಯ ಆಕರಸಾಮಗ್ರಿಯನ್ನು ಸಂಶೋಧಕನಾದವನು ಕ್ಷೇತ್ರಕಾರ್ಯ, ಗ್ರಂಥಾಲಯಗಳಿಂದ ಸಂಗ್ರಹಿಸಿಕೊಳ್ಳಬೇಕಾಗುತ್ತದೆ.

ಹೀಗೆ, ಆಕರಗಳನ್ನು ಸಂಗ್ರಹಿಸಿಕೊಂಡು ಕಾರ್ಯಪ್ರವೃತ್ತನಾಗುವ ಸಂಶೋಧಕನಿಗೆ ಕೆಲವು ಮೂಲಭೂತ ಅರ್ಹತೆಗಳು ಅವಶ್ಯ. ಅವು : ಕುತೂಹಲ, ಪ್ರಾಮಾಣಿಕತೆ, ಧೈರ್ಯ, ವ್ಯುತ್ಪತ್ತಿ ಪ್ರತಿಭೆ ಮತ್ತು ಕ್ರಿಯಾಶೀಲತೆ. ಇವುಗಳಲ್ಲಿ ನಿರಂತರ ಜಾಗೃತವಾಗಿರಬೇಕಾದುದು ಕುತೂಹಲ. ಜನತೆಯ ಬದುಕನ್ನು ಕುತೂಹಲದಿಂದ ನೋಡುವ, ಬರವಣಿಗೆಯನ್ನು ಕುತೂಹಲದಿಂದ ಓದುವ ಒಂದು ವಿಶಿಷ್ಟ ಮನೋಧರ್ಮವನ್ನು ಆತ ಬೆಳೆಸಿಕೊಂಡಿರಬೇಕಾಗುತ್ತದೆ. ಸಾಮಾನ್ಯವಾಗಿ ಕೇಳಿಬರುವ "ದೇವರು ದಿಂಡರು" ಎಂಬ ಜೋಡುನುಡಿಯಲ್ಲಿಯ 'ದಿಂಡರು' ಪದಕ್ಕೆ ಏನು ಅರ್ಥ ? "ಗುಡ್ಡ ಸುತ್ತಿ ಮೈಲಾರಕ್ಕೆ ಹೋಗು" ಎಂಬ ಗಾದೆ ಮಾತು, ಗುಡ್ಡ ಸುತ್ತಿ ಹೋಗುವ ಯಾವ ಮೈಲಾರ ಕ್ಷೇತ್ರವನ್ನು ಸೂಚಿಸುತ್ತದೆ ? ಎಂಬಂಥ ಕುತೂಹಲಗಳನ್ನು ಬೆಳೆಸಿಕೊಂಡು ಅವುಗಳ ಬೆನ್ನುಹತ್ತಿ ಅವನು ಆತ್ಯಂತಿಕ ಸತ್ಯವನ್ನು ಶೋಧಿಸಬೇಕಾಗುತ್ತದೆ.

"ಸತ್ಯವನ್ನು ಹೇಳುತ್ತೇನೆ, ಸತ್ಯವನ್ನಲ್ಲದೆ ಬೇರೆ ಏನನ್ನೂ ಹೇಳುವುದಿಲ್ಲ" ಎಂಬ ಪ್ರಾಮಾಣಿಕತೆ ಅವನ ಇನ್ನೊಂದು ಲಕ್ಷಣವಾಗಿದೆ. Past is perfect ಎಂದು ಹೇಳುವುದುಂಟು. ಹೀಗೆ ನಿರ್ದಿಷ್ಟಗೊಂಡ ಸತ್ಯವನ್ನು ಹುಡುಕಿ ಹೇಳುವಲ್ಲಿ ಅವನು ನೂರಕ್ಕೆ ನೂರು ಪ್ರಾಮಾಣಿಕತೆಯನ್ನು ಮೆರೆಯಬೇಕು. ಸಂಶೋಧನೆಯ ಸಂಪರ್ಕ ಕಾರಣವಾಗಿ ಅವನಲ್ಲಿ ಗಟ್ಟಿಗೊಳ್ಳುತ್ತ ಬಂದ ಈ ಪ್ರಾಮಾಣಿಕ ಪ್ರಜ್ಞೆ, ನಿಜ ಜೀವನದಲ್ಲೂ ಅವನನ್ನು ಪ್ರಾಮಾಣಿಕನನ್ನಾಗಿ ರೂಪಿಸುತ್ತದೆ. ಹೀಗೆ, ನಿತ್ಯದ ಬದುಕು ಮತ್ತು ಬರಹದ ಬದುಕುಗಳಲ್ಲಿ ಪ್ರಾಮಾಣಿಕವಾಗಿ ಆಕಾರ ಪಡೆದ ಸಂಶೋಧಕ ಲೋಕವಿರೋಧಿಯಾಗಿ ಬಾಳಬೇಕಾದುದು ಸಹಜವಾಗಿದೆ.

ಪ್ರಾಮಾಣಿಕತೆ ತೀಕ್ಷ್ಣವಾಗಿದ್ದಷ್ಟೂ ಸಂಶೋಧನೆಯು ಪರಿಸರಕ್ಕೆ ಹೆಚ್ಚು ಕಹಿಯೆನಿಸುತ್ತದೆ. ಹೀಗಿದ್ದೂ, ಅದನ್ನು ಪ್ರಕಟಿಸುವ ಧೈರ್ಯ ಅವನಲ್ಲಿರಬೇಕಾದ ಇನ್ನೊಂದು ಲಕ್ಷಣವಾಗಿದೆ. ಕಂಡ ಸತ್ಯವನ್ನು ಖಂಡಿತವಾಗಿ ಹೇಳಿ ಸಿಲುಬೆಗೆ ಗುರಿಯಾದ, ಮರಣದಂಡನೆಗೆ ತುತ್ತಾದ, ವಿಷಪ್ರಾಶನಕ್ಕೆ ಈಡಾದ ಮಹಾತ್ಮರು ಸಂಶೋಧಕನ ಧೈರ್ಯಕ್ಕೆ ಶಾಶ್ವತ ನಿದರ್ಶನವೆನಿಸಿದ್ದಾರೆ.

ಆಕರಸಾಮಗ್ರಿ ಅಧಿಕವಾಗಿದ್ದಷ್ಟೂ ಸಂಶೋಧನೆ ಸಬಲವಾಗುತ್ತ ಹೋಗುತ್ತದೆ. ಆದುದರಿಂದ ಸಂಶೋಧಕನಾದವನ ವ್ಯಾಸಂಗ ತುಂಬ ವಿಸ್ತಾರವೂ ವೈವಿಧ್ಯಪೂರ್ಣವೂ ಆಗಿರಬೇಕಾಗುತ್ತದೆ. ಇದನ್ನೇ ವ್ಯುತ್ಪತ್ತಿ ಎಂದು ಕರೆಯುತ್ತಾರೆ.

ಕವಿಗೆ ಇರುವಂತೆ ಸಂಶೋಧಕನಿಗೂ ಕಾಣುವ ಪ್ರತಿಭೆಯಿರಬೇಕಾಗುತ್ತದೆ. ಕವಿಯಲ್ಲಿ ಅದು 'ಮೂಲ ಕಲ್ಪನೆ'ಯ ರೂಪದಲ್ಲಿದ್ದರೆ, ಸಂಶೋಧಕನಲ್ಲಿ 'ಮೂಲ ಊಹೆ'ಯ ರೂಪದಲ್ಲಿರುತ್ತದೆ. ಹೀಗೆ, ಕಂಡ ಸತ್ಯವನ್ನು ಕವಿಯಾದವನು ವಾಚ್ಯ, ಲಕ್ಷ್ಯ, ವ್ಯಂಗ್ಯ ಪಾತಳಿಗಳ ಭಾಷೆಯಲ್ಲಿ ಅಭಿವ್ಯಕ್ತಗೊಳಿಸಿದರೆ ಸಂಶೋಧಕ ನಾದವನು ವಾಚ್ಯಪಾತಳಿಯ ಭಾಷೆಯಲ್ಲಿ ಅಭಿವ್ಯಕ್ತಗೊಳಿಸುತ್ತಾನೆ. ಇದರಿಂದಾಗಿ ಕವಿಯ ರಚನೆಯು ಸೃಜನ ಪ್ರತಿಭೆಯಲ್ಲಿ ಬೆಳೆದರೆ, ಸಂಶೋಧಕನ ರಚನೆಯು ಸಂಯೋಜನ ಪ್ರತಿಭೆಯಲ್ಲಿ ಬೆಳೆಯುತ್ತದೆ.

ಕ್ರಿಯಾಶೀಲತೆ ಸಂಶೋಧಕನಲ್ಲಿ ಇರಬೇಕಾದ ಇನ್ನೊಂದು ಮುಖ್ಯ ಗುಣ. ಇದು ಅಧಿಕವಾಗಿದ್ದಷ್ಟೂ ಅವನ ಸಂಶೋಧನ ಪ್ರಜ್ಞೆ ಹರಿತವಾಗುತ್ತ ಹೋಗುತ್ತದೆ.

'ಮಹಾಮಾರ್ಗ'ದ ಪಥಿಕ

ಅಪರಾತ್ರಿಯಂತಿಲ್ಲ ಈಗ ಬರುವೇಕಾಂತ ಪಥ –
ನಡಿಗೆಯಂತಿಲ್ಲ, ದುಡಿಮೆಯಂತಿಲ್ಲ ಅಡೆತಡೆಯಿರದ ವೇಗ.
ಒಳದಾರಿ ಹಿಡಿಯದೆ 'ಮಾರ್ಗ'ದಲಿ ಸಾಗುವ ಛಲ.
ಹತ್ತು ಕ್ಷೇತ್ರಗಳ ತೆಕ್ಕೆ ಬಡಿದು ಶೋಧಿಸಿ ತೆಗೆದ
ವಸ್ತುವಿಗೆ ಜ್ಞಾನದ ಕಿಚ್ಚು; ಸೃಜನದುಸಿರಾಟ.
ಕೃತಿಗೆ ಜಗ್ಗದ, ಶಾಸನಕೆ ಬಗ್ಗದ ವಿಭಿನ್ನ
ವಿಶ್ಲೇಷಣೆಯ ಧಾಟಿ. ತಪ್ಪಿ ದುಡುಕುವ ಮುನ್ನ
ಒಪ್ಪಿ ಅರ್ಧ ವಿರಾಮ. ಇಲ್ಲಿಲ್ಲ ದೊಂಬರಾಟ
ವಿವಿಧ ಕೋನದ ಗ್ರಹಿಕೆ: ಸಹೃದಯತೆಯ ಕಾಣ್ಕೆ.
ಶೋಧನ ಹಿನ್ನೆಲೆಯಿಂದ ಹೊಳೆಯುವ ವಿಮರ್ಶೆ.
ಹೊಸ ಬಗೆಯ ಸಂವಾದಕ್ಕೆ ತೆಗೆವ ನಿಷ್ಕರ್ಷೆ.
ಸಲ್ಲಲಾರದು ಎಲ್ಲಿಯು ಈರ್ಷೆ, ಹೋರಾಟಕೆ.
ಬಂಡೆ ಪುಡಿಗೊಳಿಸಿ ಹೊಸ ಮಾರ್ಗ ಕಟ್ಟುವ ತವಕ
ತುಂಗ ಭದ್ರೆಗೆ ತುಡಿವ 'ಮಹಾಮಾರ್ಗ'ದ ಪಥಿಕ.

– ಚೆನ್ನವೀರ ಕಣವಿ

*(ಡಾ॥ ಎಂ. ಎಂ. ಕಲಬುರ್ಗಿಯವರಿಗೆ ಅರ್ಪಿಸಲಾದ 'ಮಹಾಮಾರ್ಗ' ಅಭಿನಂದನ ಗ್ರಂಥಕ್ಕೆ ಹಿರಿಯಕವಿ ಶ್ರೀ ಚೆನ್ನವೀರ ಕಣವಿಯವರು ಬರೆದಿದ್ದ ಕವನ)*

ಸಂಶೋಧನೆಯ ಹೊಸ ಹೊಸ ಒಳನೋಟಗಳು ಅವನಿಗೆ ಕಾಣಿಸುತ್ತ ಹೋಗುತ್ತವೆ.

ಹೀಗೆ, ವಿಪುಲ ಆಕರಸಾಮಗ್ರಿಯನ್ನು ಬಳಸಿಕೊಂಡು, ವಿಶಿಷ್ಟ ವ್ಯಕ್ತಿತ್ವವನ್ನು ಬೆಳೆಸಿಕೊಂಡು ಮುನ್ನಡೆಯುವ ಸಂಶೋಧಕ ವಿಶ್ಲೇಷಣಾತ್ಮಕ, ವ್ಯಾಖ್ಯಾನಾತ್ಮಕ ಹಂತಗಳಲ್ಲಿ ಸಂಶೋಧನಕ್ರಿಯೆಯನ್ನು ಪೂರೈಸಬೇಕಾಗುತ್ತದೆ. ಇವುಗಳಲ್ಲಿ ವಿಶ್ಲೇಷಣಾತ್ಮಕ ಸಂಶೋಧನೆಯು ರೂಪನಿಷ್ಠವಾಗಿದ್ದು, fact finding ಇದರ ಗುರಿಯಾಗಿದೆ. ಇಲ್ಲಿ ಆಕರಗಳನ್ನು ಸಂವೇದನಾರಹಿತವಾಗಿ ಬಳಸಿಕೊಂಡು ಫಲಿತ ಗಳನ್ನು ಪ್ರಕಟಿಸಲಾಗುತ್ತದೆ. ಇಲ್ಲಿಗೇ ನಿಲ್ಲದೆ ಆಕರಗಳನ್ನು ಸಂವೇದನಾಸಹಿತವಾಗಿ ಬಳಸಿಕೊಂಡು ಫಲಿತಗಳನ್ನು ಪ್ರಕಟಿಸುವುದೇ ವ್ಯಾಖ್ಯಾನಾತ್ಮಕ ಸಂಶೋಧನೆ ಯಾಗಿದ್ದು, thought finding ಇದರ ಗುರಿಯಾಗಿದೆ. ಸಂಶೋಧಕ ಹೆಚ್ಚಿನದಾಗಿ ತನ್ನ ಚಿಂತನವನ್ನೂ ಆಕರದಂತೆ ಬಳಸುವುದರಿಂದ ಈ ವ್ಯಾಖ್ಯಾನಾತ್ಮಕ ಸಂಶೋಧನೆಗೆ ಒಂದು ಬಗೆಯ ಚಲನಶೀಲತೆ ಪ್ರಾಪ್ತವಾಗುತ್ತದೆ. ವಿಶ್ಲೇಷಣೆ ಬೇರೆ, ವ್ಯಾಖ್ಯಾನ ಬೇರೆ; ಮೊದಲನೆಯದು ವಸ್ತುನಿಷ್ಠವಾಗಿದ್ದು ಎರಡನೆಯದು ಹೆಚ್ಚಿನದಾಗಿ ವ್ಯಕ್ತಿನಿಷ್ಠತೆಯನ್ನೂ ಒಳಗೊಳ್ಳುತ್ತದೆ. ಹೀಗಾಗಿ, ವಿಶ್ಲೇಷಣಾತ್ಮಕ ಸಂಶೋಧನೆ ಕೆಲವೊಮ್ಮೆ ವಿಮರ್ಶೆಯಾಗಿ ರೂಪುಗೊಳ್ಳುತ್ತದೆ. ಕರ್ನಾಟಕದಲ್ಲಿ ಇಂದು ಈ ಬಗೆಯ ಸಂಶೋಧನೆ ಬಿಚ್ಚಿಕೊಳ್ಳುತ್ತಲಿದ್ದು, ಇದು ಸಂಶೋಧನೆಯೋ ವಿಮರ್ಶೆಯೋ ಎಂಬ ಅನುಮಾನವನ್ನು ಹುಟ್ಟಿಸುತ್ತದೆ. ಸಂಶೋಧನೆ ಮತ್ತು ವಿಮರ್ಶೆಗಳು ಅಂತಿಮ ಘಟ್ಟದಲ್ಲಿ ಒಂದೇಯಾಗಿವೆ ಎಂಬ ಸತ್ಯವನ್ನು ಇದು ಸ್ಪಷ್ಟಪಡಿಸುತ್ತದೆ.

'ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ' ಎಂದು ಹೇಳುತ್ತಾರೆ, ಬಸವಣ್ಣನವರು. ನಿಜವಾದ ಸಂಶೋಧಕನಿಗೆ ಈ ಮಾತು ಮಾರ್ಗದರ್ಶಿಯಾಗಿದೆ. ಅಂದರೆ, ಆತ ಸತ್ಯಕ್ಕೆ ಕೇಡು ತಟ್ಟದಂತೆ, ತನ್ನ ಸ್ವಾತಂತ್ರ್ಯಕ್ಕೆ ಭಂಗ ಬರದಂತೆ ಸಂಶೋಧನವ್ರತವನ್ನು ಮುಂದುವರಿಸಬೇಕು. ಗತಿಸಿದ ಪರಂಪರೆಯ ಪ್ರಕಟಣೆಯ ಹೊರೆ ತನ್ನ ಮೇಲಿದೆ ಎಂಬ ಎಚ್ಚರ ಮನೆಮಾಡಿರಬೇಕು. ಪರಂಪರೆಯನ್ನು

ವ್ಯತ್ಯಸ್ತಗೊಳಿಸುವ, ಮುಚ್ಚಿಹಾಕುವ ಪಾಪಕಾರ್ಯ ಅವನ ಕೈಯಿಂದ ಜರುಗಬಾರದು. ಆದುದರಿಂದ, ಆತ ಆಕರಸಾಮಗ್ರಿಯನ್ನು ಅವಲಂಬಿಸಿ ಸತ್ಯವನ್ನು, ಅದು ಸಾಧ್ಯವಾಗದಿದ್ದರೆ, ಸಂಭಾವ್ಯತೆಯನ್ನು ಸ್ಥಾಪಿಸಬೇಕಾಗುತ್ತದೆ. ಮುಂದಿನವರು ಈ ಸಂಭಾವ್ಯತೆಯನ್ನು ಹೊಸ ಆಕರಗಳಿಂದ ಸತ್ಯಗೊಳಿಸ ಬಹುದಾಗಿದೆ. ಅದಕ್ಕಾಗಿಯೇ "ಸಂಶೋಧನೆಯೆನ್ನುವುದು ಅಲ್ಪವಿರಾಮ, ಅರ್ಧವಿರಾಮಗಳ ಮೂಲಕ ಪೂರ್ಣವಿರಾಮದೆಡೆಗೆ ಸಾಗುವ ಕ್ರಿಯೆಯಾಗಿದೆ" ಎಂದು ಹೇಳುವುದು.

ಸಂಶೋಧನೆಯ ಹಾದಿಯಲ್ಲಿ ಅನೇಕ ಪ್ರಕಾರಗಳಿದ್ದರೂ ಗುರಿ ಒಂದೇ. ಅದು ಸತ್ಯಶೋಧ. ವಿದ್ವಾಂಸರು ಆ ದಾರಿಗಳನ್ನು ವಿಷಯನಿಷ್ಠ, ಉದ್ದೇಶನಿಷ್ಠ, ವಿಧಾನನಿಷ್ಠ, ಸ್ವರೂಪನಿಷ್ಠ, ಆನ್ವಯಿಕ, ಬಹುಶಿಸ್ತೀಯ, ಸಂಖ್ಯಾನಿಷ್ಠ, ಮಾದರಿನಿಷ್ಠ, ಘಟಕನಿಷ್ಠ ಮತ್ತು ಸಂಸ್ಕೃತಿನಿಷ್ಠವೆಂದು ಬಿಡಿಸಿಹೇಳಿದ್ದಾರೆ.

ಸಂಶೋಧನೆಯೆನ್ನುವುದು ಆಂಗ್ಲ ವಿದ್ವಾಂಸರು ನಮಗೆ ತೋರಿಸಿಕೊಟ್ಟ ಹೊಸ ಶೈಕ್ಷಣಿಕ ಶಿಸ್ತು. ಪ್ರಾರಂಭದಲ್ಲಿ oriental studies – ಅಂದರೆ, ಪ್ರಾಚ್ಯ ಸಂಶೋಧನೆ – ಹೆಸರಿನಲ್ಲಿ ಪ್ರಾರಂಭವಾದ ಈ ಕ್ರಿಯೆಯು ಆಕರಗಳ ಶೋಧ, ಆಮೇಲೆ ಆಕರಗಳ ವಿಶ್ಲೇಷಣಾತ್ಮಕ ಶೋಧ, ಕೊನೆಗೆ ಆಕರಗಳ ವ್ಯಾಖ್ಯಾನಾತ್ಮಕ ಶೋಧಗಳೆಂಬ ಘಟ್ಟಗಳಲ್ಲಿ ಸಾಗಿಬಂದಿದೆ. ಈ ಸಂಶೋಧನೆಯ ಮುಖ್ಯ ಅಂಗ ಪಿಎಚ್.ಡಿ. ಪ್ರಬಂಧಗಳ ಬರವಣಿಗೆ. ಕರ್ನಾಟಕಕ್ಕೆ ಸಂಬಂಧಪಟ್ಟಂತೆ ಪಿಎಚ್.ಡಿ. ಅಧ್ಯಯನ ಮೊದಲು ಪ್ರಾರಂಭವಾದುದು ದೂರದ ಲಂಡನ್ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಮಾಧ್ಯಮದ ಮೂಲಕ ಸುಮಾರು ೮೫ ವರ್ಷಗಳಷ್ಟು ಹಿಂದೆ, ಅಂದರೆ ೧೯೩೦ರಲ್ಲಿ. ಲಂಡನ್ ವಿಶ್ವವಿದ್ಯಾನಿಲಯದಲ್ಲಿ, ಎಲ್. ಟಿ. ಬಾರ್ನೆಟ್ ಅವರ ಮಾರ್ಗದರ್ಶನದಲ್ಲಿ ಡಾ॥ ಎಸ್. ಸಿ. ನಂದೀಮಠ ಅವರು ಬರೆದು ಪದವಿ ಪಡೆದುದೇ ಕರ್ನಾಟಕದ ಪ್ರಥಮ ಪಿಎಚ್.ಡಿ. ಪ್ರಬಂಧವೆಂದು ತೋರುತ್ತದೆ. ಲಂಡನ್ ವಿಶ್ವವಿದ್ಯಾಲಯದ ಬಳಿಕ ಈ ಅಧ್ಯಯನ ಆರಂಭವಾದುದು ಮುಂಬೈ ವಿಶ್ವವಿದ್ಯಾಲಯದಲ್ಲಿ, ಕನ್ನಡ ಮಾಧ್ಯಮದ ಮೂಲಕ ಆರ್. ಎಸ್. ಪಂಚಮುಖಿ ಅವರ ಮಾರ್ಗದರ್ಶನದಲ್ಲಿ ಡಾ॥ ಎ. ಟಿ. ಪಾಟೀಲ ಅವರು ೧೯೪೭ರಲ್ಲಿ ಪೂರೈಸಿದುದೇ ಈ ವಿಶ್ವವಿದ್ಯಾಲಯದ ಮೊದಲ ಪಿಎಚ್.ಡಿ. ಪ್ರಬಂಧವಾಗಿದೆ. ಮುಂಬೈ ವಿಶ್ವವಿದ್ಯಾಲಯದ ತರುವಾಯ ಈ ಅಧ್ಯಯನ ಕರ್ನಾಟಕದಲ್ಲಿ ಪ್ರಾರಂಭವಾಯಿತು. ಈ ಪ್ರಾಂತದಲ್ಲಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯವೇ ಮೊದಲು ಪಿಎಚ್.ಡಿ. ಪದವಿ ನೀಡಿದ್ದು. ಅದನ್ನು ಪಡೆದ ಕೀರ್ತಿ ಪ್ರೊ॥ ಕುಂದಣಗಾರರ ಮಾರ್ಗದರ್ಶನದಲ್ಲಿ ೧೯೫೫ರಲ್ಲಿ ಜಾನಪದವನ್ನು ಕುರಿತು ಅಧ್ಯಯನ ಮಾಡಿದ ಡಾ॥ ಬಿ. ಎಸ್. ಗದ್ದಗಿಮಠ ಅವರಿಗೆ ಸಲ್ಲುತ್ತದೆ. ಆಮೇಲೆ ಕರ್ನಾಟಕದ ಒಳಹೊರಗಿನ ವಿಶ್ವವಿದ್ಯಾಲಯಗಳ ಮೂಲಕ ೩೦೦ರಷ್ಟು ಪಿಎಚ್.ಡಿ. ಪ್ರಬಂಧಗಳು ಹೊರಬಂದಿವೆ. ಸಂಖ್ಯೆಯೇನೋ ವಿಪುಲವಾಗಿದೆ, ಸತ್ವ ಮಾತ್ರ ಸಮಾಧಾನಕರವಾಗಿಲ್ಲ. ಕೇವಲ ನಾಲ್ಕೈದು ಕ್ಷೇತ್ರಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಳ್ಳುವುದು, ಮಾರ್ಗದರ್ಶಕನಾಗಲೀ ವಿದ್ಯಾರ್ಥಿಯಾಗಲೀ



*ಮೇ ೨೬, ೨೦೧೫ರಂದು ಧಾರವಾಡದಲ್ಲಿ ಗುಬ್ಬಚ್ಚಿ ಗೂಡು ಕಾರ್ಯಕ್ರಮದಲ್ಲಿ ಮಾತನಾಡುತ್ತಿರುವ ಡಾ॥ ಎಂ. ಎಂ. ಕಲಬುರ್ಗಿಯವರು.*



ಈ ಅಧ್ಯಯನವನ್ನು ಗಂಭೀರವಾಗಿ ಪರಿಗಣಿಸದಿರುವುದು ಇದಕ್ಕೆ ಕಾರಣವಾಗಿದೆ. ಹೀಗಾಗಿ, ಸಂಶೋಧನೆಯೆಂಬ ವಿದ್ಯಾವ್ಯಾಸಂಗವನ್ನು ಬದುಕಿನ ಭಾಗವಾಗಿ ತೆಗೆದುಕೊಳ್ಳುವ ಅಭ್ಯಾಸಿಗಳ ಸಂಖ್ಯೆ ದಿನದಿಂದ ದಿನಕ್ಕೆ ಕರ್ನಾಟಕದಲ್ಲಿ ಕಡಿಮೆಯಾಗುತ್ತಲಿದೆ. ಇದಕ್ಕೆ ಕಾರಣ, ಸಂಶೋಧನೆ ಅನಾಕರ್ಷವಾಗುತ್ತಲಿರುವುದು ಮತ್ತು ಲೌಕಿಕವಾಗಿ ಅಪ್ರಯೋಜಕ ಸ್ಥಿತಿಗೆ ತಳ್ಳಲ್ಪಟ್ಟಿರುವುದು. ಈ ಎರಡು ನೆಲೆಗಳಲ್ಲಿ ಪ್ರಗತಿ ಸಾಧಿಸಿದರೆ ಮಾತ್ರ ಸಂಶೋಧನೆಯು ವಿಮರ್ಶನ ಮತ್ತು ಸೃಜನ ಸಾಹಿತ್ಯಗಳಂತೆ ಗರಿ ಬಿಚ್ಚಿ ಬೆಳೆಯಬಹುದಾಗಿದೆ. ಸಂಶೋಧನೆಯನ್ನು ಆಕರ್ಷಕ ಗೊಳಿಸುವುದೆಂದರೆ ಅದರ ಭಾಷೆಯಲ್ಲಿ, ವಸ್ತು ನಿರ್ವಹಣೆಯಲ್ಲಿ, ವಸ್ತುವಿನ ಆಯ್ಕೆಯಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡುವುದು. ಇದು ಹಲವು ಜನರ ಹಲವು ಬಗೆಯ ಪ್ರಯತ್ನಗಳಿಂದ ಮೂಡಿಬರುವ ದಾರಿಯಾಗಿದೆ. ಸಂಶೋಧಕರ ಸಂಖ್ಯಾಪ್ರಮಾಣವೇ ಕಡಿಮೆಯಾಗಿರುವಾಗ ಇಂಥ ದಾರಿ ಕರ್ನಾಟಕದಲ್ಲಿ ಮೂಡಿಬರುವ ಬಗ್ಗೆ ಇಂದು ಅನುಮಾನಗಳಿವೆ.

ಸಂಶೋಧನ ಕ್ಷೇತ್ರ ಇಂದು ಬಡವಾಗುತ್ತ ನಡೆದಿದೆ. ಈ ದುರಂತದಿಂದ ಪ್ರಸ್ತುತ ಕ್ಷೇತ್ರವನ್ನು ಪಾರುಮಾಡುವುದೆಂದರೆ ಸಂಶೋಧಕರಿಗೂ ಸೃಜನ–ವಿಮರ್ಶನ ಸಾಹಿತಿಗಳಂತೆ ಸ್ಥಾನಗೌರವ, ಹುದ್ದೆಗಳನ್ನು ಒದಗಿಸಿಕೊಡುವುದು; ಸಂಶೋಧನ ಕ್ಷೇತ್ರದಲ್ಲಿ ಹೊಸ ಹೊಸ ಪ್ರಯೋಗಗಳು ಉದ್ಭವಿಸುವ ವಾತಾವರಣ ಕಲ್ಪಿಸುವುದು. ಆಗ ಸಂಶೋಧಕ ಬದುಕಿ, ಸಂಶೋಧನೆ ಬೆಳೆಯುತ್ತದೆ. ಪರಂಪರೆಯ ಪ್ರಜ್ಞೆ ಜನತೆಯಲ್ಲಿ ಜಾಗೃತವಾಗುತ್ತದೆ. ಒಟ್ಟಾರೆ ಸಂಶೋಧನೆಯೆನ್ನುವುದು ಒಂದು ಜನಾಂಗದ ಬದುಕಿನ ಗತಕಾಲದ ಗುಣದೋಷಗಳನ್ನು ಆ ಜನಾಂಗದ ಕಣ್ಮುಂದೆ ನಿಲ್ಲಿಸಿ, ಅವರ ಕಣ್ಣು ತೆರೆಯಿಸುವುದಾಗಿದೆ. ದೋಷಗಳು ಪುನರಾವರ್ತನೆ ಗೊಳ್ಳದಂತೆ ಮಾಡುವ, ಗುಣಗಳು ಮಾದರಿಯಾಗುವಂತೆ ಮಾಡುವ ಬಹಳ ದೊಡ್ಡ ಹೊಣೆ ಯಾವುದೇ ದೇಶದ ಸಂಶೋಧಕನ ಹೆಗಲ ಮೇಲಿರುತ್ತದೆ. ಈ ಅರ್ಥದಲ್ಲಿ ಗತಕಾಲದ ಶೋಧವೆನ್ನುವುದು ವರ್ತಮಾನವನ್ನು ತಿದ್ದುವ ಒಂದು ಪ್ರಯತ್ನವೆನಿಸಿದೆ. ಜನತೆಯಲ್ಲಿ ಪರಂಪರೆಯ ಜಾಗೃತಿ ಮೂಡಿಸುವುದಾಗಿದೆ. ಉತ್ಸಾಹ ತುಂಬುವುದಾಗಿದೆ. ಅದಕ್ಕಾಗಿಯೇ, "ಇತಿಹಾಸವನ್ನು ಮರೆತವರು ಇತಿಹಾಸವನ್ನು ಸೃಷ್ಟಿಸಲಾರರು" ಎಂದು ಡಾ॥ ಅಂಬೇಡ್ಕರರು ಹೇಳಿದುದು. ಇಂದು ಕನ್ನಡಿಗರು ಹೊಸ ಇತಿಹಾಸವನ್ನು ಸೃಷ್ಟಿಸಬೇಕಾದರೆ ಹಳೆಯ ಇತಿಹಾಸವನ್ನು ಅರ್ಥಮಾಡಿಕೊಳ್ಳುವುದು, ಸಂಶೋಧಕರಾದವರು ಅವರಿಗೆ ಅದನ್ನು ಅರ್ಥ ಮಾಡಿಕೊಡುವುದು ಅವಶ್ಯವಿದೆ. ಈ ಕೆಲಸ ನಮ್ಮಲ್ಲಿ ಒಂದು ನಿರಂತರ ಪ್ರಕ್ರಿಯೆಯಾಗಿ ನಡೆದು ಬರದ ಕಾರಣ ಕನ್ನಡಿಗರಲ್ಲಿ ಇತಿಹಾಸಪ್ರಜ್ಞೆ ಬತ್ತುತ್ತ ಬಂದಿತು. ಇದರಿಂದಾಗಿ ಸ್ವಾಭಿಮಾನವೂ ಸೊರಗುತ್ತ ಬಂದಿತು. ಇದರ ಫಲವೆಂಬಂತೆ ನಾವು ವಿಶಾಲವಾದ ನಮ್ಮ ಭೂಖಂಡವನ್ನು ಕಳೆದುಕೊಳ್ಳುತ್ತ ಬಂದೆವು. ಭಾಷೆಯನ್ನು ಬಡವಾಗಿಸಿಕೊಳ್ಳುತ್ತ ಬಂದೆವು. ಈ ಎಲ್ಲ ಹಾನಿಗಳನ್ನು ತಡೆಗಟ್ಟಬೇಕೆಂದರೆ ನಮ್ಮಲ್ಲಿ ಮೊದಲು ಇತಿಹಾಸಪ್ರಜ್ಞೆ ಸ್ಥಾಪನೆಗೊಳ್ಳಬೇಕು. ಆ ಪ್ರಜ್ಞೆಯನ್ನು ಪೂರೈಸುವ ಸಂಶೋಧನೆ ಹೆಚ್ಚು ವೇಗವಾಗಿ, ವ್ಯಾಪಕವಾಗಿ ನಡೆಯಬೇಕು.

ಡಾ॥ ಎಂ. ಎಂ. ಕಲಬುರ್ಗಿ




# ಆಕರ್ಷಕ ಮುಂಜಾವುಗಳು

ಗ್ರಹಗಳ ಓಟ ಬಿಂಬಿಸುವ ಈ ತಿಂಗಳ ಮುಂಜಾವುಗಳು ಬಹಳ ಆಕರ್ಷಕವಾಗಿವೆ. ಬೆಳಗಿನ ವಾಯುವಿಹಾರಕ್ಕೆ ಹೊರಡುವವರು ಸುಮಾರು ಐದೂವರೆ ಹೊತ್ತಿಗೆ ಪೂರ್ವ ದಿಕ್ಕನ್ನು ವೀಕ್ಷಿಸಿದರೆ ನಾಲ್ಕು ಗ್ರಹಗಳ ಆಟವನ್ನು ನೋಡಬಹುದು. ತಿಂಗಳ ಆರಂಭದಲ್ಲಿ ಶುಕ್ರ, ಗುರು ಮತ್ತು ಮಂಗಳ ಗ್ರಹಗಳು ಕಾಣುತ್ತವೆ. ಎರಡನೆಯ ವಾರಕ್ಕೆ ಬುಧಗ್ರಹವೂ ಸೇರುತ್ತದೆ. ಮಾರ್ಗದರ್ಶಿ ಚಂದ್ರ ೮ರಂದು ಶುಕ್ರಗ್ರಹದಿಂದ ಮೂರು ಡಿಗ್ರಿ ಅಂತರದಲ್ಲಿರುತ್ತದೆ. ೯ರಂದೂ ಸಹ ಈ ಅಂತರ ಎರಡು ಡಿಗ್ರಿಗಳಿರುತ್ತದೆ. ಆದರೆ ಶುಕ್ರದಿಂದ ಕೆಳಗಿರುತ್ತದೆ. ಕೆಳಗೆ ಅಂದರೆ ಪೂರ್ವಕ್ಕೆ ಎಂದರ್ಥ. ಚಂದ್ರ ದಿನದಿಂದ ದಿನಕ್ಕೆ ಪೂರ್ವಕ್ಕೆ ಸರಿಯುತ್ತದೆ ಎಂಬುದರ ಪ್ರಾತ್ಯಕ್ಷಿಕೆ ಇದು. ಹೀಗೆ ಸರಿಯುವಾಗ ಅದು ಶುಕ್ರವನ್ನು ಮುಚ್ಚಿ ಮರೆಮಾಡುತ್ತದೆ. ಈ ಆಚ್ಛಾದನೆ ನಮಗೆ (ಭಾರತಕ್ಕೆ) ಗೋಚರವಾಗುವುದಿಲ್ಲ. ನಮ್ಮ ಹಗಲಿನಲ್ಲಿ ನಡೆದುಹೋಗುತ್ತದೆ. ಶುಕ್ರದಿಂದ ದಿಗಂತದ ವರೆಗಿನ ಅಂತರದಲ್ಲಿ ಮಂಗಳ, ಗುರು ಈ ಗ್ರಹಗಳನ್ನು ಗುರುತಿಸಬಹುದು. ದಿಗಂತದ ಅಂಚಿನಲ್ಲಿ ಬುಧ ಗ್ರಹವೂ ಇರುತ್ತದೆ. ೧೧ರಂದು ಚಂದ್ರನ ಪಕ್ಕವೇ ಕಾಣುತ್ತದೆ. ದಿನೇ ದಿನೇ ಮೇಲೇರುವ ಅದು ೧೬ರಂದು ಗರಿಷ್ಠ ಎತ್ತರವನ್ನು ಮುಟ್ಟುವಾಗ ನಾಲ್ಕೂ ಗ್ರಹಗಳನ್ನು ಒಂದೇ ಹೊತ್ತಿಗೆ ನೋಡುವ ಅವಕಾಶವಿದೆ.

ಆ ಮುಂದಿನ ದಿನಗಳಲ್ಲಿ ಬುಧ ಕ್ರಮೇಣ ಕೆಳಗಿಳಿದು ಪುನಃ ಕಾಣದಾಗುತ್ತದೆ. ಉಳಿದ ಮೂರು ಗ್ರಹಗಳ ಜೂಟಾಟ ಮುಂದುವರೆಯುತ್ತದೆ. ೧೮ರಂದು ಗುರು ಮತ್ತು ಮಂಗಳಗಳ ನಡುವೆ ಅರ್ಧ ಡಿಗ್ರಿಗಿಂತ ಕಡಿಮೆ ಅಂತರ ಇರುತ್ತದೆ. ೨೬ರಂದು ಗುರು ಮತ್ತು ಶುಕ್ರಗಳ ನಡುವೆ ಒಂದು ಡಿಗ್ರಿಗಿಂತ ಕಡಿಮೆ ಅಂತರ ಇರುತ್ತದೆ. ಈ ಎರಡೂ ಸಂದರ್ಭಗಳು ಛಾಯಾಚಿತ್ರ ತೆಗೆಯಲು ಒಳ್ಳೆಯ ಅವಕಾಶ ಒದಗಿಸುತ್ತವೆ. ೨೬ರಂದು ಶುಕ್ರ ಗ್ರಹದ ಗರಿಷ್ಠ ಕೋನೋನ್ನತಿ – ಮುಂದೆ ಕೆಳಗಿಳಿಯ ತೊಡಗುವ ಅದು ನವೆಂಬರ್ ೩ರಂದು ಮಂಗಳ ಗ್ರಹವನ್ನು ಕೇವಲ ೧ ಡಿಗ್ರಿ ಅಂತರದಿಂದ ಹಾದುಹೋಗುವುದು.

೧೧ರಂದು ಮುಂಜಾವು ನಡೆಯುವ ಬುಧ ಗ್ರಹದ ಆಚ್ಛಾದನೆಯೂ ನಮಗೆ ಕಾಣುವುದಿಲ್ಲ. ೨ರ ಮುಂಜಾವಿನಲ್ಲಿ ಚಂದ್ರನ ಪಕ್ಕದಲ್ಲಿ ಕಾಣುವ ಕೆಂಪು ಚುಕ್ಕೆಯೇ ರೋಹಿಣಿ ನಕ್ಷತ್ರ. ವಾಸ್ತವದಲ್ಲಿ ಇದನ್ನು ಚಂದ್ರ ಮರೆಮಾಡುವ ಆಚ್ಛಾದನೆ ಆ ದಿನ ನಡೆದು ಹೋಗಿರುತ್ತದೆಯಾದರೂ ಅದನ್ನು ನೋಡುವ ಅವಕಾಶ ನಮಗೆ ಸಿಗುವುದಿಲ್ಲ. ೨೯ರಂದು ಪುನಃ ಚಂದ್ರ ರೋಹಿಣಿಯನ್ನು ಸಮೀಪಿಸಿದಾಗ ಅವೆರಡರ ಅಂತರ ಇನ್ನೂ ಕಡಿಮೆಯಾಗಿರುತ್ತದೆ. ಆದರೆ ಚಂದ್ರನ ಬೆಳಕಿನಲ್ಲಿ ರೋಹಿಣಿಯನ್ನು ಹುಡುಕುವುದೇ ಕಷ್ಟವಾಗಬಹುದು. ಚಂದ್ರನಿಗೆ ಅಂಟಿಕೊಂಡ ಹಾಗೇ ಕಾಣಬಹುದು. ಸಂಜೆಯ ಆಕಾಶದಲ್ಲಿರುವ ಗ್ರಹ ಒಂದೇ – ಶನಿ. ೧೬ರ ಸಂಜೆ ಚಂದ್ರ ಇದರಿಂದ ಸುಮಾರು ೨ ಡಿಗ್ರಿ ಅಂತರದಲ್ಲಿ ಕಾಣುತ್ತದೆ.

ಯುರೇನಸ್ ಗ್ರಹವನ್ನು ಹುಡುಕುವ ಅವಕಾಶವನ್ನು ಚಂದ್ರ ಈ ತಿಂಗಳಲ್ಲಿ ಒದಗಿಸಿದೆ. ೨೬ರ ಸಂಜೆ ಚಂದ್ರನ ಪಕ್ಕದಲ್ಲಿಯೇ ಕಾಣುವ ಈ ಚುಕ್ಕೆಯನ್ನು ಚಂದ್ರನ ಪ್ರಖರ ಬೆಳಕಿನಲ್ಲಿ ಹುಡುಕುವುದು ಕಷ್ಟವೇ ಆಗಬಹುದು.

ಈ ತಿಂಗಳಲ್ಲಿ ಎರಡು ಉಲ್ಕಾವೃಷ್ಟಿಗಳಿವೆ. ಹ್ಯಾಲೀ ಧೂಮಕೇತುವಿನ ತುಣುಕುಗಳು ಮಹಾವ್ಯಾಧ (ಒರೈಯನ್) ಪುಂಜದಿಂದ ಹೊರಟಂತೆ ಕಾಣುವ ಒರಿಯನಿಡ್ಸ್ ವೃಷ್ಟಿಯನ್ನು ಉಂಟುಮಾಡುತ್ತವೆ. ಎನ್ಕೆ ಎಂಬ ಧೂಮಕೇತುವಿನ ತುಣುಕುಗಳು ವೃಷಭ ರಾಶಿಯಿಂದ ಹೊರಟಂತೆ ಕಾಣುವ ಟಾರಿಡ್ಸ್ ವೃಷ್ಟಿಯನ್ನು ಉಂಟು ಮಾಡುತ್ತವೆ. ಇವು ಒರಿಯನಿಡ್ಸ್ ವೃಷ್ಟಿಯ ಉಲ್ಕೆಗಳಿಗಿಂತ ನಿಧಾನವಾಗಿ ಚಲಿಸುತ್ತವೆ. ಕೆಲವೊಮ್ಮೆ ದೊಡ್ಡ ದೊಡ್ಡ ಗಾತ್ರದವೂ ಕಾಣಬಹುದು. ಇವುಗಳಿಗೆ ಫ್ಲೈರ್ ಬಾಲ್ ಎನ್ನುತ್ತಾರೆ.




ಹುಣ್ಣಿಮೆಯ ಹಿಂದಿನ ದಿನ ಚಂದ್ರ ಪುರಭೂ ಬಿಂದುವಿನಲ್ಲಿ ಇರುತ್ತದೆ. ಆದ್ದರಿಂದ ಚಂದ್ರನ ಗಾತ್ರ ಸಾಮಾನ್ಯಕ್ಕಿಂತ ದೊಡ್ಡದಾಗಿರುತ್ತದೆ. ಅದರ ಪಕ್ಕದಲ್ಲಿ ಕಾಣುವ ಮೂರು ಕ್ಷೀಣ ನಕ್ಷತ್ರಗಳ ಗುಂಪಿಗೇ ಅಶ್ವಿನಿ ಎನ್ನುವರು. ಈ ಕಾರಣದಿಂದ ಈ ತಿಂಗಳ ಹೆಸರು ಆಶ್ವಯುಜ.


ಶುಕ್ರ, ಮಂಗಳ, ಗುರು
೨೪ರಂದು
ಪೂರ್ವ ದಿಗಂತದಲ್ಲಿ

### ಖಗೋಳ ದಿನಚರಿ

ಅಕ್ಟೋಬರ್ ೨ ಮುಂಜಾವು ಚಂದ್ರ – ರೋಹಿಣಿ ಜೋಡಿ*
೪ ಚಾಂದ್ರಮಾಸದ ಕೊನೆಯ ಪಾದ
೯ ಮುಂಜಾವು ಚಂದ್ರ – ಶುಕ್ರ ನಡುವೆ ಕನಿಷ್ಠ ಅಂತರ*
ಚಂದ್ರ – ಗುರು – ಮಂಗಳ – ಶುಕ್ರ ಪುಟ್ಟ ಗುಂಪು
೧೧ ಮುಂಜಾವು ಚಂದ್ರ – ಬುಧ – ಗುರು – ಮಂಗಳ – ಶುಕ್ರ ಪುಟ್ಟ ಗುಂಪು*
ಚಂದ್ರ – ಭೂಮಿ ನಡುವೆ ಗರಿಷ್ಠ ಅಂತರ
೧೩ ಅಮಾವಾಸ್ಯೆ ೦೫:೩೬ಕ್ಕೆ
೧೬ ಮುಂಜಾವು ಬುಧ ಗ್ರಹದ ಗರಿಷ್ಠ ಕೋನೋನ್ನತಿ*
ಸಂಜೆ ಚಂದ್ರ – ಶನಿ ನಡುವೆ ಕನಿಷ್ಠ ಕೋನ*
೧೮ ಮುಂಜಾವು ಮಂಗಳ – ಗುರು ನಡುವೆ ಅರ್ಧ ಡಿಗ್ರಿ ಅಂತರ*
೨೦ ಚಾಂದ್ರಮಾಸದ ಮೊದಲ ಪಾದ
೨೬ ಮುಂಜಾವು ಶುಕ್ರ ಗ್ರಹದ ಗರಿಷ್ಠ ಕೋನೋನ್ನತಿ*
ಶುಕ್ರ – ಗುರು ನಡುವೆ ೧ ಡಿಗ್ರಿ ಅಂತರ*
ಚಂದ್ರ – ಭೂಮಿ ನಡುವೆ ಕನಿಷ್ಠ ಅಂತರ
೨೭ ಹುಣ್ಣಿಮೆ ೧೭:೩೫ಕ್ಕೆ
೨೯ ಮುಂಜಾವು ಚಂದ್ರ – ರೋಹಿಣಿ ಜೋಡಿ*
ನವೆಂಬರ್ ೩ ಶುಕ್ರ – ಮಂಗಳ ನಡುವೆ ಕನಿಷ್ಠ ಅಂತರ*

(* ಛಾಯಾಗ್ರಹಣಕ್ಕೆ ಸದವಕಾಶ; ನಕ್ಷೆ ಸಂಜೆ ಏಳು ಗಂಟೆಗೆ ಅನ್ವಯಿಸುತ್ತದೆ.)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು

# ಕನ್ನಡದಲ್ಲಿ ಮಹಿಳಾ ಆತ್ಮಕಥನಗಳು

ಡಾ॥ ವಿನಯಾ ಒಕ್ಕುಂದ

**ಪರಂಪರೆಯ ಶೋಧದ ನೆಲೆ**

ಹೆಣ್ಣಿನ ಬದುಕಿನ ಚರಿತ್ರೆಯನ್ನು, ಅಭಿವ್ಯಕ್ತಿಯ ಪರಂಪರೆಯನ್ನು ಉದ್ದೇಶಪೂರ್ವಕವಾಗಿ, ಪ್ರಜ್ಞಾಪೂರ್ವಕವಾಗಿ ಆಯ್ದು ಕಟ್ಟಬೇಕಿದೆ. ಪಿತೃವ್ಯವಸ್ಥೆ ಹೆಣ್ಣಿನ ಬದುಕನ್ನು ಅಧೀನ, ಪೂರಕ, ಆನುಷಂಗಿಕವಾಗಿ ಪರಿವರ್ತಿಸಿಕೊಂಡಿದ್ದರಿಂದ ಅಭಿವ್ಯಕ್ತಿಯು ಸಹಜವಾಗಿರಲಿಲ್ಲ. ಅದು ಸ್ವನಿಯಂತ್ರಣ ಮತ್ತು ಭಯಗಳಿಂದ ಕೂಡಿತ್ತು. ಅಭಿವ್ಯಕ್ತಿಯು ಪ್ರಧಾನ ಧಾರೆಯೊಂದಿಗೆ ಬೇರೆಯದೆ ಅಂಚಿನಲ್ಲಿಯೇ ಉಳಿದು ಬಂತು. ಈ ಅಲಕ್ಷಿತ ಸಂವೇದನೆಯ ಚಹರೆಯನ್ನು ರೂಪುಗೊಳಿಸುವ ಮತ್ತು ಮಹಿಳಾ ಅಭಿವ್ಯಕ್ತಿಯ ಪರಂಪರೆಯನ್ನು ಕಟ್ಟುವ ಪ್ರಯತ್ನ ಸ್ತ್ರೀವಾದಿ ಚಿಂತನೆಯ ಪ್ರವೇಶದೊಂದಿಗೆ ಆರಂಭವಾಯಿತು. ಅದಕ್ಕೂ ಮುಂಚಿನ ಮಹಿಳಾ ಅಭಿವ್ಯಕ್ತಿಯ ದಾಖಲೆಯ ಪ್ರಯತ್ನಗಳು ಪಿತೃವ್ಯವಸ್ಥೆಯ ತಾಬೆಯಲ್ಲಿದ್ದ ಆಯ್ಕೆಯ ಅಧಿಕಾರಗಳಾಗಿದ್ದವು.

ಆತ್ಮಕಥನಗಳ ಬರವಣಿಗೆ ಸೃಜನೇತರ ಸ್ಥೈರ್ಯವನ್ನೂ ಎದುರಿಸಬೇಕಾದ ಅಗ್ನಿದಿವ್ಯ. ಹೆಣ್ಣು ಬರೆಯುವುದೇ ನಿಷೇಧಿತವಾದ ಸಂದರ್ಭದಲ್ಲಿ ಆತ್ಮಕಥನಗಳನ್ನು ಬರೆಯುವುದು ಕಷ್ಟ. ಬರೆಯುವ ಕಾರಣಕ್ಕಾಗಿಯೇ ಪತಿಯ ಆಕ್ರೋಶಕ್ಕೆ, ಮಾನಸಿಕ ದೂರಕ್ಕೆ ಒಳಗಾಗಬೇಕಾದ ಬೆಳಗೆರೆ ಜಾನಕಮ್ಮನಂಥವರ ಬದುಕಿನ ದಾಖಲೆಗಳಿವೆ. ಹೆಣ್ಣಿಗೆ ಮಾತು ನಿಷೇಧವಾದ ವ್ಯವಸ್ಥೆಯಲ್ಲಿ ಹೆಣ್ಣಿನ ಮಾತನ್ನು 'ಹಾಳು ಹರಟೆ' ಎಂದು ಕುಚೋದ್ಯಿಸಲಾಗಿತ್ತು. ಅವಳು ಪರಸ್ಪರ ಕಷ್ಟ–ಸುಖಗಳನ್ನು ಹಂಚಿಕೊಳ್ಳಬಹುದಾದ ಅವಕಾಶವನ್ನು ಸಂಕುಚಿತಗೊಳಿಸಲಾಗಿತ್ತು. 'ಸಂಸಾರ ಗುಟ್ಟು ವ್ಯಾಧಿ ರಟ್ಟು' ಎಂಬ ಭಯ ಹೇರಲಾಗಿತ್ತು. ಹೆಣ್ಣು ಹೇಳುವವಳಲ್ಲದೆ, ಕೇಳುವವಳೆಂಬ ಮೌಲ್ಯವ್ಯವಸ್ಥೆಯಲ್ಲಿ ಅವಳ ಮಾತುಗಳು ಅರ್ಥಹೀನ ಎನಿಸಿದ್ದವು.

ಸ್ವತಃ ಹೆಣ್ಣು ಈ ವ್ಯವಸ್ಥೆಯ ಸಿದ್ಧ ಚೌಕಟ್ಟಿನೊಳಗೆ ತನ್ನನ್ನು ಹುದುಗಿಸಿಕೊಂಡಿರಬೇಕಾದ್ದರಿಂದ ತನ್ನನ್ನು ತಾನು ವಿಶ್ಲೇಷಿಸಿಕೊಳ್ಳುವ ಸೃಷ್ಟಿಶೀಲತೆಯೂ ಸುಲಭವಾಗಿರಲಿಲ್ಲ. ಸಾಧಕರು ಮತ್ತು ಸಾಮಾನ್ಯರು ಎಂದು ಸಮುದಾಯವನ್ನು ವರ್ಗೀಕರಿಸಿಟ್ಟ ಬದುಕಿನಲ್ಲಿ ಆತ್ಮಚರಿತ್ರೆಯು ಸಾಧಕರ ಕಥನ ಎಂದೇ ಬಿಂಬಿತವಾಗಿತ್ತು. ಕನ್ನಡದಲ್ಲಿ ನವೋದಯದ ಮುಖ್ಯ ಲೇಖಕರ ಆತ್ಮಕಥೆಗಳನ್ನು ಗಮನಿಸಬಹುದು. ಆತ್ಮಕಥನ ಪ್ರಕಾರಕ್ಕಿದ್ದ ಈ ವಿಶೇಷಣ ಕೂಡ ಮಹಿಳೆಯ ಸಂವೇದನೆಯ ಈ ಪ್ರಕಾರದಲ್ಲಿ ತೊಡಗಿಕೊಳ್ಳುವಲ್ಲಿ ಅಡಚಣೆಯಾದಂತಿದೆ. ಪ್ರಧಾನ ಸಾಹಿತ್ಯ ಪರಂಪರೆಯೊಂದಿಗೆ ಒಂದು ದೂರವನ್ನು ಇಟ್ಟುಕೊಂಡೇ ಬಂದ ಕನ್ನಡ ಮಹಿಳಾ ಸಾಹಿತ್ಯ ಆರಂಭದಲ್ಲಿ ಆತ್ಮಕಥನಗಳ ಬರವಣಿಗೆಗೆ ತನ್ನನ್ನು ತೊಡಗಿಸಿಕೊಳ್ಳಲಿಲ್ಲ.

ಅನ್ಯ ಭಾಷೆಗಳ, ಅದರಲ್ಲೂ ಒಡನಾಡಿ ಭಾಷೆಗಳಲ್ಲಿಯ ಮಹಿಳಾ ಆತ್ಮಕಥನಗಳ ಅನುವಾದಗಳು ಈ ಧೋರಣೆಯಿಂದ ಬಿಡುಗಡೆ ಮತ್ತು ಹೊಸ ಪ್ರೇರಣೆಯನ್ನೊದಗಿಸಿದವು. ಲೇಖಕಿಯರ ಸಂಘದವರು ಏರ್ಪಡಿಸಿದ್ದ ಮುಖಾಮುಖಿಯ ಕಾರ್ಯಕ್ರಮಗಳು ಲೇಖಕಿಯರು ತಮ್ಮ ಬದುಕನ್ನು ಮರುಪ್ರವೇಶಿಸುವ, ದಾಖಲಿಸುವ ಅವಕಾಶವನ್ನು ನೀಡಿದ್ದವು. ಆದರೆ ಅದೊಂದು ಮುಕ್ತ ನಿವೇದನೆಯಾಗದೆ, ಸ್ವಸೆನ್ಸಾರ್‌ನ ಕಷ್ಟವನ್ನು ಉಳಿಸಿಕೊಂಡಿದ್ದೂ ಇತ್ತು. ಎಷ್ಟೋ ಮುಖ್ಯ ಲೇಖಕಿಯರು ಹೀಗೆ ಖಾಸಗಿ ಬದುಕಿನ ಅನಾವರಣದ ರಾಜಕಾರಣವನ್ನೇ ಪ್ರಶ್ನಿಸಿದ್ದರು. ಆದರೆ ವೈಯಕ್ತಿಕವಾದದ್ದೂ ರಾಜಕೀಯವೇ ಎಂಬ ಸ್ತ್ರೀವಾದಿ ಚಿಂತನೆಯ

**ಕನ್ನಡ ಮಹಿಳಾ ಆತ್ಮಕಥನಗಳ ಅಧ್ಯಯನವೆಂದರೆ ಸಾಮಾಜಿಕವಾಗಿ ಮಹಿಳೆಯರು ಎದುರಿಸಿದ ಬದುಕಿನ ಕಥನವಾಗಿದೆ. ಜೀವನವನ್ನು ಎದುರಾಗಿಸಿಕೊಂಡ ಶೋಧಕ ತತ್ವವಾಗಿದೆ. ಸಾಮಾಜಿಕ ಚರಿತ್ರೆಯನ್ನು ವಿಭಿನ್ನ ಶೇಡ್ಸ್‌ಗಳಲ್ಲಿ ದಾಖಲಿಸುವ ಪ್ರವೃತ್ತಿಯಾಗಿದೆ. ಹೆಣ್ಣಿನ ಕುರಿತು ಕಟ್ಟಲ್ಪಟ್ಟ ಅಪಕಲ್ಪಿತಗಳನ್ನು ನಿವಾರಿಸುವ ಪ್ರಯತ್ನವಾಗಿದೆ. ಹೆಣ್ಣು ಬದುಕಿನ ಒಳಾಂಗಣವನ್ನು ಆಪ್ತವಾಗಿ ಹಾದು ಬರುತ್ತ , ಆ ಎದೆಗಾವು ನಮ್ಮ ಪ್ರಜ್ಞೆಯನ್ನು ಮಿದುಗೊಳಿಸುವ ಅನುಭೂತಿಗೆ ಒಳಗಾಗುವುದಾಗಿದೆ.**

ಗಟ್ಟಿತನ ಬೇರೂರತೊಡಗಿದಂತೆ ಸ್ವಕಥನದ ಸೃಜನಶೀಲ ವಿಸ್ತರಣೆಯ ಕಡೆ ಚಲನೆ ಆರಂಭವಾಯಿತು. ಕನ್ನಡದ ಮಹಿಳಾ ಆತ್ಮಕಥನಗಳ ಗುರುತುಗಲ್ಲಾದ ಅನುಪಮಾ ನಿರಂಜನರ ನೆನಪು ಸಿಹಿಕಹಿ ಮತ್ತು ಬರಹಗಾರ್ತಿಯ ಬದುಕು ಇವು ಎಂಭತ್ತರ ದಶಕದಲ್ಲಿ ಬರುವುದಕ್ಕೂ ಅದೇ ದಶಕ ಕನ್ನಡದಲ್ಲಿ ಸ್ತ್ರೀವಾದಿ ಚಿಂತನೆ ಕುಡಿಯೊಡೆದ ಕಾಲವಾಗಿರುವುದಕ್ಕೂ ಇರುವ ಅಂತರ್ ಸಂಬಂಧವನ್ನು ಅಲಕ್ಷಿಸ ಲಾಗುವುದಿಲ್ಲ. ದಕ್ಷಿಣ ಭಾರತದ ಮೊದಲ ಮತ್ತು ಮಹತ್ವದ ಆತ್ಮಕಥೆ ಮರಾಠಿಯ ಲಕ್ಷ್ಮೀಬಾಯಿ ತಿಲಕ್ ಅವರ ಸ್ಮೃತಿಚಿತ್ರೆ ಪ್ರಕಟವಾದದ್ದು ೧೮೬೩ರಲ್ಲಿ. ಅಲ್ಲಿಂದ ೧೯೮೦ರವರೆಗೂ ಕನ್ನಡ ಮಹಿಳಾ ಸಂವೇದನೆ ತನ್ನ ಜೀವನಾನುಭವಗಳ ದಾಖಲಿಕೆಯ ಮೂಲಕ ಆತ್ಮಕಥನ ಎಂಬ ಪ್ರಕಾರಕ್ಕೆ ತನ್ನನ್ನು ಸಿದ್ಧಗೊಳಿಸಿ ಕೊಳ್ಳುತ್ತಿತ್ತು. ಸಾಂಪ್ರದಾಯಿಕ ಸೂತಕವನ್ನು ಮೀರುತ್ತಿತ್ತು. ವಾಸಂತಿಬಾಯಿ ಪಡುಕೋಣೆಯವರ 'ನನ್ನ ಮಗ ಗುರುದತ್ತ'ದಂತಹ ಕೃತಿ ಈ ಸಂಕ್ರಮಣ ಕಾಲದ್ದು.

**ಅಡಗುದಾಣಗಳಲ್ಲಿ ಆತ್ಮಕಥನಗಳು**

ಮಹಿಳಾ ಬರವಣಿಗೆ ಕಾವ್ಯ, ಕಥೆ, ಕಾದಂಬರಿ, ಲೇಖನ ಮುಂತಾದ ಪ್ರಕಾರಗಳಲ್ಲಿ ತನ್ನ ಸ್ವಕಥನವನ್ನು ರೂಪಾಂತರಗೊಳಿಸಿ ಇಡುತ್ತ ಬಂದಿದೆ. ಕೆಲವು ನಿದರ್ಶನಗಳನ್ನು ಗಮನಿಸಿಕೊಳ್ಳಬಹುದು. ತಿರುಮಲಾಂಬಾ ಎಂಬ ಲೇಖಕಿ ತನಗೆ ಸಂಬಂಧದ ನಾತೆಯಲ್ಲಿ ಮಗಳಾಗಬೇಕಾದ ಶೆಲ್ಲುಕುಟ್ಟಿಗೆ ಬರೆದ ಪತ್ರದಲ್ಲಿ, ಗಂಡಸರು ಹೆಂಗಸರನ್ನು ಗಾಣದೆತ್ತಿನಂತೆ ದುಡಿಸಿಕೊಳ್ಳುವರೆಂಬ ಆಕ್ಷೇಪಕ್ಕೆ ಉತ್ತರಿಸುತ್ತ, "ಓದು ಬರಹದಿಂದ ಉತ್ತಮ ಸ್ಥಿತಿ ಬರುವುದಿಲ್ಲ. ಹೆಂಗಸರಿಗೆ ಇದಿಷ್ಟೇ ಸಾಕಾಗುವುದಿಲ್ಲ. ಚಿತ್ತಶುದ್ಧಿ ಪವಿತ್ರಾಚರಣೆಗಳು ಮುಖ್ಯ" ಎಂದು ಪತ್ರ ಬರೆಯುತ್ತಾರೆ. ಅವರ ಕಾದಂಬರಿಯ ಒಂದು ಪಾತ್ರ ನಂದಿನಿ, "ನಾನು ಸಮಯ ಸಿಕ್ಕಿದಾಗಲೆಲ್ಲ ಸ್ತ್ರೀ ಸಮಾಜವನ್ನು ಸುತ್ತಿ ಕಾಡುತ್ತಿರುವ ಅವಿಚಾರಗಳನ್ನು ಹೇಳದೇ ಬಿಡುವುದಿಲ್ಲ" ಎನ್ನುತ್ತಾಳೆ. ಈ ಎರಡೂ ಉಲ್ಲೇಖಗಳಿಗಿರುವ ಒಳಬಾಂಧವ್ಯವನ್ನು ಗಮನಿಸಬೇಕು. ನವೋದಯ ಕಾಲದಲ್ಲಿ ಮಹಿಳಾ ಸಂವೇದನೆಯ ಎದುರು ತೆರೆದುಕೊಂಡ ಆಧುನಿಕತೆಯೂ ಪೇಟ್ರಿಯಾರ್ಕಿಯ ಹಿತೋಪದೇಶದಿಂದ ಕೂಡಿತ್ತು. ಅದನ್ನು ಮಹಿಳಾ ಪ್ರಜ್ಞೆ ಪರಿಷ್ಕರಿಸಿ ಸ್ವೀಕರಿಸುವ ಸ್ವಹಾದಿಯನ್ನು ಹುಡುಕಿಕೊಳ್ಳುವ ಅಗತ್ಯವಿದೆ ಎನ್ನುವುದನ್ನು ತಿರುಮಲಾಂಬಾ ತಮ್ಮ ಖಾಸಗಿ ಪತ್ರ ವ್ಯವಹಾರ ಗಳಲ್ಲೂ, ತಮ್ಮ ಪಾತ್ರಗಳಲ್ಲೂ ಒಟ್ಟಾಗಿಯೇ ಹೇಳುವ ಪ್ರಯತ್ನ ಮಾಡಿದ್ದಾರೆ.

ಶ್ಯಾಮಲಾದೇವಿ ಬೆಳಗಾಂವಕರರು, "ನಾನು ಕಥೆಯ ತಂತ್ರ ಅರಿತುಕೊಂಡು ಬರೆಯಲು ಯತ್ನಿಸಿದವಳಲ್ಲ. ನನ್ನ ಸುತ್ತಮುತ್ತ ನಡೆಯುತ್ತಿರುವ ವರ್ತಮಾನಗಳ ಹಿನ್ನೆಲೆಯಲ್ಲಿ ಬರೆಯಲು ಯತ್ನಿಸಿದೆ..." ಎನ್ನುತ್ತ ತಮ್ಮ ಕೆಲ ಕಥೆಗಳ ಪಾತ್ರಗಳನ್ನು ಉಲ್ಲೇಖಿಸಿ ಅವು ತಮ್ಮ ವೈಯಕ್ತಿಕ ಬದುಕಿನೊಂದಿಗಿನ ಸಂಬಂಧದ ಸ್ವರೂಪ ಎಂದು ದಾಖಲಿಸಿದ್ದಾರೆ.

ಸಾಮಾಜಿಕ ಸ್ಥಿತಿ ಆಕ್ರಮಣಕಾರಿ ಸ್ವರೂಪದ್ದಾಗಿದ್ದರಿಂದ ಕಾವ್ಯ ಕಥೆಗಳೆಂಬ ಜೀವರಕ್ಷಕ ಅಡಗುದಾಣಗಳಲ್ಲಿ ಕುಳಿತ ಗೆರಿಲ್ಲಾ ಮಾದರಿಯ ಯುದ್ಧದಂತೆ ಈ ಕುರುಹುಗಳಿವೆ. ಈ ಕ್ರಮ 'ಕಾವ್ಯವೆಂದರೆ ನನಗೆ ಇಂದೂ ಕೂಡ ಸೋಜಿಗದ ಲೋಕ. ನಿಜಜೀವನದಲ್ಲಿ ಹೇಳಲಾರದ್ದನ್ನು ಇಲ್ಲಿ ತೀರ ಸಹಜವಾದದ್ದು ಎನ್ನುವಂತೆ ಹೇಳಬಹುದು' ಎನ್ನುತ್ತಾರೆ. ಶಶಿಕಲಾ ವೀರಯ್ಯಸ್ವಾಮಿ ಯವರು ದಾಖಲಿಸಿದ ಬದುಕು ಮತ್ತು ಅವರ 'ಕಾವ್ಯ ಗಳಲ್ಲಿ ಬಿಂಬ ಪ್ರತಿಬಿಂಬ' ಪ್ರತಿಫಲಿಸುತ್ತದೆ. ಮಹಿಳಾ ಸೃಜನಶೀಲತೆಗೆ ಸಾಮುದಾಯಿಕ ಚಹರೆಯಿರುವ ಕಾರಣಕ್ಕೇನೋ ಲೇಖಕಿಯರು ತಮ್ಮೊಳಗಿನ ತುಮುಲ ಗಳನ್ನು ನಿರುದ್ವಿಗ್ನವಾಗಿ ವ್ಯಕ್ತಿಸುತ್ತಾರೆ.

*ಹಾದೀಲಿ ಹೋಗೋರೆ ಹಾಡೆಂದು ಕೇಳ್ಬೇಡಿ*

*ಹಾಡಲ್ಲ ಇದು ನನ್ನ ಎದೆಯುರಿ । ದ್ಯಾವರೆ*

*ಬೆವರೆಲ್ಲ ನನ್ನ ಕಣ್ಣೀರು* – ಎಂಬ ಗರತಿಯ ಹಾಡು ಇದರ ರೂಪಕದಂತಿದೆ.

*'ಆಪತ್ತಿಗೆ ಗೆಳತಿಯರಾರೊಬ್ಬರನೂ ಕಾಣೆ'*

– ಎಂದ ಅಕ್ಕ ಇದರ ಸಶಕ್ತ ಮುಂದುವರಿಕೆಯಾಗಿದ್ದಾಳೆ.




ಆರ್. ನಿರ್ಮಲಾ ಅವರು ಉರಿವ ಒಲೆಗಳ ಮುಂದೆ ಸಂಕಲನದಲ್ಲಿ,

*ಜೀವದುಸಿರು ಕೊಟ್ಟಿದ್ದೀರಿ ನಲ್ಲ*

*ಕೊನೆಯವರೆಗೂ ಹಾಯಾಗಿ ಇದ್ದುಬಿಡೋಣ*

*ಆದರ್ಶಗಳ ಕರ್ಕಶತೆಯ ಬೆನ್ನುಹತ್ತಿ*

*ಸುಮ್ಮನೆ ಸೀತೆಯನು ಕೊಂದ*

*ರಾಮನಾಗಲಿಲ್ಲ*

*ಆದರೂ ನಿಮ್ಮೊಡನೆ ನಿತ್ಯ ಉಸಿರಾಡುವಾಗ*

*ಕಸ್ತೂರ ಬಾ ನೆನಪಾಗುತ್ತಾರೆ*

– ಎಂಬ ಕವಿತೆಯಿದೆ. ಆತ್ಮಕಥನಗಳ ರಕ್ತಮಾಂಸವನ್ನು ಕಾವ್ಯದ ಬೀಜವಾಗಿಸಿದ ಅಗಣಿತ ಚಹರೆಗಳು ಕಾಣಿಸುತ್ತವೆ.

ಅನುಪಮಾ ನಿರಂಜನ ಅವರಿಂದ ರಜನಿ ನರಹಳ್ಳಿಯವರವರೆಗಿನ ಮಹಿಳಾ ಆತ್ಮಕಥೆಗಳ ಓದಿನ ಮೂಲಕ ಈ ಪರಂಪರೆಯ ವಿಶಿಷ್ಟತೆಯನ್ನು ನಾಲ್ಕು ಪ್ರಮೇಯಗಳಲ್ಲಿ ಮಂಡಿಸಬಹುದು.

**೧. ಪುರುಷ ಕೇಂದ್ರಿತ ನೆಲೆ**

ಮಹಿಳೆಯ ಬದುಕಿನ ರಿಂಗಣ ಪುರುಷ ಕೇಂದ್ರದಾಚೆ ಸರಿಯಲೇ ಇಲ್ಲ. ಅವನು ತಂದೆ, ಪತಿ, ಗೆಳೆಯ, ಮಗ, ಅಣ್ಣ, ತಮ್ಮ, ಅಪರಿಚಿತ, ದ್ರೋಹಿ ಹೀಗೆ ಬಹುರೂಪಿಯಾದವ. ತಂದೆ, ಪತಿ, ಮಗ ಈ ಮೂರು ಮುಖ್ಯ ಧ್ರುವಗಳ ಸುತ್ತ ತಮ್ಮ ಅನುಭೂತಿಯನ್ನು ವ್ಯಕ್ತಪಡಿಸುವ ಬರಹಗಳು ಈ ಹಂತದಲ್ಲಿ ಮುಖ್ಯ ವಾಗುತ್ತವೆ. ಸಾಮಾನ್ಯವಾಗಿ ತೀರ ಹತ್ತಿರದ ಪುರುಷ ಸಂಬಂಧಿಯ, ಅದರಲ್ಲೂ ಪತಿಯ ಮರಣಾನಂತರ ಉಂಟಾದ ಒಂಟಿತನ ಬದುಕಿನ ಮರುಕಳಿಕೆಗೆ ಆಸ್ಪದ ಒದಗಿಸಿದಂತಿದೆ. ಅಗಾಧ ಪ್ರೀತಿ, ಗಾಢ ವಿಷಾದ ಇಂಥ ಕೃತಿಗಳ ಮುಖ್ಯ ಲಕ್ಷಣ ವಾಗಿದೆ. ಮಹಿಳಾ ಬರವಣಿಗೆ ಕುಟುಂಬ ಕೇಂದ್ರದ ಆಚೆ ಚಲಿಸಿದಾಗಲೂ ಅದು ಆ ಕೇಂದ್ರದೊಂದಿಗಿನ ಅನುಸಂಧಾನದಲ್ಲಿ ಪಡೆದುಕೊಳ್ಳುವ ವಿಸ್ತರಣೆಯಾಗಿರುತ್ತದೆ. ಹೆಣ್ಣಿಗೆ ವ್ಯವಸ್ಥೆ ಕೊಡಮಾಡಿದ ಮಾತೃತ್ವದ ಅಧಿಕಾರಹೀನ ಪೊಳ್ಳುತನವನ್ನು 'ನನ್ನ ಮಗ ಗುರುದತ್ತ' ಕೃತಿ ಹೇಳಿದರೆ ವ್ಯವಸ್ಥೆಯ ಚೌಕಟ್ಟಿನಲ್ಲೇ ಹೆಜ್ಜೆ ಹಾಕಿ ಆಟ ಗೆದ್ದ ಗೆಲುವನ್ನು 'ಬಹುಧಾನದಿಂದ ಬಹುಧಾನಕ್ಕೆ ಕೃತಿ' ಹೇಳುತ್ತದೆ.

ರಾಜೇಶ್ವರಿ ತೇಜಸ್ವಿಯವರ 'ನನ್ನ ತೇಜಸ್ವಿ', ಇಂದಿರಾ ಲಂಕೇಶರ 'ನನ್ನ ಹುಳಿಮಾವು' ಕುಟುಂಬ ಕೇಂದ್ರವನ್ನು ಆತ್ಯಂತಿಕವಾಗಿ ಚರ್ಚೆಗೆ ಎತ್ತಿಕೊಳ್ಳುವ ಕೃತಿಗಳು. ಇವು ಗೃಹವಾದಿನಿಯ ಎರಡು ಮಾದರಿಗಳು. ತೇಜಸ್ವಿ ಎಂಬ ವಿಸ್ಮಯದ ವ್ಯಕ್ತಿತ್ವ ರೂಪುಗೊಳ್ಳುತ್ತ ಬಂದ ವಿಧಾನಕ್ಕೆ ಸಾಕ್ಷಿಪ್ರಜ್ಞೆಯಾಗಿ ಬದುಕಿದ ರಾಜೇಶ್ವರಿ ಆ ವ್ಯಕ್ತಿಯನ್ನೂ ವ್ಯಕ್ತಿತ್ವವನ್ನೂ ಅಪಾರ ಒಲುಮೆಯಿಂದ ನಿಷ್ಠೆಯಿಂದ ನಿರೂಪಿಸುತ್ತಾರೆ. ಇದು ತೇಜಸ್ವಿ ವ್ಯಕ್ತಿತ್ವವನ್ನು ಬರೆಯುವ, ಬರೆಯುತ್ತ ನಿಜಬದುಕಿನ ಶೂನ್ಯವನ್ನು ತುಂಬಿಕೊಳ್ಳುವ ಪ್ರಯತ್ನದ್ದಾಗಿದೆ. ಕಾಡು ಹೊಕ್ಕವನು ಕಳೆದುಹೋಗುವ ಹಾಗೆ ಸುರಕ್ಷಿತ ಸುಖೀ ವ್ಯವಸ್ಥೆ ಹೆಣ್ಣಿನ ಸತ್ವವನ್ನು ಮರೆಮಾಚಿಸಿಬಿಡುವ ಅಪಾಯವನ್ನು ಹೇಳದೆಯೂ ಹೇಳುವುದು, ಕಾಣಿಸದೆಯೂ ಕಾಣುವಂತೆ ಮಾಡುವುದು ಈ ಕೃತಿಯ ಆರ್ದ್ರತೆ. ವಿವಾಹಪೂರ್ವದ ದಿನಗಳಲ್ಲಿ ಸಾಕಷ್ಟು ಜಾಣ್ಮೆಯ ಬೋಲ್ಡ್ ಗುಣದ ಹುಡುಗಿ ತೇಜಸ್ವಿ ಎಂಬ ಅಗಾಧ ವ್ಯಕ್ತಿತ್ವದ ಸಾಹಚರ್ಯದೊಂದಿಗೆ ಕರಗುತ್ತ ಕರಗುತ್ತ ಇಲ್ಲವೇ ಆಗಿಬಿಡುವ ಇಂದ್ರಜಾಲವೊಂದು ಇಲ್ಲಿ ಸಂಭವಿಸುತ್ತದೆ. ಕುಟುಂಬ ಸಂಗೋಪನೆಯ ಪೂರಕ ಮತ್ತು ಘನತರ ಜವಾಬ್ದಾರಿಯ ನಿರ್ವಹಣೆ ಕಡೆಗೂ ಎಲ್ಲೂ ದಾಖಲಾಗುವುದಿಲ್ಲ. ವ್ಯಕ್ತಿತ್ವದ ಕಾಣೆಯಾಗುವಿಕೆ ಸುಖದಿಂದ ಸಂಭ್ರಮದಿಂದ ನಡೆಯುತ್ತದೆ. ಮಾಸ್ತಿ ವೆಂಕಟೇಶ ಅಯ್ಯಂಗಾರರ ಪತ್ನಿ ಪಂಕಜಾ ಮಾಸ್ತಿ ತಮ್ಮ ಮದುವೆಗಿಂತ ಮೊದಲು ಎರಡು ಸಣ್ಣಕಥೆಗಳನ್ನು ಬರೆದಿದ್ದು, ಅವು ಮೈಸೂರು ಆಕಾಶವಾಣಿಯಿಂದ ಪ್ರಸಾರವೂ ಆಗಿದ್ದುವು. ಮದುವೆಯ ನಂತರ ಪಂಕಜಾ ಅವರು ಏನನ್ನೂ ಬರೆಯಲಿಲ್ಲ. ಅವರು ನಿಷ್ಠೆಯಿಂದ ಪತಿಯ ಬರವಣಿಗೆಯನ್ನು ಕಾಪಿ ಮಾಡಿಕೊಡುವುದನ್ನು ತನ್ನ ಜವಾಬ್ದಾರಿಗಳಲ್ಲಿ ಒಂದಾಗಿ

ನಿರ್ವಹಿಸಿದ್ದರು ಎನ್ನುವುದನ್ನು ಡಾ॥ ಕಮಲಾ ಹಂಪನಾ ಅವರು ನಡೆಸಿದ ಸಂದರ್ಶನವು ಸಾಕ್ಷೀಕರಿಸುತ್ತದೆ. ಮಹಿಳೆಯ ಬದುಕು ಚರಿತ್ರೆಯಿಂದ ಕಾಣೆಯಾಗುವ ಮಾಯಾಸ್ಲೇಟಿನಂತೆ. ಮದುವೆ ಎಂಬ ವ್ಯವಸ್ಥೆಯ ಕುರುಹೇ ಬಹುತೇಕ ಹೀಗಾಗಿತ್ತು. ಆದರೆ ಹೆಣ್ಣಿನ ಬದುಕಿನ ತ್ರಾಣ, ಸಾಧನೆಗಳನ್ನು ಪುರುಷ ಸಾಧನೆಯ ಅಳತೆಗೋಲು ಹಚ್ಚಿ ನೋಡುವುದೂ ಪೂರ್ವಗ್ರಹೀತವೇ ಆಗಬಹುದೇ ? ಬದುಕಿನ ಒಟ್ಟೂ ಫಲಿತ ತೃಪ್ತಿಯೇ ಅಲ್ಲವೇ ? ಎಂಬ ಪ್ರಶ್ನೆಯನ್ನೂ 'ನನ್ನ ತೇಜಸ್ವಿ' ಕಥನ ಎತ್ತುತ್ತದೆ.

ಕುಟುಂಬ ವ್ಯವಸ್ಥೆಯಲ್ಲಿ ಸಂಭವಿಸುವ ಪ್ರತಿಯೊಂದು ಕಂಪನವೂ ಹೆಣ್ಣಿನ ವ್ಯಕ್ತಿತ್ವವನ್ನು ಮರುನಿರ್ವಚಿಸುವುದನ್ನು 'ನನ್ನ ಹುಳಿಮಾವು' ಕೃತಿ ಎದುರಿಡುತ್ತದೆ. ಹೆಣ್ಣಿನ ಬದುಕು ಬೇರುಗಳನ್ನು ತೋರಗೊಡದೆ ಗಿಡಕ್ಕೆ ಅಂಟಿಕೊಂಡೇ ಬೆಳೆವ ಕಾಂಡದಂತಹದು. ಒಮ್ಮೆ ಮುರಿದು ಊರಿದರೆ ಮತ್ತೊಂದೇತನವನ್ನು ತೋರಬಲ್ಲುದು. ಲಂಕೇಶ ಎಂಬ ವಿಶಿಷ್ಟ ವ್ಯಕ್ತಿತ್ವದೊಂದಿಗಿನ ಬದುಕು ಏಕರೂಪಿಯೇ ಆಗಿದ್ದರೆ ಇಂದಿರಾ ಎಂಬ ಮುಗ್ಧೆ ಉದ್ಯಮಶೀಲ ಮಹಿಳೆಯಾಗಿ ಬೆಳೆದು ನಿಲ್ಲುತ್ತಿರಲಿಲ್ಲ. ಬದುಕಿನಲ್ಲಿ ಸಂಭವಿಸುತ್ತ ಬಂದ ಆಕಸ್ಮಿಕಗಳನ್ನು ಘನತೆಯಿಂದ ಸ್ವೀಕರಿಸುವ ಇಂದಿರಾ, ಸ್ವಮರುಕ ಮತ್ತು ಪ್ರತಿಕ್ರಿಯಾತ್ಮಕ ವರ್ತನೆಗಳಿಗೆ ಹೋಗದೆ, ತನ್ನದು ತ್ಯಾಗವೆಂದಾಗಲಿ ಮಹಾನ್ ಸಾಧನೆಯೆಂದಾಗಲಿ ಉತ್ಪ್ರೇಕ್ಷಿಸಿಕೊಳ್ಳದೆ ತನ್ನ ಸಾಧ್ಯತೆಯನ್ನು ಹಿಗ್ಗಿಸಿಕೊಳ್ಳುವ ಮೂಲಕವೇ ಅಸ್ಥಿರತೆಯ ಭೀತಿಯನ್ನು ದಾಟುತ್ತಾರೆ. ಇದು ಮಹಿಳಾ ಸಂವೇದನೆ ಮತ್ತು ಬದುಕಿನ ಸಾಧ್ಯತೆಗಳ ಸಂಕಲನವಾಗುತ್ತದೆ.

**೨. ಸಮಾಜಕೇಂದ್ರಿತ ನೆಲೆ**

ಬದುಕನ್ನು ಕುಟುಂಬ, ಸಮಾಜ ಎಂಬ ದ್ವಿಮಾನ ರೀತಿಯಲ್ಲಿ ಪರಿಭಾವಿಸ ಲಾಗದು. ಇವು ಒಂದರೊಳಗೊಂದು ಹೊಕ್ಕು ಹಾಯುವ ಸಂಗತಿಗಳು. ಅನಾದಿಯಿಂದಲೂ ಇವು ಹೆಣ್ಣಿನ ಜೀವನವನ್ನು ಬೆಲೆಗಟ್ಟುವ ಎರಡು ಕೇಂದ್ರಗಳು. 'ಅತ್ತೆ ಮಾವರಿಗಂಜಿ ಸುತ್ತೇಳು ನೆರೆಗಂಜಿ' ಬದುಕು ಮಾಡಬೇಕಾದವಳಿಗೆ ಸಮಾಜದ ಮೌಲ್ಯಗಳು ಕುಟುಂಬದೊಳಗೂ ಕುಟುಂಬದ ತರತಮಗಳು ಸಮಾಜದೊಳಗೂ ಬಿಂಬ–ಪ್ರತಿಬಿಂಬದಂತಿರುತ್ತವೆ. 'ಹಾದಾಡುವ ಹೊಸ್ತಿಲಲ್ಲಿ ಹೊಯ್ದಾಡದ ದೀಪ' ದಂತಿರಬೇಕಾಗುತ್ತದೆ. ಆದರೆ ಅವರವರ ಬದುಕಿನ ಸಾಧ್ಯತೆಗಳಿಗನುಗುಣವಾಗಿ ಸಾಮಾಜಿಕ ಬದುಕಿನ ಕರ್ಷಣದಲ್ಲಿ ಸೆಣಸಾಡಿದ ಅನುಭವಗಳಿವೆ. ಧಾರ್ಮಿಕ ಮೂಲಭೂತವಾದಿಗಳಿಂದ ನೇರ ಹಲ್ಲೆ, ಅಪಮಾನ, ಬೆದರಿಕೆಗಳಿಗೆ ಒಳಗಾದ ಸಾರಾ ಅಬೂಬಕ್ಕರ್ ಅವರ ಅಪೂರ್ಣ ಬರಹಗಳಲ್ಲಿ ಸಮಕಾಲೀನತೆಯ ಕುರಿತ ನಿಲುವುಗಳು ಗಾಢವಾಗಿ ತುಂಬಿಕೊಂಡಿವೆ. ಬಾಲ್ಯಕಾಲದ ಕೂಡುಬದುಕು ಮತೀಯವಾದಿ ವಿತಂಡವಾದಕ್ಕೆ ಸಿಕ್ಕಿ ನಲುಗುತ್ತಿರುವ ಯಾತನೆಯಿದೆ. ಸಾಂಸ್ಕೃತಿಕ ಲೋಕ ಮುಗ್ಧತೆಯನ್ನು ವಹಿವಾಟು ಮಾಡಿಬಿಡುವ ಅನುಭವಗಳಿವೆ. ದು. ಸರಸ್ವತಿ ಅವರ 'ಈಗೇನ ಮಾಡೀರಿ ?' ಎಂಬ ಬರಹ ಉದ್ಯೋಗ ವಲಯದ ಹೊಸ ಬಿಕ್ಕಟ್ಟುಗಳು ಹೆಣ್ಣಿನ ಆತ್ಮಬಲವನ್ನು ಹೊಸಕಲು ನಡೆಸುವ ಸಂಘರ್ಷವಿದೆ. ಸಾಮಾಜಿಕ ಕ್ಷೇತ್ರ ಹೆಂಗಸಿಗೆ ಹೊಸದು. ಅಲ್ಲಿಯ ಸ್ವಾರ್ಥ, ಮೋಸಗಳೂ ಹೊಸದು. ಚೂರು ಯಾಮಾರಿದರೂ ಅದು ಅಸ್ತಿತ್ವವನ್ನೇ ನುಗ್ಗು ನೋಣೆಯುವ ಸ್ಥಿತಿಯಿದೆ. ಇದು ಸಾಮಾಜಿಕ ಹಿಂಸೆಯ, ಜೈಲುವಾಸದ ಅಪಮಾನಿತ ಚರಿತ್ರೆಯ ತಳಹದಿಯನ್ನು ತಲುಪಿ ಬಂದ ಕಥನ. ಸಾಮಾಜಿಕ ಬಿಕ್ಕಟ್ಟುಗಳು ಎದುರಾದಾಗ ಖಾಸಗಿ ಜಗತ್ತು ಲಿಟ್ಮಸ್ ಕಾಗದದಂತೆ ಬಣ್ಣ ಬದಲಿಸುವುದನ್ನು ಕಾಣಿಸುತ್ತಾರೆ.

'ಬೆಂಕಿ ಬೆಡಗು' ಆತ್ಮಕಥನದಲ್ಲಿ ಉಮಾಶ್ರೀ ಸಾಮಾಜಿಕವಾಗಿ ಯಶಸ್ವಿಯಾದ ಕಲಾವಿದೆಯ ಬದುಕಿನ ಅಂತರಂಗದ ಪುಟಗಳನ್ನು ತೆರೆಯುತ್ತಾರೆ. ಸೃಜನಶೀಲತೆಯು ಹೆಣ್ಣಿಗೆ ಆಯ್ಕೆಗಿಂತಲೂ ತುಡಿತಕ್ಕಿಂತಲೂ ಬದುಕಿನ ಅನಿವಾರ್ಯತೆಯಲ್ಲಿ ಅನ್ನ ಸಂಪಾದನೆಯ ತುರ್ತಿನಲ್ಲಿ ತೆರೆದುಕೊಳ್ಳುವ ಪರ್ಯಾಯ ಎಂಬ ವಿಡಂಬನಾ ಸ್ಥಿತಿಯಿದು. ಹಸಿವು ಮತ್ತು ಅಸ್ತಿತ್ವದ ಹುಡುಕಾಟಗಳು ಸೃಷ್ಟಿಸುವ ಒತ್ತಡದಲ್ಲಿ ಕಲೆ ಅರಳಬೇಕಿದೆ. ಕಮಲಾ ಸುರೈಯಾಳ ಒಂದೆಡೆ ಹೇಳುವಂತೆ, "ನಿನಗೊಂದು ಹೆಸರು ಪಾತ್ರ ಕೊಟ್ಟಾಗಿದೆಯಲ್ಲ, ಅದನ್ನೇ ಒಪ್ಪವಾಗಿಸಿಕೊಳ್ಳಲು ಕಲಿ" ಎಂದು ವ್ಯವಸ್ಥೆ ಒತ್ತಡ ಹೇರುತ್ತದೆ. ಈ ಒತ್ತಡದಿಂದ ಹೊರಹಣಿಕಿ ಜಗತ್ತಿನಲ್ಲಿ ತನ್ನ ನೆಲೆಯನ್ನು ಕಂಡುಕೊಳ್ಳುವುದು ಮಹಿಳೆ ಎದುರಿಸಿದ ಬಿಕ್ಕಟ್ಟು, ಪೇಟ್ರಿಯಾರ್ಕಿ ವ್ಯವಸ್ಥೆಯಲ್ಲಿ ಮಹಿಳೆ ಸಾಮಾಜಿಕ ಬದುಕಿನ ಅಗಣಿತ ಸವಾಲುಗಳಿಗೆ ತನ್ನನ್ನು ಎದುರಾಗಿಸಿಕೊಳ್ಳಬೇಕಾಗುತ್ತದೆ.

**೩. ತಾತ್ವಿಕ ಶೋಧದ ನೆಲೆಗಳು**

ಜಾಗತೀಕರಣದ ಮುಕ್ತ ಬಂಡವಾಳವಾದವು ಎಲ್ಲವನ್ನೂ ಹರಾಜು ಹಾಕುವ, ಕರೆನ್ಸಿಯಾಗಿ ಪರಿವರ್ತಿಸುವ, ಒತ್ತಡವನ್ನು ತಂದುಹಾಕಿದೆ. ಖಾಸಗಿ ಸುಖದುಃಖಗಳು ಮಾಧ್ಯಮಗಳ ಟಿ.ಆರ್.ಪಿ. ರೇಟನ್ನು ನಿರ್ಧರಿಸುತ್ತವೆ. ಇನ್ನೊಬ್ಬರ ಖಾಸಗಿ ಬದುಕನ್ನು ಕೆಟ್ಟ ಕುತೂಹಲಕ್ಕಾಗಿ ಗಮನಿಸುವ ಇರಾದೆ ಬೆಳೆಯುತ್ತಿದೆ. ಇಂತಹ ಕಾಲದಲ್ಲಿ ಇನ್ನಿತರ ಸಾಹಿತ್ಯ ಪ್ರಕಾರಗಳ ವಿಮರ್ಶೆಯ ಮಾನದಂಡದಿಂದ ಆಚೆ ನಿಲ್ಲುವ ಆತ್ಮಕಥನಗಳನ್ನು ಓದಬೇಕಿರುವುದು ಅವು ನಮ್ಮ ಮಧ್ಯೆ ತಂದು ನಿಲ್ಲಿಸುತ್ತಿರುವ ಜೀವನ ಮೌಲ್ಯಗಳ ಶೋಧಕ್ಕೆ. ಮಹಿಳಾ ಆತ್ಮಕಥನಗಳಂತೂ ಸೋಲಿನ ತಳಮಳದ ಅಪಮಾನದ ಸಂಕಥನಗಳೇ. ಆದರೆ ಆ ಸ್ಥಿತಿಯಲ್ಲಿ ಬದುಕು ತೊಡಗಿಸಿಕೊಳ್ಳುವ ನಿರಂತರ ಹುಡುಕಾಟದ ದ್ಯೋತಕಗಳಾಗುತ್ತವೆ.

ತಮ್ಮದಲ್ಲದ ಕಾರಣಕ್ಕೆ ತಮ್ಮ ಬದುಕಿನಲ್ಲಿ ನಡೆವ ತಪ್ಪುಗಳಿಗೆ ಜೀವಮಾನವಿಡೀ ಬೆಲೆ ತೆರಬೇಕಾಗುವ ಪಿತೃನೆಲದ ನ್ಯಾಯಕ್ಕೆ ಅಪೀಲು ಸಲ್ಲಿಸುವ ಕಥನಗಳಿವೆ. ಪ್ರೀತಿಯ ನಿರಂತರ ಹುಡುಕಾಟದಲ್ಲಿ ಹರಿವ ಹೊಳೆಯ ಆತ್ಮಾನುಸಂಧಾನದಂಥ ಕಥನಗಳಿವೆ. ಇವು ತಮ್ಮಷ್ಟಕ್ಕೆ ತಾವೇ ಜೀವನಮೀಮಾಂಸೆಯ ಸಂಕಥನವನ್ನು ಕಟ್ಟುತ್ತವೆ. ಮಹಾಭಾರತದ ಮಾಧವಿ ತಂದೆಯ ಆಯ್ಕೆಯಂತೆ ಗಾಲವನ ಗುರುದಕ್ಷಿಣೆಯ ಪೂರೈಕೆಯ ನಿಮಿತ್ತವಾಗಿ ನಡೆಯಬೇಕಾಗುತ್ತದೆ. ಎಷ್ಟು ಸಂಬಂಧಗಳಲ್ಲೂ, ಎಷ್ಟು ಹೆರುವಿಕೆಯಲ್ಲೂ ಅವಳ ಹೆಣ್ತನ, ತಾಯ್ತನ ಗಾಯಗೊಂಡೇ ನರಳುತ್ತವೆ. ಹಾಗೆ ಶಶಿಕಲಾ ವೀರಯ್ಯಸ್ವಾಮಿಯವರ ಬದುಕು ಅಸಮಾನ ವಿವಾಹದಲ್ಲಾದ ಅಪಮಾನದ ಬೆನ್ನುಹತ್ತಿ ಮತ್ತೆ ಮತ್ತೆ ತಪ್ಪುವ, ಬಳಲುವ ವಿಧಿಯನ್ನು ದಾಟಲಾಗುವುದೇ ಇಲ್ಲ. ಅನುದಿನದ ಅಂತರಗಂಗೆಯಲ್ಲಿ ಪ್ರತಿಭಾ ತಮ್ಮ ಜೀವನ ದೊಂದಿಗೆ ನಡೆಸುವ ಅನುಸಂಧಾನದ ತಾತ್ವಿಕತೆಯೂ ಇದೆ. ವಿಶ್ವಾಸದ ತಳಹದಿಯ ದಾಂಪತ್ಯ ಅನಗತ್ಯ ಸಂಶಯಗಳಿಗೆ ಆಸ್ಪದ ಕೊಟ್ಟಾಗ ಹೆಣ್ಣು ಅನುಭವಿಸುವ ಇರುಸುಮುರುಸು ಅವಳ ಆತ್ಮಪ್ರತ್ಯಯವನ್ನು ಕೆಣಕುತ್ತದೆ. ಒಂದು ಪ್ರತಿರೋಧದ ಭಾವ ಬಲಿತರೆ ಉಳಿದದ್ದೇನು ? ಮತ್ತೆ ಮತ್ತೆ ಅದೇ ಸೋಲು, ಅದೇ ಹಳವಂಡ. ಯಾಜಮಾನ್ಯತೆಯ ಬದಲಿ ರೂಪಗಳು ಕಾಣತೊಡಗುತ್ತವೆ. ನಿಂತ ನೆಲ ಕುಸಿಯುತ್ತದೆ. ಒಂದು ಬೊಗಸೆ ಪ್ರೀತಿಗಾಗಿ ಹಂಬಲವೆಷ್ಟು ? ಹಲವರಿಕೆಯೆಷ್ಟು ? ನಡುರಾತ್ರಿ ನೀರಿಗಿಳಿದಂತಹ ಪಯಣ ಬರೀ ಪ್ರಯೋಗಕ್ಕಾಗಿ ನಡೆದದ್ದೇ ? ಇಂತಹ ನಿರಾಧಾರದಲ್ಲೂ ನಿತ್ರಾಣವಾಗದೆ ಮುನ್ನಡೆವ ಜೀವದ ಜಿಗುಟು ಬೆರಗು ಮೂಡಿಸುತ್ತದೆ. ಪ್ರೇಮದ ಉನ್ಮತ್ತ ಹುಡುಕಾಟದಲ್ಲಿ ದೊರೆತದ್ದೇನು ? ಯಾಕೆ ? ಅಕ್ಕನಿಗೆ ಕಡೆಗೂ ಚೆನ್ನ ದೊರೆತನೇ ? ದೊರೆವನೇ ಎಂದಾದರೂ ? ಕಥನದ ಕೊನೆಯ 'ಬನ್ನಿ ನನ್ನ ಶವಸಂಸ್ಕಾರಕೆ' ಎಂಬ ಕವಿತೆ ಪ್ರೀತಿಯ ತಾತ್ವಿಕ ಶೋಧದ ರೂಪಕವಾಗಿದೆ. ಫ್ರೆಂಚ್ ಜನಪದರಲ್ಲಿ ಒಂದು ನಂಬಿಕೆಯಿದೆಯಂತೆ. ಹೆಣ್ಣೊಬ್ಬಳು ಸತ್ತಾಗ ಅವಳ ಪ್ರಿಯಕರರೆಲ್ಲರೂ ಸ್ಮಶಾನಕ್ಕೆ ಬರಬೇಕು ಮತ್ತು ಅಲ್ಲಿ ಜಗಳವಾಡ ಬಾರದು. ಆದರೆ ಕವಿತೆ ಅಗ್ನಿ ಸಂಸ್ಕಾರದ ಹಕ್ಕನ್ನು ಅವನೊಬ್ಬನಿಗೇ ಬಿಟ್ಟುಕೊಡುತ್ತದೆ. ಆತ ಅಗ್ನಿಸಾಕ್ಷಿಯಾಗಿ ಜೊತೆಯಾದವ ಮತ್ತು ಆತ್ಮದಹನ ಮಾಡಿದವ. ದೇಹದಹನಕ್ಕೂ ಹಕ್ಕುದಾರ. ಹೆಣ್ಣು ಬಯಸುವ ಪ್ರೇಮದ ಅನೂನ ಹುಡುಕಾಟದಂತೆ ಈ ಕೃತಿ ಕಾಣುತ್ತದೆ.

ಅನುಪಮಾ ನಿರಂಜನರ ಆತ್ಮಕಥನಗಳು ಎಲ್ಲ ಸೋಲುಗಳ ನಡುವೆಯೂ ಗೆಲ್ಲಿಸುವ ಪ್ರೇಮದ ತಾತ್ವಿಕತೆಯನ್ನು ಹೇಳುತ್ತಿದ್ದವು. 'ಎಂಥ ಸ್ಥಿತಿಯಲ್ಲೂ ನಾವು ತಾಳ್ಮೆಗೆಡಬಾರದು... ನಾವು ಸೋತರೆ ಅದು ಪ್ರೇಮದ ಸೋಲಾಗುತ್ತದೆ' ಎನ್ನುತ್ತಿದ್ದ ನಿರಂಜನರ ಪ್ರಸ್ತಾಪ ಆ ಕಥನಗಳಲ್ಲಿದೆ. ಇಂತಹ ಸಾಂಗತ್ಯದ ಕೊರತೆ ಮುಂದಿನ ಆತ್ಮಕಥನಗಳಲ್ಲಿ ಕಾಣುವುದಕ್ಕೆ ಸಾಮಾಜಿಕ–ಆರ್ಥಿಕ ಸ್ಥಿತ್ಯಂತರಗಳು ಕಾರಣ ವಾದವೇನೋ ? ಸ್ವಅಸ್ತಿತ್ವದ ಹುಡುಕಾಟ ತೀವ್ರವಾದಂತೆ ದಾಂಪತ್ಯದ ಜೋಲಿ ಸಂಭಾಳಿಸುವ ಜವಾಬ್ದಾರಿ ಹೆಂಗಸಿನ ಹೆಗಲಿಗೇ ಸೇರಿದಂತಿದೆ. ಲಂಕೇಶರ ಇನ್ನಿತರ ದೌರ್ಬಲ್ಯಗಳಂತೆ ಅವರು ಇತರ ಮಹಿಳೆಯರೊಂದಿಗೆ ಹೊಂದಿದ ಸಂಬಂಧವನ್ನೂ ಪರಿಭಾವಿಸಿಕೊಳ್ಳಬೇಕಾದ ಇಂದಿರಾ ಲಂಕೇಶ ಹೀಗೆ ಜೋಲಿ ಹಿಡಿದಿದ್ದಾರೆ. ಪ್ರೀತಿಯನ್ನು ಜೀವನ ಶೋಧವಾಗಿಸಿಕೊಂಡಾಗ ಅದು ತನ್ನೆಲ್ಲ ಸ್ವಾರ್ಥವನ್ನೂ ಕಳಚಿ ಮಗುವಿನಂತೆ ಬಯಲಾಗಿಬಿಡುತ್ತದೆ. ಬಿ. ವಿ. ಕಾರಂತರ ಕಡೆಕಡೆಯ ದಿನಗಳಲ್ಲಿ ಅವರೊಂದಿಗೆ ವಿಭಾ ಮಿಶ್ರಾರ ಭೇಟಿ ಏರ್ಪಡಿಸಿಕೊಡುವ ಪ್ರೇಮಾ ಕಾರಂತ, ಕಾರಂತರ ಬಗ್ಗೆ ತಮಗಿದ್ದ ಪ್ರೇಮವನ್ನು ಪರೀಕ್ಷಿಸಿಕೊಳ್ಳುತ್ತಾರೆ. ಕಡೆತನಕ ಗೆದ್ದೇ ಗೆಲ್ಲುವ

ತಾಯ್ತನದ ಸೆಣಸಾಟ ಇದೇ ಇದ್ದೀತೇ ? ಪ್ರೇಮಾ ಮತ್ತು ಕಾರಂತರ ಸಂಬಂಧ ಸ್ನೇಹದ ದಾಂಪತ್ಯದ ಸೀಮೆಯಾಗಿದೆ. ಬರೀ ಪ್ರೀತಿಯಾಗಿ ನಿಲ್ಲುವ ಕ್ರಮವಿದು.

ಬದುಕಿನ ವಿವಿಧ ವಿನ್ಯಾಸಗಳಲ್ಲಿ ಬಳಲಿಯೂ ಹೆಣ್ಣು ಅಪೇಕ್ಷಿಸುವುದು ಏನನ್ನು? ಎಲ್ಲ ಸರಿ ಎನಿಸುವಾಗಲೂ ಮತ್ತ್ಯಾಕೆ ಒಂಟಿತನ ಕಾಡುತ್ತದೆ ? ಬದುಕಿನ ಯಾವುದೋ ಗಳಿಗೆಯಲ್ಲಿ ಇದುವರೆಗೂ ನಡೆದ ಹಾದಿ ಸರಿಯಿತ್ತಲ್ಲವೇ ? ಸಾಕಲ್ಲವೇ ? ಎಂಬ ಪ್ರಶ್ನೆಗಳು ಯಾಕೆ ಮಗುಚಿಕೊಳ್ಳುತ್ತವೆ ? ನನ್ನ ತೇಜಸ್ವಿ ಕಥನದ ಕೊನೆಕೊನೆಯಲ್ಲಿ "ಇಂತಹ ಪತಿ, ಮನೆ, ಮಕ್ಕಳು ನನಗೆ ಇದಕ್ಕಿಂತ ಇನ್ನೇನು ಬೇಕು ?" ಎಂಬ ಪ್ರಶ್ನೆ ಎದುರಾಗುತ್ತದೆ. ಪ್ರಶ್ನೆ ಯಾರದೋ ಎದುರು ಕೇಳುವಾಗ ಹೊಮ್ಮುವ ಅರ್ಥಕ್ಕೂ ಅಂತರಂಗದೊಂದಿಗೆ ಅನುಸಂಧಾನಿಸಿಕೊಳ್ಳುವಾಗ ಹೊಮ್ಮುವ ಅರ್ಥಕ್ಕೂ ಇರುವ ವ್ಯತ್ಯಾಸದ ಅಗಾಧತೆಯಲ್ಲಿಯೇ ಮಹಿಳಾ ಬದುಕಿನ ತಾತ್ವಿಕ ಹುಡುಕಾಟವಿದೆ.

**೪. ಸ್ವಯಂಭೂ ಶೋಧದ ನೆಲೆಗಳು**

ಬಿರು ಬೇಸಿಗೆಯ ಬಯಲು ಉದ್ದಾನುದ್ದ ಮೈಚಾಚಿ ಬಿಕೋ ಎನ್ನುತ್ತಿರುತ್ತದೆ. ಒಂದು ಮಳೆಹನಿ ಸೋಂಕಿದರೆ ಸಾಕು ಮಣ್ಣ ಯಾವ ಪದರದಲ್ಲಡಗಿವೆಯೋ ಬೀಜಗಳು ಹಸಿರುಕ್ಕಿಸಿಬಿಡುತ್ತವೆ. ಬದುಕು ಇಲ್ಲಿಗೆ ವಿರಮಿಸುವದಿಲ್ಲ. ಮತ್ತೆ ಬಿಸಿಲು ಮತ್ತೆ ಮತ್ತೆ ಸಾಧ್ಯವಾದದ್ದೇನು ? ಹಸಿದ ಒಂದೆರಡು ಹೊಟ್ಟೆಗೆ ಹಸಿವಿಂಗಿಸಿದ್ದು ಬಿಟ್ಟರೆ ? ಮರವಾಗಿ ನೆಲಕಚ್ಚಿ ನಿಲ್ಲಬೇಕೆಂದರೆ ತಂಪಿನ ಯಾವುದೋ ಸೆಲೆ ಬೇರನ್ನು ಸೋಕಬೇಕಿದೆ. ಹೆಣ್ಣಿನ ಸ್ವಯಂಭೂ ಹೋರಾಟದ ಕಥನಕ್ಕೆ ಎದುರಾದಾಗೆಲ್ಲ ಇದೇ ಪ್ರಶ್ನೆ ಎದುರಾಗುತ್ತದೆ. ಹೊಳೆಯೊಂದು ಏರು ಹತ್ತಿ ಹರಿವ ದಣಿವಿನ ಕಥೆಗಳು ಇವು. 'ನಾನು ಭಾರ್ಗವಿ' ಎಂಬ ಕೃತಿ ಇದರ ನಿದರ್ಶನಗಳಲ್ಲೊಂದು. ಹೆಣ್ಣಿನ ಬದುಕಿನ ಮಹತ್ವದ ನಿರ್ಧಾರಗಳು ಅವಳ ಅಂತರಂಗದ ಪೂರ್ತ ಒಪ್ಪಿಗೆಯಿಲ್ಲದೆ, ನಿರಾಕರಣವಿಲ್ಲದೆ ನಡೆಯುತ್ತಲೇ ಇರುತ್ತದೆ. ನಿರ್ಧಾರ ತೆಗೆದುಕೊಳ್ಳುವ ಅವಕಾಶ ಇರುವುದಿಲ್ಲ. ಇದ್ದರೂ ನಿರ್ಧಾರ ತೆಗೆದುಕೊಳ್ಳಲು ಆಗುವುದೂ ಇಲ್ಲ. ಮದುವೆ, ಮಕ್ಕಳು, ನೌಕರಿ ಎಲ್ಲ ಹೀಗೆ ನಡೆದು ನಡೆದೂ... ಎಂಬ ಕಥನವಿದು. ಹೆಣ್ಣನ್ನು ಇಂಥವಳು ಇಂಥವಳು ಎಂದು ಗುರ್ತಿಸುವ ಪೇಟ್ರಿಯಾರ್ಕಿಯಲ್ಲಿ ಬದುಕಿನ ಒಳಾಂಗಣದಲ್ಲಿ ಅವಳು ಅಕ್ಷರಶಃ ಒಂಟಿಯಾಗಿರುತ್ತಾಳೆ. ಅವಳ ಸಂಬಂಧದ ಸೂತ್ರವೇನಾದರೂ ಇದ್ದರೆ ಅದು 'ಹೆಣ್ಣುಮಕ್ಕಳ ದುಃಖ ಹೆತ್ತವ್ವ ಬಲ್ಲಳು' ಎಂಬಂತೆ ಹೆಣ್ಣುಜೀವಗಳೊಂದಿಗೆ ಮಾತ್ರ. ಅದಕ್ಕೇ ಭಾರ್ಗವಿ ಕುಟುಂಬದ ವಿಸ್ತಾರ ನೆಲದಲ್ಲಿ ಇದ್ದು ಇಂಗಿಹೋಗುವ ಮಳೆಹನಿಗಳನ್ನೆಲ್ಲ ಸೇರಿಸಿ ಮತ್ತೆ ಮಳೆಯಾಗಿಸುವ ಮರುನಿರ್ಮಿತಿಗೆ ತೊಡಗುತ್ತಾರೆ. ಮೆಚ್ಚಿ ಕೈಹಿಡಿದ ಪತಿ ಮುಂದೆ ಮತ್ತೆ ಮತ್ತೆ ತನ್ನ ಜವಾಬ್ದಾರಿಯನ್ನು ಮರೆತು, ಆಸರೆ ಬಯಸುವ ಕಾಲದಲ್ಲಿ ನಿರಾತಂಕನಾಗಿಬಿಟ್ಟರೆ ಅದನ್ನು ಎದುರಿಸುವುದು ಹೇಗೆ ? ಅದು ಆತನ ಸ್ವಭಾವ ಎಂದು ಒಪ್ಪಿಕೊಳ್ಳಬೇಕಲ್ಲವೇ ? ಆರೋಪ, ಫಿರ್ಯಾದಿ, ನೋವುಗಳು ಪರಿಹಾರವಾಗದಲ್ಲವೇ ? ಜನಕರಾಜನ ಮಗಳು ವನಕ ತೊಟ್ಟಿಲ ಕಟ್ಟಿ ಲವ ಕುಶರನ್ನು ತೂಗಿದಳು – ಎನ್ನುವಾಗ ನನ್ನದೇನು ಮಹಾ ? ಅಲ್ಲವೇ ಮತ್ತೆ ? ಎಂಬ ಒಂಟಿ ಹೆಂಗಸಿನ ಬಗ್ಗೆ ಆಸ್ಪತ್ರೆಯ ಸಹಾಯಕರು ತಳೆವ ನಿಲುವು ಎಂಥದಿರುತ್ತದೆ ಎಂಬುದು ತಿಳಿದಿದ್ದರೂ ಯಾರ ಹಾದಿಗೂ ನಿರ್ಧಾರಕ್ಕೂ ತಡೆಯಾಗಲಾರೆ ಎಂಬ ಘನತೆಯಿದೆ. ತನ್ನ ಸ್ಥಿತಿಗೆ ತಾನೇ ಬೆರಗಾಗಿ 'ಏ ನನ್ನದು ಎಂಥ ಗಟ್ಟಿಜೀವ' ಎಂದು ನಗೆಯುಕ್ಕಿಸುವ ಬೆರಗಿದೆ. ಮೂರನೇ ಹೆರಿಗೆಯ ಒಂದು ಒಪ್ಪತ್ತು ಗಂಡ ಊಟ ತಂದಾಗ–ಅಂತೂ ಈ ಸಲ ನಾಣಿ ಊಟ ತಂದ – ಎಂದು ತೃಪ್ತವಾಗುವ ಪರಿಯಿದೆ. ಈ ಇಂಥ ಬದುಕನ್ನು ಬರಿಯ ಹೊಂದಾಣಿಕೆ ಎಂದುಬಿಡಬಹುದೇ ? ದಿನಂಪ್ರತಿ ತನ್ನೊಂದಿಗೆ ತನ್ನ ಸುತ್ತಲೊಂದಿಗೆ ಸೆಣಸುವ ಪ್ರತಿರೋಧದ ಅಲೆಗಳನ್ನು ಮುಚ್ಚಿಡಲಾಗುವುದಿಲ್ಲ. ಪ್ರತಿರೋಧ ಎಂದರೆ ಎದ್ದು ನಡೆಯುವುದೇ ಇದ್ದೂ ತೇಯುವುದೇ ? ಪದಕ್ಕೆ ಪದಾರ್ಥಗಳನ್ನು ಸಂಕಲಿಸಿದ ಪಿತೃಚಿಂತನೆಯಿಂದ ಈಚೆ ಬಂದು ನೋಡಬೇಕಿದೆ ನುಡಿಯನ್ನೂ ನುಡಿಗೊಡುವ ಬದುಕನ್ನೂ.




ಯಾವುದು ಹೊರಗಣ್ಣಿಗೆ ಸುಂದರ, ಸುಸ್ಥಿರ ಎನಿಸುತ್ತದೋ ಅಲ್ಲೇ ಹೆಣ್ಣು ಬಳಲಿ ಬೆಂಡಾಗುವುದ್ಯಾಕೆ ? ಯಾರ ಕಣ್ಣಿಗೂ ಕಾಣದ ಅನಾಥಭಾವ ಅವಳನ್ನು ಮಾತ್ರ ಸುತ್ತಿ ಕೆಡವುದ್ಯಾಕೆ ? ರಜನಿ ನರಹಳ್ಳಿಯವರ 'ಆತ್ಮವೃತ್ತಾಂತ' ಈ ಪ್ರಮೇಯವನ್ನು ಮುಂದಿಡುತ್ತದೆ. ನಾಯಿಯ ಮನಸ್ಸಿನೊಂದಿಗೆ ಹೆಣ್ಣಿನ ಮನಸ್ಸು ಹೊಕ್ಕಾಡುವುದ್ಯಾಕೆ ? ಯಾಕೆ ಆ ದೊಡ್ಡ ಮರ, ಮರದ ಮೇಲಿನ ಹಕ್ಕಿ ಕಾಡದು ನಮ್ಮನ್ನು ? ಈ ಮಣ್ಣಿಗಂಟಿದ ಬದುಕನ್ನು ಕೊಡವಿ ಕಾಲುಕಿತ್ತು ನಡೆಯುವುದಾದರೂ ಎಲ್ಲಿಗೆ ? ಇರುವುದಾದರೆ ಹೇಗೆ ? ಅಗಣಿತ ಪ್ರಶ್ನೆಗಳು. ಉತ್ತರದ ಹಂಗಿಲ್ಲದ ಪ್ರಶ್ನೆಗಳು. ತಾನೇನು ? ಏನಾಗಬೇಕಿದೆ ? ಯಾಕೆ ಎಂಬ ಪ್ರಶ್ನೆ ಮತ್ತೆ ಮತ್ತೆ ಮುಂದಾಗುತ್ತ ಅವಳ ಹಾದಿಯನ್ನು ತೆರೆಯುವ ಪ್ರಯತ್ನಗಳಿವು. ಯಾರ ಬಗ್ಗೆಯೂ ತಕರಾರುಗಳಿಲ್ಲದ, ಯಾವ ಮೊರೆಯೂ, ಗೋಳೂ ಇಲ್ಲದ, ತಾ ನಿಂತ ನೆಲದ ಗುಣ ತಿಳಿದು ಮುನ್ನಡೆವ ಛಾತಿಯಿದೆ. ಹೇಸಿಗೆ ತಿಂದು ಹೂ ಅರಳಿಸುವ ಗಿಡದ ಗುಣ ಕಲಿವ ಅದಮ್ಯ ಸ್ವಯಂಭೂ ನೆಲೆಗಳಲ್ಲವೇ ಇವು ?

**೫. ಬಹುತ್ವದ ಕಥನಗಳು**

ಗಿರೀಶ ಕಾರ್ನಾಡರು ತಮ್ಮ ಆತ್ಮಕಥೆ 'ಆಡಾಡತಾ ಆಯುಷ್ಯ'ದಲ್ಲಿ ತಮ್ಮ ತಾಯಿಯ ಕಥನದ ಮೂಲಕ ಆರಂಭವನ್ನು ಮಾಡಿಕೊಳ್ಳುತ್ತಾರೆ. ಆದರೆ ಮುಂದೆ ಸಾಗಿದಂತೆ ಅದು ಬದುಕನ್ನು ಎದುರಿಸುತ್ತ ಅನುಭವಿಸುತ್ತ ಹೋದ ಪುರುಷ ಕಥನವಾಗಿ ಮಾತ್ರ ಕಾಣುತ್ತದೆ. ಸಹವರ್ತಿಯ, ಸಹಬಾಳ್ವೆಯ ನಿರೂಪಣೆಯಲ್ಲಿಯೂ ಗಾಢವಾದ ಒಂಟಿತನವೇ ಓದುಗರಿಗೆ ಕಾಡುತ್ತದೆ. ಆಶ್ಚರ್ಯವೆಂದರೆ, ತನ್ನೊಂದಿಗೆ ತನ್ನ ಸುತ್ತುವರಿದ ಕೋಟೆ ಕೊತ್ತಲಗಳನ್ನು ಹೊತ್ತುಕೊಂಡೇ ನಡೆಯುವುದು ಮಹಿಳಾ ಆತ್ಮಕಥನಗಳ ವಿಶೇಷತೆಯಾಗಿದೆ. ಸ್ವಲ್ಪ ಯಾಮಾರಿ, ಸ್ವ ಕಥನದತ್ತ ಹೊರಟರೂ ತಮ್ಮನ್ನು ತಾವು ಸಂಭಾಳಿಸಿಕೊಂಡು ಕೂಡುಕಥನದತ್ತ ನಡೆಯುವ ಗುಣ ಇಲ್ಲಿದೆ. "ಏನಿದು ಈಯಮ್ಮ ತನ್ನ ಕಥೆಯಲ್ಲಿ ತಾನು ಒಂಟಿ ಪಯಣಿಗಳು ಎಂಬಂತೆ ಹೇಳುತ್ತಿದ್ದಾಳೆ..." (ನಾನು ಭಾರ್ಗವಿ) ಎಂದುಕೊಳ್ಳುವ ವಿವರಣೆಯಿದೆ. ಇಂತಹ ಸ್ಪಷ್ಟೀಕರಣಗಳ ಅಗತ್ಯವನ್ನು ಗಮನಿಸಬೇಕು. ಓದುಗನನ್ನೂ ಕಥನದ ಭಾಗವಾಗಿ ನೋಡುವ ಮನೋಧರ್ಮವಿದು. ಭಾರ್ಗವಿಯವರ ಆತ್ಮಕಥನ ತಾಯಿ, ಅತ್ತೆ, ಅಜ್ಜಿ, ಮಗಳು ಹೀಗೆ ಅಖಂಡ ಮಹಿಳಾ ಬದುಕಿನ ಧ್ವನಿಯಾಗುತ್ತದೆ. ಅನುಪಮಾ ನಿರಂಜನ ತಮ್ಮ ಬದುಕಿನ ಕಥನದೊಳಗೇ ನಟಿ ಕಲ್ಪನಾಳನ್ನೂ ಕಸಿಕಟ್ಟಿಕೊಳ್ಳುವುದನ್ನು ಕಾಣಬಹುದು. ಇದು ಬಿಡಿಸಿ ತೋರಿಸುವ ಸಂಗತಿಯಲ್ಲ. ಮಹಿಳಾ ಆತ್ಮಕಥೆಗಳ ಗಟ್ಟಿಗುಣವೇ ಈ ಬಹುತ್ವದ ನಿಲುವು. ಈ ಗುಣವಿಶೇಷವು ಸ್ಪಷ್ಟವಾಗಲು ಪುರುಷ ಆತ್ಮಕಥನದೊಂದಿಗಿಟ್ಟು ನೋಡಬೇಕು. 'ಆಡಾಡತಾ ಆಯುಷ್ಯ'ದಲ್ಲಿ ಗಿರೀಶ್ ಕಾರ್ನಾಡರು ಕಥನವನ್ನು ತಮ್ಮ ತಾಯಿಯ ಆತ್ಮನಿವೇದನೆಯ ರೀತಿಯಲ್ಲಿ ಪ್ರಾರಂಭಿಸುತ್ತಾರೆ. ಆದರೆ ಮುಂದಿನ ಹೆಜ್ಜೆಗಳು ಒಂಟಿ ಪಯಣಿಗನಾದ ಗಂಡು ಗರ್ವವು ಅಲ್ಲಿ ಢಾಳಾಗಿದೆ.

**ಸಮಾರೋಪ**

ಕನ್ನಡ ಮಹಿಳಾ ಆತ್ಮಕಥನಗಳ ಅಧ್ಯಯನವೆಂದರೆ ಸಾಮಾಜಿಕವಾಗಿ ಮಹಿಳೆಯರು ಎದುರಿಸಿದ ಬದುಕಿನ ಕಥನವಾಗಿದೆ. ಜೀವನವನ್ನು ಎದುರಾಗಿಸಿಕೊಂಡ ಶೋಧಕ ತತ್ವವಾಗಿದೆ. ಸಾಮಾಜಿಕ ಚರಿತ್ರೆಯನ್ನು ವಿಭಿನ್ನ ಶೇಡ್ಸ್‌ಗಳಲ್ಲಿ ದಾಖಲಿಸುವ ಪ್ರವೃತ್ತಿಯಾಗಿದೆ. ಹೆಣ್ಣಿನ ಕುರಿತು ಕಟ್ಟಲ್ಪಟ್ಟ ಅಪಕಲ್ಪಿತಗಳನ್ನು ನಿವಾರಿಸುವ ಪ್ರಯತ್ನವಾಗಿದೆ. ಹೆಣ್ಣು ಬದುಕಿನ ಒಳಾಂಗಣವನ್ನು ಆಪ್ತವಾಗಿ ಹಾದು ಬರುತ್ತ, ಆ ಎದೆಗಾವು ನಮ್ಮ ಪ್ರಜ್ಞೆಯನ್ನು ಮಿದುಗೊಳಿಸುವ ಅನುಭೂತಿಗೆ ಒಳಗಾಗುವುದಾಗಿದೆ.

ಡಾ॥ ವಿನಯಾ ಒಕ್ಕುಂದ
'ನೆಮ್ಮದಿ', ಸಂಖ್ಯೆ ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ – ೫೮೦ ೦೦೩

# ಕರ್ನಾಟಕದ ಮುಸ್ಲಿಮರು ಮತ್ತು ಕನ್ನಡ

**ಡಾ॥ ಸರ್ಫ್ರಾಜ್ ಚಂದ್ರಗುತ್ತಿ**

**'ಉರ್ದು ಮುಸ್ಲಿಮರ ಭಾಷೆ ಹಾಗೂ ಅದು ತಮ್ಮ ಧರ್ಮದ ಭಾಷೆ' ಎಂಬುದು ತಪ್ಪು ಕಲ್ಪನೆ. ಉರ್ದು ಯಾವತ್ತೂ ಮತೀಯ ಭಾಷೆ ಆಗಿರಲಿಲ್ಲ. ಅದು ದೇಶದಲ್ಲಿ ಮುಖ್ಯವಾಗಿ ಕನ್ನಡನಾಡಿನಲ್ಲಿ ಹುಟ್ಟಿ ವಿಕಾಸಗೊಂಡು ಬೆಳೆದುಬಂದಿರುವ ಒಂದು ಸುಂದರ ಸುಮಧುರ ಭಾಷೆ. ಜನಭಾಷೆಗಳಿಗೆ ಜನ್ಮ ನೀಡಿರುವ ಈ ದೇಶದ ಮಣ್ಣಿನ ಭಾಷೆ. ಹಿಂದೂ ಮುಸ್ಲಿಮರಾದಿಯಾಗಿ ಅನೇಕ ಜಾತಿ ಧರ್ಮಗಳ ಜನ ಉರ್ದುವನ್ನು ಕಟ್ಟಿ ಬೆಳೆಸಿದ್ದಾರೆ. ಕರ್ನಾಟಕದ ಮಾಜಿ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಉರ್ದುವಿನಲ್ಲಿ ಸೊಗಸಾಗಿ ಮಾತನಾಡುತ್ತಿದ್ದರು. ವೀರೇಂದ್ರ ಪಾಟೀಲ್, ಧರಂಸಿಂಗ್ ಅವರ ಮನೆ ಮಾತು ಉರ್ದು. ರಾಜೇಂದ್ರಸಿಂಗ್ ಬೇಡಿ, ಪ್ರೇಮಚಂದ್ ಉರ್ದು ಸಾಹಿತ್ಯವನ್ನು ಬೆಳೆಸಿದ್ದಾರೆ. ಕನ್ನಡದ ಶಾಂತರಸ, ಪಂಚಾಕ್ಷರಿ ಹಿರೇಮಠ್, ದೇವೇಂದ್ರಕುಮಾರ್ ಹಕಾರಿ ಮೊದಲಾದವರು ಉರ್ದುವಿನಲ್ಲಿ ಸಾಹಿತ್ಯ ರಚಿಸಿದ್ದಾರೆ. ಹೀಗಿರುವಾಗ ಉರ್ದು ಮುಸ್ಲಿಮರ ಭಾಷೆ ಎಂಬ ಮಾತಿಗೆ ಅರ್ಥ ಇದೆಯೇ ?**

ಕನ್ನಡಕ್ಕೂ, ಕರ್ನಾಟಕದ ಮುಸ್ಲಿಮರಿಗೂ ಅನಾದಿ ಕಾಲದ ಸಂಬಂಧವಿದೆ. ಹಾಗೆಯೇ ಇಲ್ಲಿಯ ಮುಸ್ಲಿಮರು ಬಹಳ ಹಿಂದಿನಿಂದಲೂ ಕನ್ನಡವನ್ನು ತಮ್ಮ ಮನೆಮಾತಾಗಿ ಒಪ್ಪಿಕೊಂಡಿದ್ದಾರೆ. ಮೂರನೇ ಬಲ್ಲಾಳ ಹೊಯ್ಸಳರ ಕಾಲದಲ್ಲಿ ಮಲ್ಲಿಕಾಫರನ ಆಕ್ರಮಣವಾದಾಗ ಅನೇಕ ಹೊಯ್ಸಳ ಸೈನಿಕರನ್ನು ಸೆರೆಹಿಡಿಯಲಾಯ್ತು. ಅವರನ್ನು ಎಳೆದೊಯ್ಯುವಾಗ ಸುಮಾರು ಇಪ್ಪತ್ತರಷ್ಟು ಸೈನಿಕರು ಮಲ್ಲಿಕಾಫರನನ್ನು ಕನ್ನಡದಲ್ಲಿ ಹೀಗೆ ವಿನಂತಿಸಿಕೊಂಡರಂತೆ : "ನಾವು ಮುಸ್ಲಿಮರು, ನಮ್ಮನ್ನೇನೂ ಮಾಡಬೇಡಿ. ನಮ್ಮನ್ನು ಕ್ಷಮಿಸಿ ಬಿಟ್ಟುಬಿಡಿ". ದ್ರಾವಿಡರು ಮುಸ್ಲಿಮರು ಹೇಗಾದರು ಎಂಬ ಅನುಮಾನ ವ್ಯಕ್ತಪಡಿಸಿದಾಗ, ಹೊಯ್ಸಳ ಸೇನೆಯ ಆ ಬಂಧಿತ ಮುಸ್ಲಿಮ್ ಸೈನಿಕರು 'ಕಲ್ಮಾ' ಹೇಳಿ ತಾವು ಇಸ್ಲಾಂ ಧರ್ಮೀಯರು ಎಂಬುದನ್ನು ಸಾಬೀತುಪಡಿಸಿದರಂತೆ. ಹಂಪಿ ವಿಶ್ವವಿದ್ಯಾಲಯವು ೨೦೦೯ರಲ್ಲಿ ಪ್ರಕಟಪಡಿಸಿರುವ 'ಆಡಳಿತ ಕನ್ನಡ' ಪುಸ್ತಕದಲ್ಲಿ ಈ ಘಟನೆ ಉಲ್ಲೇಖಗೊಂಡಿದೆ. ಹೊಯ್ಸಳ ಸಾಮ್ರಾಜ್ಯದ ಮೇಲೆ ಮಲ್ಲಿಕಾಫರನ ಆಕ್ರಮಣವಾದದ್ದು ಹದಿನಾಲ್ಕನೇ ಶತಮಾನದ ಆದಿಭಾಗದಲ್ಲಿ.

ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ಸೂಫಿ ಸಂತರಿಗೆ ವಿಶೇಷ ಸ್ಥಾನವಿದೆ. ಹಿಂದೂ, ಮುಸ್ಲಿಮ್ ಎರಡೂ ಧರ್ಮಗಳ ಸಾರವನ್ನು ಹೀರಿಕೊಂಡು ಹೊಸ ಧಾರ್ಮಿಕತೆಯನ್ನು ಸಾರಿದವರು ಸೂಫಿ ಸಂತರು. ಈ ಸೂಫಿ ಸಂತರು ಕರ್ನಾಟಕದಲ್ಲಿ ಕನ್ನಡದ ಮೂಲಕವೇ ತಮ್ಮ ಆಧ್ಯಾತ್ಮಿಕ, ತಾತ್ವಿಕ ಚಿಂತನೆಗಳನ್ನು ಕಟ್ಟಿ ಬೆಳೆಸಿದರು. ಶಿಶುನಾಳ ಶರೀಫ, ಕೋಳೂರು, ಹುಸೇನ್ ಸಾಬ್, ಬಂದೇನವಾಜ್, ಬಾಬಾಬುಡನ್ ಸಾಬ್, ಬೇನೂರ ಹಜರತ್ ಕಾಕಾಪೀರ್, ಮಹಾಗಾಂವ್‌ನ ಪೀರ್ ಸಾಬ್, ಮಂಜರ್ಲಿ ಖಾದರ್ ಸಾಬ್, ಹಸನ್ ಮಾತಾಜಿ ಮೊದಲಾದ ಸೂಫಿಗಳು ಕನ್ನಡದ ಆಧ್ಯಾತ್ಮಿಕ ನೆಲೆಯನ್ನು ವಿಸ್ತರಿಸಿದ್ದಾರೆ. ಇವರಲ್ಲಿ ಅನೇಕರು ತತ್ವಪದಗಳೊಂದಿಗೆ ಮೊಹರಂ ಪದಗಳು, ದೊಡ್ಡಾಟ-ಬಯಲಾಟದ ಪದ ಹಾಗೂ ಲಾವಣಿಗಳನ್ನು ಹಾಡಿದ್ದಾರೆ. ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕುಣಿದಾಡಿದ್ದಾರೆ. ಗುರು ಗೋವಿಂದಭಟ್ಟರ ಅನಾರೋಗ್ಯದ ಸುದ್ದಿ ಬಂದಾಗ ಕೈಯಲ್ಲಿ ತಾಳ ಹಿಡಿದು ವೇದಿಕೆಯಲ್ಲಿ ಬಯಲಾಟ ಆಡಿಸುತ್ತಿದ್ದ



ಶರೀಫರು, ನಾಟಕ ಬಿಟ್ಟು ಕಳಸಕ್ಕೆ ಓಡಿದರಂತೆ. ಶಿವಮೊಗ್ಗ ಜಿಲ್ಲೆಯ ಶಿರಾಳಕೊಪ್ಪದ ಸಮದ್ ಸಾಬ್ ಕಳೆದ ಶತಮಾನದ ಪ್ರಸಿದ್ಧ ಲಾವಣಿಕಾರನಾಗಿದ್ದ. ನಿನ್ನೆ–ಮೊನ್ನೆಯವರೆಗೂ ಹಳ್ಳಿ–ಹಳ್ಳಿಗಳಲ್ಲಿ ಮುಸ್ಲಿಮ್ ಹುಡುಗರು ಮೊಹರಂ ಪದ ಹಾಡುತ್ತ ಊರ ಅಗಸೆ ಬಾಗಿಲುಗಳಲ್ಲಿ ನಾಟಕದ ಪಾತ್ರ ಧರಿಸಿ ನಟಿಸುತ್ತಿದ್ದರು. ಕನ್ನಡ ಅವರ ವ್ಯಾವಹಾರಿಕ ಭಾಷೆಯಾಗಿತ್ತು. ಮನೆ ಮಾತಾಗಿತ್ತು.

ಶಿಶುನಾಳ ಶರೀಫ ಸಾಹೇಬರ ತರುವಾಯ ಸುದೀರ್ಘ ಕಾಲದ ನಂತರ ನವ್ಯೋದಯ ಕನ್ನಡ ಕಾವ್ಯದಲ್ಲಿ ಮುಸ್ಲಿಂ ಸಂವೇದನೆ ಅಧಿಕೃತವಾಗಿ ದಾಖಲಾದದ್ದು ನಿತ್ಯೋತ್ಸವದ ಕವಿ ನಿಸಾರ್ ಅಹಮದ್ ಅವರ ಮೂಲಕ. ಕನ್ನಡದ ಜನಪರ ನಿಲುವಿನ ಬಂಡಾಯ ಚಳವಳಿಯ ಮಹತ್ವದ ಸಾಧನೆಯೆಂದರೆ ವಿಭಿನ್ನ ಸ್ತರದ ಜಾತಿ, ಜನಾಂಗಗಳ ಅನುಭವವನ್ನು ಸಾಹಿತ್ಯದ ತೆಕ್ಕೆಗೆ ತೆಗೆದುಕೊಂಡಿದ್ದು. ಸ್ತ್ರೀಯರು, ದಲಿತರು, ಅಲ್ಪಸಂಖ್ಯಾತರು, ಭಾಷಾ ಅಲ್ಪಸಂಖ್ಯಾತರು ಹೀಗೆ ಹತ್ತಾರು ಬಗೆಯ ಜನಸಮುದಾಯ ಬಂಡಾಯ ಚಳುವಳಿಯ ಮೂಲಕ ಕನ್ನಡ ಸಾಹಿತ್ಯದಲ್ಲಿ ಪ್ರವೇಶ ಪಡೆದದ್ದು. ಸಾರಾ ಅಬೂಬಕರ್, ಭಾನು ಮುಷ್ತಾಕ್, ರಹಮತ್ ತರೀಕೆರೆ, ಬೊಳುವಾರು ಮಹಮದ್ ಕುಂಞ, ಫಕೀರ್ ಮುಹಮದ್ ಕಟ್ಪಾಡಿ, ಬಿ. ಎಂ. ರಶೀದ್, ರಜಿಯಾ, ಸಬೀಹಾ, ಕೆ. ಶರೀಫಾ, ಪೀರ್ ಬಾಷಾ, ಅರೀಫ್ ರಾಜಾ... ಮೊದಲಾದವರು ಕನ್ನಡ ಸಾಹಿತ್ಯಕ್ಕೆ ಹೊಚ್ಚಹೊಸ ಅನುಭವ ಲೋಕವನ್ನು ಕಟ್ಟಿಕೊಟ್ಟವರು. ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಹಲವಾರು ಶತಮಾನಗಳಿಂದ ಕನ್ನಡದ ಮೌಖಿಕ ಪರಂಪರೆಯೊಂದಿಗೆ ಒಡನಾಡುತ್ತಾ ಬಂದಿದ್ದ ಕರ್ನಾಟಕದ ಮುಸ್ಲಿಮರು ಸ್ವಾತಂತ್ರ್ಯಾನಂತರದ ಕಾಲಘಟ್ಟದಲ್ಲಿ ಬಂಡಾಯ ಸಾಹಿತ್ಯ ಚಳುವಳಿ ಬರುವ ವರೆಗೆ ಹಲವು ದಶಕಗಳ ಕಾಲ ತಮ್ಮ ದನಿಯನ್ನು ಕಳೆದುಕೊಂಡು ಮೌನವಾದದ್ದು ಏಕೆ ? ಅದು ದೇಶ ವಿಭಜನೆಯಿಂದಾದ ಆಘಾತವೇ ? ದೇಶವಿಭಜನೆಯ ಕಾಲದಲ್ಲಿ ಆದ ಅಸಂಖ್ಯಾತ ಕೋಮು ಗಲಭೆ, ಸಾವು–ನೋವುಗಳ ಪರಿಣಾಮವೆ ಅಥವಾ ಕರ್ನಾಟಕ ದಾದ್ಯಂತ ನಿಧಾನವಾಗಿ ಹರಡತೊಡಗಿದ್ದ ಉರ್ದು ಭಾಷೆಯ ಜೊತೆ ಅದು ತಮ್ಮ ಧಾರ್ಮಿಕ ಭಾಷೆ–ಕನ್ನಡ ಕಾಫಿರರ ಭಾಷೆ ಎಂಬ ನವ ಧಾರ್ಮಿಕವಾದಿಗಳ

# ಒಂದು ಭ್ರೂಣದ ಸ್ವಗತ



ಕಗ್ಗತ್ತಲೆಯ ಜಗತ್ತಿನಲ್ಲೂ
ಪ್ರಣತಿಯೊಂದು ಪ್ರಜ್ವಲಿಸುತಿದೆ
ಅಮ್ಮನ ವಾತ್ಸಲ್ಯವೇ ಇರಬೇಕು
ಮಗೂ... ಮಾರ್ದನಿಸುತಿದೆ
ಆರ್ತತೆಯಿಂದ ತಾಯ
ಹೃದಯಬಡಿತವೇ ಇರಬೇಕು
ಬೆಳಕು ಕಾಣುವುದೆಂದು
ಯಕ್ಷ ಪ್ರಶ್ನೆ !
ಕಾಣಲೇಬೇಕೇ ಮತ್ತೊಂದು
ಪ್ರಶ್ನೆ ;

ಚಿವುಟಿಬಿಡು !
ಅಟ್ಟಹಾಸದ ದನಿಯೊಂದು
ಮಾತೃ ಹೃದಯವ ಭೇದಿಸಿ
ಝೇಂಕರಿಸುತಿದೆ ;
ನನ್ನೊಡಲಿನ ಕುಡಿ
ಕಳಚಲಾರೆ ಜೀವ ಕೊಡಿ
ಆರ್ತನಾದ ಆವರಿಸುತಿದೆ ;
ಕಣ್ಣಾವೆಗಳ ಹನಿಗಳು
ಈ ಅವ್ಯಕ್ತ ಹೃದಯಕೆ
ಹಾಲುಣಿಸುತಿವೆ !

ಭುವಿ ಸ್ಪರ್ಶವದೇಕೆ
ನಿಗೂಢ ?
ಮಾನದಂಡಗಳಿವೆಯೇ
ಹೊಂಗಿರಣಗಳ ಕಾಣಲು ;
ನನ್ನದಲ್ಲದ ಆಯ್ಕೆ
ವರವೋ ಶಾಪವೋ
ಎಲ್ಲವೂ ಸಂದಿಗ್ಧ ;

ಸವರಿದ ಕೈಗಳ ಚಿತ್ತಸ್ಪರ್ಶ
ಹೊರಜಿಗಿಯುವ
ಬಯಕೆ ; ನನಗೇಕೆ
ಮುಕ್ತಿ ಇಲ್ಲ !

ಬಂಧನವೇನಲ್ಲ
ಈ ಸುಂದರ ಪಂಜರದ ಬಾಳು
ವಾತ್ಸಲ್ಯದ ಕಡಲಲಿ
ಮಿಂದ ದಿವ್ಯಾನುಭವ ;
ಹಂಗಿಲ್ಲದ ಬದುಕು
ಪಂಜರವ ಭೇದಿಸಿದಾಗ
ಅಳುವಿನ ಸ್ವೀಕೃತಿಯಂತೆ
ಸೃಷ್ಟಿ ನಿಯಮ ಎಂದಾರು ; ಅಲ್ಲ
ನಿಷ್ಕಲ್ಮಷ ಕಡಲೊಳಗಿನ
ಸ್ವರ್ಗದ ನೆನಪು !

ಕಾರ್ಗತ್ತಲಿನಲೂ
ಕಾಣುವ ಮಮತೆಯ ಕಿಂಡಿಗೆ
ನೂರೆಂಟು ಸರಳುಗಳು
ಮುಕ್ತ ಬಾನಿನ ಕೆಳಗೆ ;
ಮಾತೆಯ ಒಡಲೊಳಗಿನ
ಭಾರ ಭುವಿಗೆ
ಹೊರೆಯೆಂದಾರು ;
ನಿಗೂಢವಲ್ಲವೇ ಮನುಕುಲ !

ಹೆಜ್ಜೆಯೂರುವ ಮುನ್ನವೇ
ಸರಳುಗಳ ಸರಪಳಿ
ತೊದಲು ನುಡಿಯುವ
ಮೊದಲೇ ಸಂಸ್ಕೃತಿಯ ಹಳಹಳಿ ;




ಇಂತಿಪ್ಪ ಬಂಧನಕೆ
ಇಂತಿಪ್ಪು ಸಾಂತ್ವನ
ಪುರಾಣದ ಸಂಕಥನ
ಗೌರವಾದರಗಳ ಸಮ್ಮಾನ
ಎಲ್ಲವೂ ಮಿಥ್ಯೆ !

ನಿರ್ಭಯದಿಂದಿರಲಹುದೇ
ಸೌಜನ್ಯವಿಲ್ಲದೆಡೆ ;
ಒಡಲೊಳಗಿನ ಸುಖವೇ
ಲೇಸು ; ನನಗೆ ಮುಕ್ತಿ
ಬೇಡಮ್ಮ ನಿನ್ನೊಡಲು ಸಾಕು !

ನಾ. ದಿವಾಕರ
ಮನೆ ಸಂಖ್ಯೆ : ೩೮, ಬ್ಲಾಕ್ ೨೨,
ಮಧುವನ, ಶ್ರೀರಾಂಪುರ ೨ನೇ ಹಂತ,
ಮೈಸೂರು – ೫೭೦ ೦೨೩

ಹುಸಿ ಪ್ರಚಾರಕ್ಕೆ ಒಳಗಾಗಿ ಅನುಭವಿಸಿದ ಸಂಕಟ–ಗೊಂದಲಗಳೇ ? ಇದೊಂದು ಕುತೂಹಲದ ವಿಷಯ.

**ಉರ್ದು ಭಾಷೆಯ ಹಿನ್ನೆಲೆ**

ಇಂದು ಕರ್ನಾಟಕದಾದ್ಯಂತ ಕ್ಷಿಪ್ರವಾಗಿ ಹಾಗೂ ವ್ಯಾಪಕವಾಗಿ ಹರಡುತ್ತಿರುವ ಭಾಷೆ ಉರ್ದು. ಇಂಡಿಯಾದಲ್ಲಿ ಹುಟ್ಟಿ ಬೆಳೆದ ಸುಮಾರು ೧೭೯ ಪ್ರಾದೇಶಿಕ ಭಾಷೆಗಳು ಜಗತ್ತಿನಲ್ಲಿಯೇ ಅತ್ಯಂತ ಸಮೃದ್ಧ ಭಾಷೆಗಳಾಗಿವೆ ಎಂದು ರಾಮಮನೋಹರ ಲೋಹಿಯಾ ಅಭಿಪ್ರಾಯಪಟ್ಟಿದ್ದಾರೆ. ಈ ಎಲ್ಲಾ ಭಾಷೆಗಳು ಜನಸಮುದಾಯದ ಸೆಕ್ಯುಲರ್ ಭಾಷೆಗಳಾಗಿವೆ. ಉರ್ದು ಕೂಡ ಇಂತಹ ಜನಸಮುದಾಯದ ಭಾಷೆಯಾಗಿದೆ. ಅದು ಹುಟ್ಟಿ ಬೆಳೆದದ್ದು ಭಾರತದಲ್ಲಿ ಹಾಗೂ ಉತ್ತರ ಕರ್ನಾಟಕದ ಬಿಜಾಪುರ, ಬೀದರ್, ಗುಲಬರ್ಗಾ ಪ್ರಾಂತ್ಯಗಳಲ್ಲಿ.

ಉರ್ದು ಭಾಷೆಯ ಹುಟ್ಟಿನ ಮೂಲದ ಕುರಿತಾಗಿ ಎರಡು ಅಭಿಪ್ರಾಯಗಳಿವೆ. ಮೊದಲನೆಯದು, ಕರ್ನಾಟಕದ ಗುಲಬರ್ಗಾ ಹಾಗೂ ಎರಡನೆಯದು, ಉತ್ತರ ಭಾರತದ ಸಿಂಧ್ ಪ್ರಾಂತ್ಯ. ಬಿಜಾಪುರ, ರಾಯಚೂರು, ಹೈದರಾಬಾದಿನ ಗೋಲ್ಕೊಂಡ ಮೊದಲಾದ ಗುಲಬರ್ಗಾ ಸಾಮ್ರಾಜ್ಯಕ್ಕೆ ಸೇರಿದ ಸಂಸ್ಥಾನಗಳಲ್ಲಿ ಹಸನ್ ಗಂಗೂ ಬಹಮನ್ ಷಾ ಹಾಗೂ ಬಿಜಾಪುರದ ಆದಿಲ್‌ಷಾಹಿಗಳ ಆಡಳಿತದ ಕಾಲದಲ್ಲಿ ಆಫ್ಘಾನಿಸ್ತಾನದಿಂದ ಬಂದ ಅರಸರು ಹಾಗೂ ಸೈನಿಕರು ತಾವು ಮಾತನಾಡುತ್ತಿದ್ದ ಪರ್ಷಿಯನ್ ಭಾಷೆಯೊಂದಿಗೆ ಕನ್ನಡ, ಮರಾಠಿ ಮೊದಲಾದ ಸ್ಥಳೀಯ ಭಾಷೆಗಳೊಂದಿಗೆ ಒಡನಾಡುತ್ತಾ ಸಂವಾದಿಸಿದ್ದರ ಫಲವಾಗಿ ವಿಶಿಷ್ಟವಾದುದೊಂದು ಭಾಷೆಯ ಹುಟ್ಟು ಆಯಿತು. ಇದನ್ನು ಆಗ 'ರೇಖ್ತಾ' ಎನ್ನುವ ಹೆಸರಿನಿಂದ ಕರೆಯಲಾಯ್ತು. ಇದೇ ಮುಂದೆ 'ದಖ್ಖನಿ ಉರ್ದು' ಎಂದಾಯ್ತು. ಇನ್ನೊಂದೆಡೆ, ೮ನೇ ಶತಮಾನದ ಹೊತ್ತಿಗೆ ಟರ್ಕಿ, ಆಫ್ಘಾನಿಸ್ತಾನಗಳಿಂದ ವ್ಯಾಪಾರದ ಉದ್ದೇಶದಿಂದ ಅರಬ್ ವರ್ತಕರ ಸಮೂಹ ಉತ್ತರ ಭಾರತದ ಸಿಂಧ್ ಪ್ರಾಂತ್ಯಕ್ಕೆ ಬಂದು ನೆಲೆ ನಿಂತಿತು. ಕ್ರಮೇಣ ಆ ಭಾಗವನ್ನು ತಮ್ಮ ಹಿಡಿತಕ್ಕೆ ತೆಗೆದುಕೊಂಡ ಅವರು ತಾವು ಮಾತನಾಡುವ ಪಾರ್ಸಿ, ಆಫ್ಘಾನಿ, ಅರಬ್ ಭಾಷೆಗಳೊಂದಿಗೆ ಇಂಡಿಯಾದ ಸಿಂಧ್, ಪಂಜಾಬಿ, ದೆಹಲಿಯ ಸ್ಥಳೀಯ ಭಾಷೆಗಳ ಪದಗಳನ್ನು ಒಳಗೊಳ್ಳುತ್ತ ತಮ್ಮದೇ ಆದ ಒಂದು ಸಂಪರ್ಕ ಭಾಷೆಯನ್ನು ಹುಟ್ಟುಹಾಕಿದರು. ಇದು 'ರಿಬಾ' ಎಂಬ ಹೆಸರಿನಲ್ಲಿ ಪ್ರಚಾರಕ್ಕೆ ಬಂದಿತು. ಇದನ್ನು ಹಿಂದ್ವಿ, ಹಿಂದ್, ದೆಹಲ್ವಿ ಮೊದಲಾದ ಹೆಸರುಗಳಿಂದ ಕೂಡ ಕರೆಯಲಾಗುತ್ತಿತ್ತು. ನಂತರ ಮೊಗಲ್ ಸಂತತಿಯ ಬಹದ್ದೂರ್ ಷಾ ಜಾಫರ್ ಈ ರಿಬಾ ಭಾಷೆಗೆ 'ಉರ್ದುಯೇ–ಮೊವೆಲ್ಲ' ಎಂದು ಹೆಸರಿಸಿದ. ಆದರೆ ಅದು ಜನಸಾಮಾನ್ಯರಿಗೆ ಉಚ್ಚರಿಸಲು ಕಷ್ಟವಾಗತೊಡಗಿ, ಷಹಜಹಾನ್ ತನ್ನ ಕಾಲಕ್ಕೆ ಅದನ್ನು ಸರಳೀಕರಿಸಿ 'ಉರ್ದು' ಎಂದೇ ಅಧಿಕೃತವಾಗಿ ಕರೆದ ಎಂದು ನಂಬಲಾಗಿದೆ.

**'ಉರ್ದು' ಎಂದರೇನು ?**

ಉರ್ದು ಮೂಲತಃ ಟರ್ಕಿ ಮೂಲದ ಪದ.




'ತಾರೀಕ್–ಎ–ಉರ್ದು' ಗ್ರಂಥದ ಪ್ರಕಾರ 'ಉರ್ದು' ಪದಕ್ಕೆ ಇರುವ ಅರ್ಥಗಳೆಂದರೆ ಸೈನಿಕ ಶಿಬಿರ, ರಾಜರ ಸೇನೆ, ಸೈನ್ಯದ ಬೀಡು, ಛಾವಣಿ ಎಂಬಿತ್ಯಾದಿ. ಈ ಎಲ್ಲಾ ಅರ್ಥಗಳು ಉರ್ದುವಿಗೂ ಹಾಗೂ ಸೈನಿಕರಿಗೂ ಸಂಬಂಧವಿರುವುದನ್ನು ಸ್ಪಷ್ಟಪಡಿಸುತ್ತವೆ. ಆದಿಲ್‌ಷಾಹಿ ಹಾಗೂ ಮೊಘಲ್ ಸಾಮ್ರಾಜ್ಯದ ಸೈನಿಕರು ತಮ್ಮ ಅವಶ್ಯಕತೆಗಳಿಗಾಗಿ ಸ್ಥಳೀಯ ಸಮುದಾಯಗಳೊಂದಿಗೆ ವ್ಯವಹರಿಸುವಾಗ ಹೊಸದಾಗಿ ಹುಟ್ಟಿಕೊಂಡ ಭಾಷೆ ಉರ್ದು ಎಂಬುದು ಇದರಿಂದ ವಿಶದವಾಗುತ್ತದೆ.

**ಕನ್ನಡಕ್ಕೆ ಉರ್ದುವಿನ ಕೊಡುಗೆ**

ಆಯಾ ಕಾಲದ ತಮ್ಮ ಅವಶ್ಯಕತೆಗಳಿಗಾಗಿ ಭಾಷೆಗಳು ಇನ್ನೊಂದು ಭಾಷೆಯಿಂದ ತಮ್ಮ ಪದಸಂಪತ್ತನ್ನು ಪಡೆದುಕೊಳ್ಳುತ್ತಲೇ ಇರುತ್ತವೆ. ಈ ಪ್ರಕ್ರಿಯೆ ಯಾವತ್ತಿನಿಂದಲೂ ನಡೆದುಬಂದಿದೆ, ನಡೆಯುತ್ತಿರುತ್ತದೆ. ದಖ್ಖನಿ ಉರ್ದುವನ್ನು ಕನ್ನಡ, ಮರಾಠಿ ಪದಗಳು ಪುಷ್ಟಗೊಳಿಸಿದಂತೆಯೇ ಉರ್ದು ಮೂಲಕ (ವಿಶೇಷವಾಗಿ ಇವು ಪಾರಸಿ ಮೂಲದ ಪದಗಳು) ಅನೇಕ ಪದಗಳು ಕನ್ನಡದ ಭಾಷಾ ಸಂಪತ್ತನ್ನು ಸಮೃದ್ಧಗೊಳಿಸಿವೆ. ಅಸಲು, ಅಹವಾಲು, ಅಮೀರ, ಅಬ್ಕಾರಿ, ಇಲಾಖೆ, ಇನಾಂ, ತಾರೀಖು, ತಹಸೀಲ್ದಾರ, ತಾಲ್ಲೂಕು ಕಛೇರಿ, ಕೋಮು, ಕಿಮ್ಮತ್, ಕಿಸ್ಮತ್, ಕೈದಿ, ಕುರ್ಸಿ, ಮೇಜು, ಚೌಕಾಸಿ, ಜಮಾ, ಜಮೀನು, ಜಾಮೀನು, ಜಿಲ್ಲಾಧಿಕಾರಿ, ವಕಾಲತ್ತು, ಸಲಾಮು, ಮುಲಾಮು, ಸುಲ್ತಾನ, ಷರಾ, ಷರತ್ತು, ಜವಾಬ್, ಜವಾಬ್ದಾರ ಹೀಗೆ ನೂರಾರು ಪದಗಳು ಕನ್ನಡ, ಅದರಲ್ಲಿಯೂ ಮುಖ್ಯವಾಗಿ ರೆವಿನ್ಯೂ ಇಲಾಖೆಯ ಪಾರಿಭಾಷಿಕ ಸಂಪತ್ತನ್ನು ಸಮೃದ್ಧಗೊಳಿಸಿವೆ.

**ಕನ್ನಡಕ್ಕೆ ಬೆನ್ನು ಹಾಕುತ್ತಿರುವ ಮುಸ್ಲಿಮರು**

ಕರ್ನಾಟಕದ ಮುಸ್ಲಿಮರು ಆದಿಯಿಂದಲೂ ತಮ್ಮ ಶೈಕ್ಷಣಿಕ ಹಾಗೂ ವ್ಯಾವಹಾರಿಕ ಭಾಷೆಯಾಗಿ ಕನ್ನಡದೊಂದಿಗೆ ಇದ್ದವರು. ಆದರೆ ಇತ್ತೀಚಿನ ಹಲವು ದಶಕಗಳಿಂದ ಅವರು ಉರ್ದುವಿನತ್ತ ಸರಿಯುತ್ತಿದ್ದಾರೆ. ಶತಮಾನಗಳಿಂದ ಸ್ಥಳೀಯ ಭಾಷೆಯೊಂದಿಗೆ ಭಾವನಾತ್ಮಕವಾಗಿ ಬೆಸೆದು ಒಂದಾಗಿದ್ದ ನಾಡಿನ ಬಹುಸಂಖ್ಯಾತ ಸಮುದಾಯವೊಂದು ಇದ್ದಕ್ಕಿದ್ದಂತೆ ಕನ್ನಡಕ್ಕೆ ಬೆನ್ನು ತಿರುಗಿಸಿ ಉರ್ದುವಿನತ್ತ ಮುಖ ಮಾಡಿರುವುದರ ಹಿಂದಿನ ಕಾರಣಗಳೇನು ? ಇಂದು ಈ ವಿಷಯ ಗಂಭೀರ ಚರ್ಚೆಗೆ ಒಳಪಡಬೇಕಾದ ಸನ್ನಿವೇಶ ನಿರ್ಮಾಣಗೊಂಡಿದೆ. ವಿಶೇಷವಾಗಿ, ಕರ್ನಾಟಕದ ಸುನ್ನಿಯೇತರ ಮುಸ್ಲಿಮ್ ಸಮುದಾಯಗಳಾಗಿರುವ ಮಲಬಾರಿಯವರ ಮನೆ ಮಾತು ಮಲೆಯಾಳಿಯಾಗಿದ್ದರೂ ವ್ಯಾವಹಾರಿಕವಾಗಿ, ಶೈಕ್ಷಣಿಕವಾಗಿ ಹಾಗೂ ಧಾರ್ಮಿಕ ಪ್ರವಚನಗಳಿಗೆ ಅವರು ಕನ್ನಡವನ್ನೇ ಆಶ್ರಯಿಸಿದ್ದಾರೆ. ಕರ್ನಾಟಕ ಬ್ಯಾರಿ, ಶಿಯಾ ಮೊದಲಾದ ಅನೇಕ ಸಮುದಾಯದವರು ಉರ್ದುವನ್ನು ತಮ್ಮ ಮತೀಯ ಭಾಷೆಯೆಂದು ಯಾವತ್ತೂ ಒಪ್ಪಿಲ್ಲ. ಪಿಂಜಾರ ಮುಸ್ಲಿಮರು ಆದಿಯಿಂದ ಇಂದಿನವರೆಗೂ ಕನ್ನಡವನ್ನೇ ತಮ್ಮ ಮಾತೃಭಾಷೆಯಾಗಿ ಅನುಸರಿಸಿಕೊಂಡು ಬಂದಿದ್ದಾರೆ. ಉರ್ದುವಿನ ಗಂಧಗಾಳಿಯೂ ಅವರನ್ನು ಸೋಂಕಿಲ್ಲ. ಕರ್ನಾಟಕದ ಒಟ್ಟು ಜನಸಮುದಾಯದ ಶೇಕಡ ೧೧.೨೧ರಷ್ಟಿರುವ ಮುಸ್ಲಿಮ್ ಸಮಾಜದ ಬಹುಸಂಖ್ಯಾತ ಸಮಾಜವಾಗಿರುವ ಸುನ್ನಿ ಜನಾಂಗ (ಹನಫಿ ಮುಸ್ಲಿಮರು) ಉರ್ದು ಭಾಷೆಯ ವಿಪರೀತ ಆಕರ್ಷಣೆಗೆ ಒಳಗಾಗಿದ್ದಾರೆ.

**ಕೆಲವು ತಪ್ಪು ಕಲ್ಪನೆಗಳು**

ಇದಕ್ಕೆ ಬಹುಮುಖ್ಯ ಕಾರಣ 'ಉರ್ದು ಮುಸ್ಲಿಮರ ಭಾಷೆ ಹಾಗೂ ಅದು ತಮ್ಮ ಧರ್ಮದ ಭಾಷೆ' ಎಂಬ ಅಪಕಲ್ಪನೆ. ಉರ್ದು ಯಾವತ್ತೂ ಮತೀಯ ಭಾಷೆ ಆಗಿರಲಿಲ್ಲ. ಅದು ದೇಶದಲ್ಲಿ ಮುಖ್ಯವಾಗಿ ಕನ್ನಡನಾಡಿನಲ್ಲಿ ಹುಟ್ಟಿ ವಿಕಾಸಗೊಂಡು ಬೆಳೆದುಬಂದಿರುವ ಒಂದು ಸುಂದರ ಸುಮಧುರ ಭಾಷೆ. ಜನಭಾಷೆಗಳಿಗೆ ಜನ್ಮ ನೀಡಿರುವ ಈ ದೇಶದ ಮಣ್ಣಿನ ಭಾಷೆ. ಹಿಂದೂ ಮುಸ್ಲಿಮರಾದಿಯಾಗಿ ಅನೇಕ ಜಾತಿ ಧರ್ಮಗಳ ಜನ ಉರ್ದುವನ್ನು ಕಟ್ಟಿ ಬೆಳೆಸಿದ್ದಾರೆ. ಕರ್ನಾಟಕದ ಮಾಜಿ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಉರ್ದುವಿನಲ್ಲಿ ಸೊಗಸಾಗಿ ಮಾತನಾಡುತ್ತಿದ್ದರು. ವೀರೇಂದ್ರ ಪಾಟೀಲ್, ಧರಂಸಿಂಗ್ ಅವರ ಮನೆ ಮಾತು ಉರ್ದು. ರಾಜೇಂದ್ರಸಿಂಗ್ ಬೇಡಿ, ಪ್ರೇಮಚಂದ್ ಉರ್ದು ಸಾಹಿತ್ಯವನ್ನು ಬೆಳೆಸಿದ್ದಾರೆ. ಕನ್ನಡದ ಶಾಂತರಸ, ಪಂಚಾಕ್ಷರಿ ಹಿರೇಮಠ್, ದೇವೇಂದ್ರಕುಮಾರ್ ಹಕಾರಿ ಮೊದಲಾದವರು ಉರ್ದುವಿನಲ್ಲಿ ಸಾಹಿತ್ಯ ರಚಿಸಿದ್ದಾರೆ. ಹೀಗಿರುವಾಗ ಉರ್ದು ಮುಸ್ಲಿಮರ ಭಾಷೆ ಎಂಬ ಮಾತಿಗೆ ಅರ್ಥ ಇದೆಯೇ ?

ದೇಶವಿಭಜನೆಯ ಬಳಿಕ ಪಾಕಿಸ್ತಾನ ತನ್ನ ರಾಷ್ಟ್ರೀಯ ಭಾಷೆಯಾಗಿ ಉರ್ದುವನ್ನು ಘೋಷಿಸಿದ್ದು ತಮ್ಮ ಅನುಕರಣೆಯ ಮಾದರಿಯೆಂದು ಆ ದೇಶದತ್ತ ಮುಖ ಮಾಡಿರುವ ಇಲ್ಲಿಯ ಕೆಲವು ಮತೀಯವಾದಿಗಳ ಭಾಷಾಂಧತೆ ಹಾಗೂ ಪಾರಸಿ

ಲಿಪಿಯನ್ನು ಅನುಸರಿಸಿರುವ ಉರ್ದು ಮತ್ತು ತನ್ನ ಸಮುದಾಯವನ್ನು ಇತರ ಜಾತಿ, ಧರ್ಮಗಳಿಂದ ಪ್ರತ್ಯೇಕಿಸುವ ಹಾಗೂ ಅದರ ಪಾವಿತ್ರ್ಯವನ್ನು ಕಾಪಾಡಿಕೊಳ್ಳಬೇಕೆಂಬ ಮನಃಸ್ಥಿತಿಯೂ ಇದರ ಹಿಂದೆ ಬಲವಾಗಿ ಕೆಲಸ ಮಾಡಿರುವುದನ್ನು ಗಮನಿಸಬೇಕು. ಸ್ವಾತಂತ್ರ್ಯಾನಂತರ ಆಡಳಿತಕ್ಕೆ ಬಂದಿರುವ ಎಲ್ಲ ರಾಜಕೀಯ ಪಕ್ಷಗಳು ತಮ್ಮ ಮತ ರಾಜಕಾರಣಕ್ಕಾಗಿ ಉರ್ದು ಹಾಗೂ ಮುಸ್ಲಿಮರನ್ನು ಒಂದೇ ಎಂಬಂತೆ ಬಿಂಬಿಸುತ್ತ ಉರ್ದು ಮಾಧ್ಯಮ ಶಾಲೆಗಳನ್ನು ಸ್ಥಾಪಿಸಿ ಅವರನ್ನು ದ್ವೀಪಗಳನ್ನಾಗಿ ಮಾಡಿದ್ದಾರೆ. ಉರ್ದು ಸಾಹಿತ್ಯ ಅಕಾಡೆಮಿಯನ್ನು ರದ್ದುಗೊಳಿಸಿ ಅದನ್ನು ವಕ್ಫ್ ಬೋರ್ಡಿಗೆ ಸೇರಿಸಬೇಕೆಂಬ ಪ್ರಯತ್ನ ಕೂಡ ಅದರ ಮುಂದುವರಿದ ರಾಜಕಾರಣದ ಭಾಗವೇ ಆಗಿದೆ. ಆದರೆ ಉರ್ದು ಭಾಷೆಯ ಬಗ್ಗೆ ಹಲವು ಶತಮಾನಗಳ ಹಿಂದೆ ಮುಸ್ಲಿಮರು ಯಾವ ಭಾವನೆಯನ್ನು ತಾಳಿದ್ದರು ? ಅದೊಂದು ಕಾಫಿರ್ ಭಾಷೆ ಎಂಬ ಭಾವನೆ ಅವರಲ್ಲಿತ್ತು. ಅರಬ್ಬಿ ಭಾಷೆಯಲ್ಲಿದ್ದ ಪವಿತ್ರ ಕುರ್‌ಆನ್ ಗ್ರಂಥದ ಮೊದಲ ಉರ್ದು ಅನುವಾದ ೧೯೭೧ರಲ್ಲಿ ಬಂದಾಗ ಅನುವಾದಕನ ವಿರುದ್ಧ 'ಫತ್ವಾ' ಹೊರಡಿಸಲಾಯಿತು. ಅದೊಂದು 'ಅಸಂಸ್ಕೃತರ ಭಾಷೆ' ಎಂಬುದು ಅವರ ಆಕ್ಷೇಪವಾಗಿತ್ತು.

**ಭಾಷೆ ಮತ್ತು ಸೌಹಾರ್ದತೆ**

ವಿಶ್ವದ ಬಹುಸಂಖ್ಯಾತ ಮುಸ್ಲಿಮರು ಅರಬ್ಬಿ, ಪಾರಸಿ, ಬಂಗಾಲಿ, ಮಲೇಸಿ ಮೊದಲಾದ ಭಾಷೆಗಳನ್ನು ಮಾತನಾಡುತ್ತಾರೆ. ಮಧ್ಯಪ್ರಾಚ್ಯ ದೇಶದ ಯಾವ ಮುಸ್ಲಿಮರಿಗೂ ಉರ್ದುವಿನ ಗಂಧಗಾಳಿ ಇಲ್ಲ. ಭಾರತೀಯ ಮುಸ್ಲಿಮರು ಆಯಾ ರಾಜ್ಯಗಳ ಸ್ಥಳೀಯ (ಪ್ರಾದೇಶಿಕ) ಭಾಷೆಗಳನ್ನು ಒಪ್ಪಿದ್ದಾರೆ. ತಮಿಳುನಾಡಿನ ಎಲ್ಲ ಜಾತಿ, ವರ್ಗದ ಜನ ತಮಿಳನ್ನು, ಕೇರಳದಲ್ಲಿ ಮಲೆಯಾಳಿಯನ್ನು, ಆಂಧ್ರದಲ್ಲಿ ತೆಲುಗನ್ನು – ಹೀಗೆಯೇ ಹಿಂದಿ, ಅಸ್ಸಾಮಿ, ಬಂಗಾಲಿ ಮುಂತಾಗಿ... ಯಾವ ಸಮುದಾಯಗಳು ಪ್ರಾದೇಶಿಕ ಭಾಷೆಯೊಂದಿಗೆ ಒಡನಾಡುತ್ತ ಬೆಳೆದು ಬಂದಿವೆಯೋ ಅಲ್ಲೆಲ್ಲಾ ಕೋಮುಗಲಭೆ ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆಯಿರುವುದನ್ನು ಗಮನಿಸಬೇಕು. ಆಯಾ ರಾಜ್ಯಭಾಷೆಗಳನ್ನು ಒಪ್ಪಿರುವ ಜನ ಆ ನೆಲದ ಸಾಂಸ್ಕೃತಿಕ ನುಡಿಗಟ್ಟಿನೊಂದಿಗೆ ಒಂದಾಗಿದ್ದಾರೆ. "ಜಾತಿ, ಧರ್ಮಗಳು ಉಂಟುಮಾಡಿರುವ ತಾರತಮ್ಯ, ದ್ವೇಷ, ಅಪನಂಬಿಕೆ, ಮಾನಸಿಕ ಅಂತರವನ್ನು ದೂರ ಮಾಡಿ ಎಲ್ಲರನ್ನೂ ಒಂದಾಗಿ ಹಿಡಿದಿಡುವ ಶಕ್ತಿಯಿರುವುದು ಭಾಷೆಗೆ ಮಾತ್ರ. "ಒಂದು ರಾಷ್ಟ್ರದ ಜನರನ್ನು ಏಕತೆಯಿಂದ ಹಿಡಿದಿಡುವುದು ಭಾಷೆಗೆ ಮಾತ್ರ ಸಾಧ್ಯ" ಎನ್ನುತ್ತಾರೆ ಪ್ರೇಮಚಂದ್. ರಾಷ್ಟ್ರ ಹಾಗೂ ತಾವು ನಿಂತ ನೆಲವನ್ನು ಚಿರಕಾಲ ಜನರು ಪ್ರೀತಿಸುವಂತೆ ಮಾಡುವ ಶಕ್ತಿ ಕೂಡ ಭಾಷಾ ಬಾಂಧವ್ಯದಿಂದ ಸಾಧ್ಯವಾಗುತ್ತದೆ.

ಈವರೆಗಿನ ಸೂಫಿಸಂತರು, ದರ್ಗಾ ಸಂಸ್ಕೃತಿಗಳನ್ನು ನಾಶಮಾಡುತ್ತಿರುವ ನವ ಧಾರ್ಮಿಕ ಮೂಲಭೂತವಾದಿಗಳು ಇಂದು ಧರ್ಮದ ಹೆಸರಿನಲ್ಲಿ, ಕರ್ನಾಟಕದ ನೆಲದಲ್ಲಿ ಹುಲುಸಾಗಿ ಬೆಳೆದುನಿಂತಿದ್ದ ಭಾವೈಕ್ಯತೆಯ ಫಸಲನ್ನು ಭಾಷೆಯನ್ನು ಮುಂದಿಟ್ಟುಕೊಂಡು ನಾಶಮಾಡಲು ಹೊರಟಿದ್ದಾರೆ. ಸೌಹಾರ್ದತೆಯ ಮೂಲವಿರುವುದು ಸರ್ವಧರ್ಮ ಸಮ್ಮೇಳನಗಳಲ್ಲಿ ಅಥವಾ ಬಹಿರಂಗದ ಸೋಗಲಾಡಿ ಸಮಾರಂಭಗಳಲ್ಲಿ ಅಲ್ಲ. ಬದಲಿಗೆ, ಆಯಾ ನಾಡಿನ ಜನ ಮಾತನಾಡುವ ಪ್ರಾದೇಶಿಕ ಭಾಷೆಯ ಅನುಸಂಧಾನದ ಹಾದಿಯಲ್ಲಿ ಎಂಬುದನ್ನು ಹೇಳಬೇಕಾಗಿದೆ. ಸ್ಥಳೀಯ ಭಾಷೆಯನ್ನು ಕಲಿಯುವುದರಿಂದ ಭಾವನಾತ್ಮಕವಾದ ಸಂಬಂಧಗಳನ್ನು ಬಲಪಡಿಸಿಕೊಳ್ಳುವುದರೊಂದಿಗೆ ತಮ್ಮ, ತಮ್ಮ ಧರ್ಮದ ಅಸ್ಮಿತೆಯನ್ನು ಕಾಪಾಡಿಕೊಳ್ಳಲು ಸಾಧ್ಯ ಎಂಬುದನ್ನು ತಿಳಿಸಿಹೇಳಬೇಕಾಗಿದೆ. ಈ ಸತ್ಯವನ್ನು ಕುರಿತು ಗಟ್ಟಿದನಿಯಲ್ಲಿ ಮಾತನಾಡಬೇಕಾಗಿದ್ದ ಕನ್ನಡ ಸಾಹಿತ್ಯ ಪರಿಷತ್ತು, ಪ್ರಾಧಿಕಾರ, ಸಂಸ್ಕೃತಿ ಇಲಾಖೆ, ಅಕಾಡೆಮಿಗಳು, ವಿಶ್ವವಿದ್ಯಾಲಯಗಳ ಕನ್ನಡ ಅಧ್ಯಯನ ಕೇಂದ್ರಗಳು, ನಾಡಿನ ಬುದ್ಧಿಜೀವಿಗಳು ತಮಗೂ, ಉರ್ದು ಮುಸ್ಲಿಮರಿಗೂ ಯಾವ ಸಂಬಂಧವೂ ಇಲ್ಲ ಎಂಬಂತೆ ಮುಗುಮ್ಮಾಗಿ ಉಳಿದುಬಿಟ್ಟಿದ್ದಾರೆ. ಉರ್ದು ಭಾಷೆಯ, ಅದರಲ್ಲಿಯೂ ವಿಶೇಷವಾಗಿ ಉರ್ದು ಮಾಧ್ಯಮ ಶಿಕ್ಷಣದಿಂದಾಗಿ ಸ್ಥಳೀಯ ಮುಸ್ಲಿಮರು ಮುಖ್ಯವಾಹಿನಿಯಿಂದ ದೂರ ಚಲಿಸಿ 'ದ್ವೀಪ'ಗಳಾಗುತ್ತಿದ್ದಾರೆ. ಹೀಗೆ ನಮ್ಮೊಡನಿದ್ದೂ ನಮ್ಮಂತಾಗದ ಜನಸಮುದಾಯದ ಭಾಷಿಕ ಸಮಸ್ಯೆಗಳ ಬಗ್ಗೆ ಕರ್ನಾಟಕದ ವಿದ್ವತ್ ವಲಯದಲ್ಲಿ ಬಹುದೊಡ್ಡ ಅವಜ್ಞೆಯೇ ಹುಟ್ಟಿಕೊಂಡಿರುವುದು ಆಶ್ಚರ್ಯದ ಸಂಗತಿಯಾಗಿದೆ.

ಅನ್ನವಿಲ್ಲ, ಉದ್ಯೋಗವಿಲ್ಲ, ಶಿಕ್ಷಣವಿಲ್ಲ, ಕನಿಷ್ಠ ಸ್ವಂತ ಸೂರೂ ಇಲ್ಲದ (ನಗರಕೇಂದ್ರಿತ ಬಹುಸಂಖ್ಯಾತ ಮುಸ್ಲಿಂ ಕುಟುಂಬಗಳಿಗೆ ಸ್ವಂತ ಮನೆಯೆಂಬುದೇ ಇಲ್ಲ) ದಯನೀಯ ಸ್ಥಿತಿಯಲ್ಲಿರುವ ತಮ್ಮ ಸಮುದಾಯದ ವಾಸ್ತವ ಸಮಸ್ಯೆಗಳಿಗೆ ಸ್ಪಂದಿಸಬೇಕಾಗಿದ್ದ ಪ್ರಜ್ಞಾವಂತ ಮುಸ್ಲಿಮರು ಈ ಸಮಸ್ಯೆಗಳಿಗೂ, ತಮಗೂ ಯಾವ ಸಂಬಂಧವೂ ಇಲ್ಲ ಎನ್ನುವಂತೆ ಕರ್ನಾಟಕದಲ್ಲಿ ಉರ್ದು ಭಾಷೆಯ ಪ್ರಚಾರ ಕಾರ್ಯ, ವೈಯಕ್ತಿಕ ಕಾನೂನು, ಹಿಂದೂ ಮೂಲಭೂತವಾದ ಎಂಬಿತ್ಯಾದಿ ಮತ್ತದೇ ವಿಷಯಗಳ ಸುತ್ತ ಚರ್ವಿತಚರ್ವಣದಲ್ಲಿ ತೊಡಗಿದ್ದಾರೆ. ಕರ್ನಾಟಕವೂ ಸೇರಿದಂತೆ ಭಾರತೀಯ ಮುಸ್ಲಿಮರ ಬದುಕು ಈ ದೇಶದ ಪರಿಶಿಷ್ಟ ಜಾತಿ ಜನಾಂಗಗಳಿಗಿಂತ ಹೀನಾಯವಾಗಿದೆ ಎಂಬ ಸಾಚಾರ್ ವರದಿ, ರಂಗನಾಥ ಮಿಶ್ರಾ ಆಯೋಗಗಳು ಹೊರಹಾಕಿರುವ ಕಹಿ ಸತ್ಯಗಳು ಅವರನ್ನು ವಿಚಲಿತಗೊಳಿಸಿಲ್ಲ, ಆಘಾತಗೊಳಿಸಿಲ್ಲ.

ಯಾವುದೇ ಭಾಷೆಯನ್ನು ಜಾತಿ, ಧರ್ಮಗಳೊಂದಿಗೆ ತಳುಕು ಹಾಕಬಾರದು. ಹೀಗೆ ಮಾಡುವುದು ಅದರ ಸಾಂಸ್ಕೃತಿಕ ಬೆಳವಣಿಗೆಯ ದೃಷ್ಟಿಯಿಂದ ತುಂಬ ಅಪಾಯಕಾರಿ. ಉರ್ದುವನ್ನು ಮುಸ್ಲಿಮರೊಂದಿಗೆ ಗುರುತಿಸುವುದರಿಂದ ಉರ್ದುವಿಗೂ ಅಪಾಯವುಂಟು, ಅಂತೆಯೇ ಕನ್ನಡಕ್ಕೂ ಸಹ. ಕನ್ನಡ ಕಲಿಯುವುದರಿಂದ, ಮಾತನಾಡುವುದರಿಂದ ಅವರ ಧಾರ್ಮಿಕ ಪಾವಿತ್ರ್ಯಕ್ಕೇನೂ ಧಕ್ಕೆಯಾಗದು. ಆದ್ದರಿಂದ ಕನ್ನಡದ ಬಗೆಗಿರುವ ಅಸ್ಪೃಶ್ಯತಾ ಭಾವನೆಯಿಂದ ಈ ಸಮುದಾಯ ಹೊರಬರಬೇಕಾಗಿದೆ. ತಾವು ಸೈದ್ಧಾಂತಿಕವಾಗಿ ವಿರೋಧಿಸುವ ಕ್ರೈಸ್ತಮತೀಯರ ಜತೆಗೆ ಬಂದಿರುವ ಇಂಗ್ಲಿಷ್ ಭಾಷೆಯ ಕಲಿಕೆ, ಕಾನ್ವೆಂಟ್ ಶಿಕ್ಷಣ, ಇಂಗ್ಲಿಷ್‌ನಲ್ಲಿ ಮದುವೆ ಕರೆಯೋಲೆ ಪತ್ರಗಳನ್ನು ಮುದ್ರಿಸಿ ಹಂಚುವಲ್ಲಿ ತೋರುವ ಉತ್ಸಾಹ ಹಾಗೂ ಇಂಗ್ಲಿಷ್ ಭಾಷೆಯ ಬಗೆಗೆ ಯಾವ ವಿರೋಧವನ್ನೂ ವ್ಯಕ್ತಪಡಿಸದ ಮುಸ್ಲಿಂ ಸಮುದಾಯದ ಒಂದು ವರ್ಗ ಕನ್ನಡದ ಬಗ್ಗೆ ತಾತ್ಸಾರ ಮನೋಭಾವ ತೋರುವುದು ತುಂಬ ವಿಚಿತ್ರ ಎನ್ನಿಸುತ್ತದೆ. ಉರ್ದು ಭಾಷಾ ರಾಜಕಾರಣದ ಹಿಂದಿನ ಅಪಾಯಗಳನ್ನು ಸ್ವತಃ ಮುಸ್ಲಿಮರು ಅರ್ಥಮಾಡಿಕೊಳ್ಳಬೇಕಾಗಿದೆ. ಕನ್ನಡವನ್ನು ಕಡೆಗಣಿಸಿ ಉರ್ದುವಿನತ್ತ ಚಲಿಸುವುದು ಆತ್ಮಘಾತುಕ ನಡೆಯಾಗುತ್ತದೆ. ಅಷ್ಟೇ ಅಲ್ಲ, ಭವಿಷ್ಯದಲ್ಲಿ ಅವರ ಹಿತಾಸಕ್ತಿಗೆ ಮಾರಕವಾಗಬಹುದು. ಇದರಿಂದ ಪ್ರಜಾಪ್ರಭುತ್ವದ ಜಾತ್ಯತೀತ ಸ್ವರೂಪಕ್ಕೂ ಧಕ್ಕೆಯಾಗಬಹುದು. ಆದ್ದರಿಂದ ಉರ್ದುವನ್ನು ಧಾರ್ಮಿಕ ಭಾಷೆಯಾಗಿ ಪ್ರಚುರಪಡಿಸುತ್ತಿರುವ ಪ್ರಯತ್ನವನ್ನು ನಾಡಿನ ಪ್ರಜ್ಞಾವಂತರು ವಿರೋಧಿಸಬೇಕಾಗಿದೆ. ಉರ್ದು ಮಾಧ್ಯಮದ ಹಿಂದೆ ಬಿದ್ದು ಹೈಸ್ಕೂಲ್ ನಂತರದ ಶಿಕ್ಷಣ ಮಾಧ್ಯಮದ ಸಮಸ್ಯೆಯನ್ನು ಎದುರಿಸಲಾಗದೆ ಅನುತ್ತೀರ್ಣರಾಗುತ್ತಿರುವ, ಶಾಲೆ ಬಿಡುತ್ತಿರುವ ಮುಸ್ಲಿಂ ಮಕ್ಕಳ ಶೈಕ್ಷಣಿಕ ಸಮಸ್ಯೆಗಳನ್ನು ಕುರಿತು ಚರ್ಚಿಸಬೇಕಾಗಿದೆ. ಪರ್ಯಾಯಗಳನ್ನು ಹುಡುಕಬೇಕಾಗಿದೆ. ಉರ್ದು ಮಾಧ್ಯಮ ಶಿಕ್ಷಣವನ್ನು ತಿರಸ್ಕರಿಸಿ ಕನ್ನಡ ಮಾಧ್ಯಮವನ್ನು ಒಪ್ಪಿಕೊಳ್ಳುವುದು ಮತ್ತು ಉರ್ದುವನ್ನು ಒಂದು ಭಾಷೆಯಾಗಿ ಕಲಿಸುವುದು ಹಾಗೂ ಮುಸ್ಲಿಮೇತರರಿಗೂ ಭಾಷೆಯಾಗಿ ಉರ್ದುವನ್ನು ಕಲಿಯಲು ಪ್ರೇರೇಪಿಸುವುದು ಇಂದಿನ ಜರೂರುಗಳಲ್ಲಿ ಒಂದು. ತನ್ಮೂಲಕ ಕರ್ನಾಟಕದ ಮುಸ್ಲಿಮರಿಗೂ, ಕನ್ನಡಕ್ಕೂ ಹಿಂದೆ ಇದ್ದ ಸಂಬಂಧವನ್ನು ಮರುಸ್ಥಾಪಿಸುವ ಒಂದು ಅರ್ಥಪೂರ್ಣ ಹಾಗೂ ಪ್ರಾಮಾಣಿಕವಾದ ಪ್ರಯತ್ನ ಮಾಡಿದಂತಾಗುತ್ತದೆ.

**ಡಾ॥ ಸರ್ಫ್ರಾಜ್ ಚಂದ್ರಗುತ್ತಿ**
ಕನ್ನಡ ಉಪನ್ಯಾಸಕರು, ೮ನೇ ತಿರುವು, ನೆಹರೂ ನಗರ, ಸಾಗರ–೫೭೭೪೦೧, ಶಿವಮೊಗ್ಗ ಜಿ.

ನಾನು ಓದಿದ ಪುಸ್ತಕ

**ಡಾ॥ ಬಾಳಣ್ಣ ಶೀಗೀಹಳ್ಳಿ**

# ದೇವರು ಬಂದಾನ್ಗೇ

'ದೇವರು ಬಂದಾನ್ಗೇ' – ಈ ಕೃತಿಯನ್ನು 'ಕುವೆಂಪು ನೂರೆಂಟು ನೆನಪು' ಮಾಲಿಕೆ ಅಡಿಯಲ್ಲಿ (೨೦೧೧) ಸಿವಿಜಿ ಇಂಡಿಯಾ ಪ್ರಕಟಿಸಿದೆ. ಕುರುಬ ಜನಾಂಗದ ಸುಮಾರು ೬೦ ವರ್ಷದ ಹಿರಿಯ ಧೂಳಿಕೊಪ್ಪದ ಶಿವಪ್ಪ ವಾಸಪ್ಪ ಹಾಡುತ್ತಿದ್ದ ಡೊಳ್ಳಿನ ಹಾಡುಗಳಲ್ಲಿ ೪೮ ಹಾಡುಗಳನ್ನು ಮಾತ್ರ ಆಯ್ದು ಸಂಪಾದಿಸಿಕೊಟ್ಟವರು ಪ್ರಸ್ತುತ ಕೇರಳದ ತಿರುವನಂತಪುರದಲ್ಲಿರುವ ಕಮಲಾ ಹೆಮ್ಮಿಗೆ ಅವರು. ಈ ಮುಂಚೆ ಧಾರವಾಡದಲ್ಲಿ ನೆಲೆಸಿದ್ದ ಅವರಿಗೆ ಉತ್ತರ ಕರ್ನಾಟಕದ ಭಾಷೆ, ಕಲೆ, ಸಂಸ್ಕೃತಿಗಳ ವಿಷಯದಲ್ಲಿ ಆಸಕ್ತಿ ಬೆಳೆದುದು ಸ್ವಾಭಾವಿಕವಾಗಿದೆ. ಈ ಆಸಕ್ತಿಯ ಫಲಶ್ರುತಿ ಈ ಸಂಕಲನ. ಸಂಪಾದಕಿಯಾಗಿ 'ಪ್ರಸ್ತಾವನೆ'ಯ ಮಾತುಗಳಲ್ಲಿ ಕಮಲಾ ಅವರು, ಅಭಿವೃದ್ಧಿಯ ಹೆಸರಿನಲ್ಲಿ ಜಾಗತೀಕರಣ, ಉದಾರೀಕರಣ, ಖಾಸಗೀಕರಣಗಳೆಂಬ ನವವಸಾಹತುಶಾಹಿಯ ಬಲೆಯಲ್ಲಿ ಸಿಕ್ಕಿಕೊಂಡಿರುವ ಭಾರತ; ತನ್ನ ಸಾಂಸ್ಕೃತಿಕ ಅಸ್ಮಿತೆಯನ್ನು ಕಳೆದುಕೊಳ್ಳುತ್ತಿರುವ ತಲ್ಲಣಗಳ ಅವನತಿಮುಖಿ ಪಲ್ಲಟಗಳ ಮಧ್ಯೆಯೇ ತುಂಬ ಅಪಾಯಕಾರಿಯಾದ 'ಏಕಮುಖಿ', ಏಕಾಕಾರದ ಸಂಸ್ಕೃತಿಯನ್ನು ರತ್ನಗಂಬಳಿ ಹಾಸಿ ಮನೆ ತುಂಬಿಸಿಕೊಳ್ಳುತ್ತಿರುವ ಇವತ್ತಿನ ಸಂದರ್ಭದಲ್ಲಿ ತನ್ನ 'ಸಾಂಸ್ಕೃತಿಕ ಬಹುತ್ವ'ವನ್ನು ನಿರೂಪಿಸುವ ನೆಲಮೂಲ ಸಂಸ್ಕೃತಿಯನ್ನು ದಾಖಲಿಸುವ, ದೃಶ್ಯೀಕರಿಸುವ, ಪ್ರದರ್ಶಿಸುವ, ಪ್ರಸಾರಗೊಳಿಸುವ ಜರೂರು ತುಂಬ ಇದೆ. ಇದನ್ನು ಮನಗಂಡಿರುವ ಕಮಲಾ ಅವರು ಕುರುಬ ಜನಾಂಗದ ನಂಬಿಕೆ, ಆಚರಣೆ, ಆಶೋತ್ತರಗಳನ್ನು ಬಿಂಬಿಸುವ ಡೊಳ್ಳಿನ ಹಾಡುಗಳನ್ನು ದಾಖಲಿಸುವ ಮೂಲಕ ಸ್ತುತ್ಯ ಕಾರ್ಯ ಮಾಡಿದ್ದಾರೆ. "ಓಸೂಜ್ವಾಳವನೆಲ್ಲ ಗಿರಣೀಗೆ ಒಯ್ದಾರ ಕಲ್ಲೀಗಿ ಶರಣು ಎನಲಿಲ್ಲ" ಎನ್ನುವ ಗರತಿಹಾಡಿನ ಉಲ್ಲೇಖದೊಂದಿಗೆ 'ಆಧುನಿಕತೆ' ಹೇಗೆ ಕುಲಕಸಬುಗಳನ್ನು ಅವುಗಳೊಂದಿಗೆ ಬೆಸೆದುಕೊಂಡಿರುವ ಸಂಸ್ಕೃತಿಯನ್ನು ನಾಶಮಾಡುತ್ತಿದೆ ಎಂದು ಎತ್ತಿತೋರಿಸಿದ್ದಾರೆ. ಕಸಬುಗಳ ಒಡಲಲ್ಲಿ ಹುಟ್ಟುವ ಜನಪದ ಸಾಹಿತ್ಯ–ಸಂಸ್ಕೃತಿಗಳು, ಆ ಕಸಬುಗಳೇ ನಾಶವಾಗಿಬಿಟ್ಟರೆ ಅವು ಸದ್ದಿಲ್ಲದೆ ನಾಶವಾಗುತ್ತವೆ, ಇಲ್ಲವೆ ನಾಮಾವಶೇಷವಾಗಿ ಹೋಗುತ್ತವೆ. ಈ ಕಾರಣಕ್ಕೆ ಈ ಸಂಕಲನಕ್ಕೆ ಸಾಹಿತ್ಯಿಕ ಮಹತ್ವದ ಜೊತೆಗೆ ಸಾಂಸ್ಕೃತಿಕ ಮಹತ್ವವೂ ಇದೆ.

ಈ ಸಂಕಲನದ ಒಂದೊಂದು ಹಾಡೂ ತಮ್ಮ ವಸ್ತು, ಭಾಷೆ, ಶಿಲ್ಪ, ಚಿಂತನೆ, ಕಥನಕೌಶಲ, ಲಯಗಾರಿಕೆ, ನಿರೂಪಣೆಯ ಆಪ್ತತೆಯಿಂದಾಗಿ ನಮ್ಮನ್ನು ಚಕಿತಗೊಳಿಸುತ್ತವೆ. ಇಂಥ ಕೆಲವು ಪ್ರಾತಿನಿಧಿಕ ಮಾದರಿಗಳನ್ನು ಇಲ್ಲಿ ಗಮನಿಸಬಹುದು :

*ಮರಳಿ ಭವಕ್ಕೆ ಬರದಂತೆ ಮಾಡಿದ ಕೈಯ*  
*ಕರುಣಾಮೂರ್ತಿ ಪುರುಷಮಣಿಯ ಕೈಯ*  
.....................................................  
................................ *ಎಷ್ಟೋ ಕಷ್ಟಪಟ್ಟು*  
*ಜೋಪಾನ ಮಾಡಿದ ಕೈಯ*  
*ತೊಟ್ಟಿಲದಾಗ ಹಾಕಿ ಜೋಗುಳ್ಹಾಡೀ*  
*ತೂಗ್ಯಾಡಿದ ಕೈಯ*

*ಪುಟ್ಹೆಜ್ಜೆ ಇಟ್ಟು ನಡೆದಾಡುವಾಗ*  
*ರೆಟ್ಟೆ ಹಿಡಿದ ಕೈಯ*  
*ಬಟ್ಟೆ ತೊಡಿಸಿ ಕಾಡಿಗಿ ಬಟ್ಟಿಟ್ಟು*  
*ದಿಟ್ಟಿ ತೆಗೆದ ಕೈಯ*

*ಅನ್ನವನಿತ್ತಾಗ ಮನಿತನ ಬಂದು*  
*ಕರಕೊಂಡ್ಹೋದ ಕೈಯ*  
*ನುಣುಪಾದ ಹಲಿಗೆಯ ಮ್ಯಾಲೆ*  
*ಬರೆದುಕೊಟ್ಟ ಕೈಯ*  
............................  
............................

('ಕೈಯ್ಯ' – ಪು. ೨೩–೨೪)

– ಹೀಗೆ ಈ 'ಕೈಯ್' ತಾಯಿಯ ಅಂತಃಕರಣ, ಗುರುವಿನ ಅರಿವು ಅನುಗ್ರಹಿಸಿದ್ದಲ್ಲದೆ ಅದೇ 'ಕೈಯ್ಯ' "ಮರಳಿ ಭವಕ್ಕೆ ಬರದಂತೆ ಮಾಡಿ"ದ್ದನ್ನು ಉಪಕೃತ ಭಾವದಲ್ಲಿ ಇಲ್ಲಿ ಕೊಂಡಾಡಲಾಗಿದೆ. 'ಉಪಕಾರ ಸ್ಮರಣೆ' ಎನ್ನುವುದು ಜನಪದ ಸಂಸ್ಕೃತಿಯ ಸಾಪೇಕ್ಷ ಮೌಲ್ಯ. 'ಕೈಯ್ಯ' ಇಲ್ಲಿ ಹಲವು ಸಾಧ್ಯತೆಗಳ ಒಂದು ರೂಪಕವಾಗಿ ದುಡಿಯುತ್ತ ಸಾಮಾನ್ಯ ನೆಲೆಯಿಂದ ಅಸಾಮಾನ್ಯ ನೆಲೆಗೇರುವದನ್ನು ಗಮನಿಸುವ ಅಗತ್ಯವಿದೆ. ಸಾಹಿತ್ಯಶಾಸ್ತ್ರದ ಯಾವ ಪರಿಭಾಷೆಯ ಹಂಗೂ ಇಲ್ಲದ "ಕುರಿತೋದದ ಕಾವ್ಯ ಪರಿಣತಮತಿಗಳ್" ಆಗಿರುವ ಈ ಜನಪದ ಕವಿಗಳು ಯಾವ ಹಮ್ಮು–ಬಿಮ್ಮುಗಳಿಲ್ಲದ, ಬಿರುದು–ಬಾವಲಿಗಳನ್ನು ಬಯಸದ "ಹಾಡುವ ಹಕ್ಕಿಗಳು"




'ದೇವರು ಬಂದಾನ್ಗೇ' – ಈ ಕೃತಿಯನ್ನು 'ಕುವೆಂಪು ನೂರೆಂಟು ನೆನಪು' ಮಾಲಿಕೆ ಅಡಿಯಲ್ಲಿ (೨೦೧೧) ಸಿವಿಜಿ ಇಂಡಿಯಾ ಪ್ರಕಟಿಸಿದೆ. ಕುರುಬ ಜನಾಂಗದ ಸುಮಾರು ೬೦ ವರ್ಷದ ಹಿರಿಯ ಧೂಳಿಕೊಪ್ಪದ ಶಿವಪ್ಪ ವಾಸಪ್ಪ ಹಾಡುತ್ತಿದ್ದ ಡೊಳ್ಳಿನ ಹಾಡುಗಳಲ್ಲಿ ೪೮ ಹಾಡುಗಳನ್ನು ಮಾತ್ರ ಆಯ್ದು ಸಂಪಾದಿಸಿಕೊಟ್ಟವರು ಪ್ರಸ್ತುತ ಕೇರಳದ ತಿರುವನಂತಪುರದಲ್ಲಿರುವ ಕಮಲಾ ಹೆಮ್ಮಿಗೆ ಅವರು. ಈ ಮುಂಚೆ ಧಾರವಾಡದಲ್ಲಿ ನೆಲೆಸಿದ್ದ ಅವರಿಗೆ ಉತ್ತರ ಕರ್ನಾಟಕದ ಭಾಷೆ, ಕಲೆ, ಸಂಸ್ಕೃತಿಗಳ ವಿಷಯದಲ್ಲಿ ಆಸಕ್ತಿ ಬೆಳೆದುದು ಸ್ವಾಭಾವಿಕವಾಗಿದೆ. ಈ ಆಸಕ್ತಿಯ ಫಲಶ್ರುತಿ ಈ ಸಂಕಲನ.

ಎನ್ನುವದನ್ನು ಇಲ್ಲಿಯ ಅನೇಕ ಹಾಡುಗಳು ಸಮರ್ಥಿಸುತ್ತವೆ.

ಶಾಂತಿ, ಸಮತೆ, ಸೈರಣೆಯನ್ನು ಅವರ ಬದುಕಿನ ತತ್ವಶಾಸ್ತ್ರವೇ ಅವರಿಗೆ ಕಲಿಸಿದೆ. ಈ ಅನುಭೂತಿಯನ್ನು ಈ ಡೊಳ್ಳಿನ ಹಾಡುಗಾರರು ಇತರರಿಗೆ ಹೇಗೆ ಉಣಬಡಿಸುತ್ತಾರೆನ್ನುವದನ್ನು,

*ಒದಗಿದ ಸುಖದುಃಖ*
*ವಿಷಯಕ ಚಿಂತಿಸದೆ*
*ಶೋಧಿಸಿ ಹಾದಿ ಹಿಡೀ*
...............................
...............................
*ಮದಲಿನವ್ರಿಗಾದ ದುಃಖ ತಿಳಕೊಂಡು*
*ಶಾಂತಿಯ ಮಂತ್ರ ನುಡೀ ನುಡೀ*
..............................................
..............................................
..............................................

*ನವಖಂಡದ ಪೃಥ್ವಿಯೊಳಗೆ*
*ದೊರಿಯಾದ ರಾಜ ಹರಿಶ್ಚಂದ್ರ*
*ಸತ್ಯಕ್ಕಾಗಿ ಅವ ಹೋರಾಡಿದ*
*ಕಳ್ಕೊಂಡ ರಾಜ್ಯಮಾನ ಮೊದಲ್ಮಾಡಿ*
*ಕಾಯೊ ಕೆಲ್ಸ ಮಾಡಿದಪ್ಪ ಕಾಶಿಯಲಿ*
..................................................

*ಮರ್ತ್ಯದೊಳಗ ಹುಟ್ಟಿಬಂದಂಥವರ*
*ಪಾಲಿಗೆ ಬಂದದ್ದೂಟ ಮಾಡೀ*
*ಸುಳ್ಳ ಚಿಂತೀ ಮಾಡುವ ಬುದ್ಧಿಗೇಡೀ*
*ಮಾಡಿದ ಕರ್ಮಫಲದಂತೆ ಸುಖದುಖ್ಖ ಬರ್ತಾವ*
................................................
................................................

('ಶಾಂತಿಮಂತ್ರ' – ಪು. ೨೫–೨೬)

– ಎಂದು ಬದುಕಿನ ಏರಿಳಿತಗಳನ್ನು ಅತ್ಯಂತ ನಿರ್ಭಾವುಕ ನೆಲೆಯಲ್ಲಿ ನಿಂತು ಅವರು ವ್ಯಾಖ್ಯಾನಿಸಿಕೊಳ್ಳಬಲ್ಲರು. ಹರಿಶ್ಚಂದ್ರನಂತಹ ರಾಜನೇ "ರಾಜ್ಯ–ಮಾನ ಮೊದಲ್ಮಾಡಿ" ಸರ್ವಸ್ವವನ್ನೂ ಕಳಕೊಂಡು ಸುಡುಗಾಡು ಕಾಯ್ದನೆಂದಮೇಲೆ ಹುಲುಮಾನವರಾದ ತಮ್ಮ ಪಾಡೇನು ! ಆತ್ಮಸಂತೈಯಿಕೆ ಅವರದು. ಇಲ್ಲಿ ಸ್ವಯಂಬೋಧೆ, ಸಮಾಜ ಬೋಧೆಗಳೆರಡನ್ನೂ ಅವರು ಒಟ್ಟೊಟ್ಟಿಗೆ ಸಾಧಿಸುತ್ತಾರೆ.

ಕುಲಮೂಲ, ಕುಲದೈವಮೂಲ, ವ್ಯಕ್ತಿನೆಲೆಯ ಸಾಧನೆ, ಚರಿತ್ರಪುರುಷರ ಹೋರಾಟ, ಗುರು, ಶರಣರ ಮಹತ್ತು, ತತ್ವಬೋಧೆ, ನೀತಿಬೋಧೆ, ಕಥನಕಾವ್ಯ ಮಾದರಿಗಳು ಈ ಸಂಕಲನದ ಅಂತಃಸತ್ವವನ್ನು ತೆರೆದಿಡುತ್ತವೆ. ಇಂಥ ಆಶಯಗಳೆಲ್ಲವನ್ನೂ ಏಕೋನಿಷ್ಠೆಯಿಂದ ಕೃತಿಗೊಳಿಸಿದ ಕೌಶಲ್ಯವನ್ನು ಇನ್ನೂ ಕೆಲವು ಹಾಡುಗಳಿಂದ ಪರಿಭಾವಿಸಬಹುದಾಗಿದೆ :

*ಮಾನವ ಜಲ್ಮದ*
*ಗುರ್ತಾ ಹಿಡೀ ತಮ್ಮ*
*ಇದೇ ಜಲ್ಮ ಕಡೆ*
............................
............................
*ಕರ್ಮದ ಗಿಡಾ ಕಡೀ*
.............................
.............................
.............................
*ಹಿಡದ ಕಾಮನ ಶಿರಾ ಹೊಡೀ*

– ('ಗುರ್ತಾ ಹಿಡೀ' – ಪು. ೨೮–೨೯)

– ಎನ್ನುವ ಇವರ ತತ್ವಬೋಧೆ ನಮ್ಮ ತತ್ವಪದಕಾರರನ್ನು ನೆನಪಿಸುತ್ತದೆ. ಹುಟ್ಟು–ಸಾವಿನ ಚಕ್ರದಲ್ಲಿ ಸಿಕ್ಕು ಸುತ್ತುವ ಜೀವಕ್ಕೆ ಮನುಷ್ಯ ಜನ್ಮ ಪ್ರಾಪ್ತವಾಗುವುದೇ ದುರ್ಲಭ. ಹೀಗಿರುವಾಗ ಆ ಹುಟ್ಟು–ಸಾವಿನ ಗರಗಸದ ರಕ್ಕಸ ಕೊರೆತದಿಂದ ತಪ್ಪಿಸಿಕೊಳ್ಳಲು ಇರುವ ಏಕೈಕ ಅವಕಾಶವನ್ನು ತಪ್ಪಿಸಿಕೊಳ್ಳಬಾರದು. ಇದು ಸಾಧ್ಯವಾಗಬೇಕಾದರೆ ಅತ್ಯಂತ ಸರಳವಾದ ಸೂತ್ರವೊಂದನ್ನು ಅವರು ಹೇಳಿಕೊಡುತ್ತಾರೆ. ಅದೇ "ಕರ್ಮದ ಗಿಡಾ ಕಡಿದು, ಕಾಮನ ಶಿರಾಹೊಡಿಯುವುದು." ದೊಡ್ಡ ದೊಡ್ಡ ವೇದಾಂತಿಗಳೂ, ತತ್ವಚಿಂತಕರೂ ಹೇಳುವುದು ಇದನ್ನೇ, ಇಷ್ಟನ್ನೇ. "ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ" ಎನ್ನುವ ಪುರಂದರದಾಸರ ಕೀರ್ತನೆಯ ಮಥಿತಾರ್ಥವೂ ಇದೇ ಆಗಿದೆ. ಈ ತತ್ವಜ್ಞಾನವನ್ನು ಈ ಹಾಡು ಬರೆದ ಕವಿ ತುಂಬ ಸಲೀಸಾಗಿ ಮನುಷ್ಯಕೋಟಿಗೆ ದಾಟಿಸುತ್ತಾನೆನ್ನುವದು ಇಲ್ಲಿಯ ಬೆರಗು ಮತ್ತು ಬೆಡಗು.




ಕುಲಪುರಾಣ, ಐತಿಹ್ಯ, ಸಂಪ್ರದಾಯ, ಆಚರಣೆ, ಘಟನೆ, ಸ್ಥಳಪುರಾಣ ಮತ್ತು ಚರಿತ್ರೆಗಳನ್ನು ಹಾಡಾಗಿ ಕಥಿಸುವ ಇವರ 'ಆಶುಕವಿತ್ವ' ಹಾಗೂ 'ಸ್ವೋಪಜ್ಞತೆ' ಅನ್ಯಾದೃಶವಾದುದು. ಯಾವುದೇನೇ ಇರಲಿ ಅದನ್ನು ಸಚಿತ್ರವಾಗಿ, ಚಿತ್ತಾಕರ್ಷಕವಾಗಿ ಹೇಳಬಲ್ಲರು :

*ಹೆಂಗಾಯಿತ್ ಹಾಲ್ಮತ*
*ಹೆಂಗ ಆದೀತೋ*
........................
........................
*ಪ್ರಥಮದಲ್ಲಿ ಶೃತಿ ನಿರ್ಮಲಾದೀತೋ*
..................................................
*ಎಂಭತ್ತು ನಾಲಕ್ಕ*
*ಜೀವರಾಶಿ ಹುಟ್ಯೋ*
*ಅಂಡಜ ಪಿಂಡಜ ಜಲಜ ಎಂದು*
*ತಯಾರಾಗಿ ಬಂತೋ*
.............................
.............................

*ಗಂಡಕ್ಕ ಹೆಣ್ಣ ಒಂದು*
*ಜೋಡವಾಯಿತು*
*ಇಪ್ಪತ್ತೊಂದ ಪಿಂಡ ಕೂಡಿ ಎನಿಸಿತೋ*
*ತಾನು ಹಾಲ್ಮತ ಎನಿಸೀತೋ*

*ಪರಪರತ್ ಹುಟ್ಟಿ*
*ಇಪ್ಪತ್ತೊಂದ್ ಲಕ್ಷವಾತೋ*
...................................
*ಕುರುಬರಿಗಾಧಾರ ಹಾಲು ಆದಿತೋ*
*ತಿಳಿದದ್ದಿಷ್ಟು ಆಧಾರ ಹಿಡಿದು*
*ಹಾಲಮತ ಹುಟ್ಟಿತಂತೀವೋ*

('ಹಾಲ್‌ಮತ' – ಪು. ೩೮–೩೯)

– ಎಂದು 'ಹಾಲುಮತದ' ಉಗಮದ ಬಗೆಗಿನ ತಮ್ಮ ತಿಳುವಳಿಕೆಯನ್ನು ನಿರ್ವಂಚನೆಯಿಂದ ಪ್ರತಿಪಾದಿಸುವುದನ್ನು ಪ್ರಸ್ತುತ ಡೊಳ್ಳಿನ ಹಾಡು ಸಾಕ್ಷೀಕರಿಸುತ್ತದೆ. ವಿದ್ವಾಂಸರ ಅಭಿಪ್ರಾಯ ಏನೇ ಇರಲಿ; ಆದರೆ ಈ ಹಾಡು ರಚಿಸಿದವರಿಗೆ ಅವರದೇ ಆದ 'ಕುಲಪುರಾಣ' ಹೇಳುವಲ್ಲಿ ತೃಪ್ತಿ ಇದೆ, ಸಮಾಧಾನ ಇದೆ. ಇನ್ನು ಈ ಹಾಲುಮತದೊಂದಿಗೆ ಒಂದರ್ಥದಲ್ಲಿ ಜೈವಿಕ ಸಂಬಂಧ ಹೊಂದಿರುವ 'ಕಂಬಳಿ' ಮಹತ್ವವನ್ನು ಕವಿ ಸಾರಿಹೇಳುವ ರೀತಿ ಹೀಗಿದೆ :

*ಆದಿಯಲ್ಲಿದ್ದಂಥ ಪವಿತ್ರ ಕಂಬಳೀ*
*ಹಾಲ್ಮತದಾಗ ಹುಟ್ಟಿದ ಕಂಬಳೀ*
.........................................
*ಮರಿಯಲಾದೀತ ಕಂಬಳೀ*

*ಈಶನ ರೋಮ್ದಾಗ ಹುಟ್ಟಿದ್ಕಂಬಳೀ*
*ಆಸರಾಯ್ತು ದೊಡ್ಡ ಚಳಿಗೆ ಕಂಬಳೀ*
*ಮೇಘರಾಜ ಬಂದಾಗ ತಲಿಮ್ಯಾಲ*
*ಸುತ್ತೂದಕ್ ಬಂತಪ್ಪ ಕಂಬಳೀ*

ರಾಜಪಂಡಿತರಿಗೆ ವುಲನ್‌ಕೋಟ
ಜಾಕೀಟ ತಾನೇ ಆತು ಕಂಬಳೀ
......
......

ಬಿತ್ತೂ ತಾಣದಾಗ ಹಾಸೂ ಕಂಬಳೀ
......
......

ಬಂದ ಬೀಗರಿಗೆ ಹಾಸೂಗಂಬಳೀ
ಬಾಣ್ತಿ ಮೈಮ್ಯಾಲ್ ಹೊಚ್ಚೊ ಕಂಬಳೀ
......
......
ಶಕ್ತಿಪೂಜೆಗೆ ಬಿಳಿಯ ಕಂಬಳೀ
ಮುಕ್ತಿಮಾರ್ಗ ತೋರಿತ್ತ ಕಂಬಳೀ
('ಕಂಬಳಿ' – ಪು. ೪೪–೪೫)

ಚರಿತ್ರೆಯನ್ನು ಈ ಕವಿಗಳು ಹೇಗೆ ಪುನಃಸೃಷ್ಟಿಸಿ ಕೊಳ್ಳಬಲ್ಲರೆಂಬುದಕ್ಕೆ 'ಕಿತ್ತೂರು ಚೆನ್ನಮ್ಮ', 'ಸಂಗೊಳ್ಳಿ ರಾಯಣ್ಣ' ಇವರನ್ನು ಕುರಿತು ಬರೆದ ಹಾಡುಗಳು ನಿದರ್ಶನವಾಗಿವೆ :

......
......
......
......

ಇಂದಿಗೆ ನೂರೈವತ್ತ್ ವರ್ಸದ ಹಿಂದೆ
ಮಲ್ಲಸರ್ಜ ದೊರೆ ಮೆರೆದಿದ್ದನು
ಅವ್ನ ಕಿರೀ ಹೆಣ್ತಿ ಆ ಚೆನ್ನಮ್ಮನು
ದತ್ತಕ ಮಾಡಿಕೊಳ್ಳೊ ವಿಚಾರವನು
......
ಬ್ರಿಟಿಷ್ ಸರ್ಕಾರ ಸಹಿಸದನು
ಅವ್ರು ಯುದ್ಧಕ ಬಂದಾಗ ಸಿಟ್ಟಿಂದನು
ಕಿತ್ತೂರಾಣಿ ಏರ್‍ಯಾಳ್ ಛಂದಗುದರಿಯನು

ಏನ ಹೇಳಲ್ರೆಪ್ಪ ರಾಣಿ ಕಣ್ಣಾಗಿನ
ಕೈಯಾಗಿನ ಕತ್ತಿಯ ಹೊಳಪವನು
ಹಣೆ ಮ್ಯಾಲ ಬೆವರ್ಮುತ್ತ ಸಾಲವನು
ತುಟಿ ಕಚ್ಚಿಹಿಡದ ಆ ರೋಷವನು

ನಮ್ಮ ತಮ್ಮ ಮಂದೀನೆ ಮೋಸ ಮಾಡಿದರೆ
ಹಿಡಿಸಿಕೊಟ್ರು ಆ ರಾಣಿಯನ್ನು
ಅವಳ ಸೆರಿಯಾಗಿಟ್ರು ಆ ಬ್ರಿಟಿಷರನು
ನಾವು ಕನಸಿನಾಗು ನೆನಿಬಾರ್ದು ಪಾಪಿಗಳನು
......
......
('ಕಿತ್ತೂರ್ ಚೆನ್ನಮ್ಮ' – ೧೧೪–೧೧೫)

– ಎಂದು ಚೆನ್ನಮ್ಮ ಬ್ರಿಟಿಷರನ್ನು ಎದುರಿಸಿದ ಕತೆಯನ್ನು,

ಭೂಮಿಗೆ ಬಿದ್ದಂಗ ಸೂರ್ಯನ ಛಾಯ
ರಾಯ ಹುಟ್ದ ಸಂಗೊಳ್ಳಿವಳಗ
ಎಚ್ಚರ ಹರ್ಸಿದಾನ ನಾಡೊಳಗ

ಜಾತಿಲಿಂದ ಅವ ಕುರುಬನಿದ್ದನು
ಸೂರ್ಯ ಚಂದ್ರನ್ನಂಗ ಪಾಂಡುರೊಳ್ಗ
ಭೀಮಸೇನನಿದ್ದಂಗ ಗುಡಗ ಸಿಡ್ಲ ಹಂಗ
('ಸಂಗೊಳ್ಳಿ ರಾಯಣ್ಣ' – ೩೪–೩೫)

......
......
......

– ಎಂದು ರಾಯಣ್ಣನ ಪ್ರತಾಪವನ್ನು ಈ ಹಾಡುಗಾರರು ಕತೆ ಮಾಡಿ ಹಾಡಬಲ್ಲರು.

ನಮ್ಮ ನಡುವೆಯೇ ಇದ್ದು ಹೋದ ಗಾಂಧಿ ಮಹಾತ್ಮ ಈ ದೇಶದ ಸ್ವಾತಂತ್ರ್ಯ ಹೋರಾಟದ ನಾಯಕತ್ವ ವಹಿಸಿ ರೂಪಿಸಿದ 'ಅಹಿಂಸಾತ್ಮಕ ಚಳುವಳಿ' ವಿಶ್ವದ ಚರಿತ್ರೆಯಲ್ಲಿಯೇ ಅಪೂರ್ವ ಮತ್ತು ಅನನ್ಯ. ಬಲಾಢ್ಯ ಬ್ರಿಟಿಷ್‌ರೊಂದಿಗೆ ಬಡ ಭಾರತೀಯರು ಶಸ್ತ್ರ ಹಿಡಿದು ಹೋರಾಡುವದು ಸಾಧ್ಯವಿಲ್ಲ ಎನ್ನುವದನ್ನು ಗಾಂಧೀಜಿ ಚೆನ್ನಾಗಿ ಮನಗಂಡಿದ್ದರು ಮತ್ತು ಅದೇ ರೀತಿಯ ಹೋರಾಟದಲ್ಲಿ ಅವರು ಯಶಸ್ಸು ಕಂಡರು. ಇಂಥ ಮಹಾತ್ಮ ಈ ದೇಶಕ್ಕೆ ಸಾರಿ ಹೇಳಿದ ಸಂದೇಶವನ್ನು ಈ ನಮ್ಮ ಡೊಳ್ಳಿನ ಹಾಡುಗಾರರು :

......
......
ಗಾಂಧೀಜಿ ಸಾಯ್ವಾಗ ಸಾರ್ಹೇಳಿ ಹೋದ
ಮೂರು ಮಾತ ನಮಗ

ನಿರಕ್ಷರಿ ಜನರು ಯಾರ್‍ಯಾರು
ಇರಬಾರ್ದು ಭಾರ್ತ ದೇಶದೊಳಗ
ಸ್ವರಾಜ್ಯ ಸಿಕ್ಕಿದ್ದು ಸಾರ್ಥಕಾಗತೈತೆ –
ದರವೊಬ್ರು ಕಲಿತಾಗ

ಹುಟ್ಟಿದ ಮಕ್ಕಳ್ನ ಪೈಲವಾನ್ರಾಗಿ ಮಾಡ್ರಿ
ಹೊಟ್ಟೆಗ್ಹಾಕ್ರಿ ಕಮ್ಮಗ ಗಟ್ಟಿ ತರೂಣರು
ರಾಷ್ಟ್ರದ ಸಂಪತ್ತು ಅವ್ರೇ ಆಸ್ತಿ ನಮ್ಗ
ಅವ್ರೇ ನೆಳ್ಳು ನಮಗ
('ಸಾರಿ ಹೇಳಿ ಹ್ವಾದ' – ಪು. ೫೭)

– ಎಂದು ಸಮಕಾಲೀನವೂ, ಸಾರ್ವಕಾಲಿಕವೂ ಆಗಿರುವಂತೆ ಹದಗೊಳಿಸಿಕೊಂಡು ಹಾಡುತ್ತಾರೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಇಂಥ ಜನಪದ ಹಾಡುಗಾರರೇ ಬಹುದೊಡ್ಡ ಪ್ರಸಾರ ಮಾಧ್ಯಮವಾಗಿದ್ದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬೇಕು. ಬಹುಶಃ ಈ ದೇಶದ ಕಟ್ಟಕಡೆಯ ಪ್ರಜೆಯ ಮನಸ್ಸಿನಲ್ಲಿ ಸ್ವಾತಂತ್ರ್ಯದ ಕಿಚ್ಚು ಹಚ್ಚಿದವರೂ ಇವರೇ ಆಗಿದ್ದರು. ಈ ಹಾಡುಗಾರರ ಅನುಭವದ ಬೀಸು ಎಷ್ಟು ವಿಸ್ತಾರವಾದುದೆನ್ನುವದನ್ನು ಈ ಸಂಕಲನದ 'ಲೇಸು' ಎನ್ನುವ ಹಾಡಿನ ಮೂಲಕ ಅರಿಯಬಹುದಾಗಿದೆ :

ಧ್ಯಾಸವಿಲ್ಲದ ಪದ
ತಾಸ ಹಾಡಿದರೇನು
ಸಾಸಿವೆಯಷ್ಟಿಲ್ಲ ಕಾಸು
ಮಳಿಯಾದರೆ ಲೇಸು
ಬೆಳಿ ಬಂದರೆ ಲೇಸು
ಕಳೆಯ ಕೂಸು ಮನ್ಯಾಗ ಲೇಸು

ಬೆಳೆಸಿದ ಕುರಿ ಲೇಸು
ತಿನ್ನಿದ ಮರಿ ಲೇಸು
ಕಳೆಯ ಶಿವಾ ಗುಡ್ಯಾಗ ಲೇಸು
......
......
......

ಹರಳ ಉಂಗುರ ಲೇಸು
ಹುರುಳಿ ಕುದ್ರಿಗ ಲೇಸು
ಸಾಲ ಮುಟ್ಟಿಸೋದು ಲೇಸು
......
......
......

ಜ್ಞಾನಿಗೆ ಗುಣ ಲೇಸು
ಮಾನಿನಿಗೆ ಪತಿ ಲೇಸು
ಅನುಭಾವಿಗಳ ನುಡಿ ಲೇಸು
......
......
ಗಾನ ವಿದ್ಯೆಯು ಲೇಸು
ಮಾನವಂತಿಕೆ ಲೇಸು
ಸ್ವಾನುಭವವೇ ಲೇಸು
('ಲೇಸು' – ಪು. ೬೪–೬೬)

– ಇವೆಲ್ಲವೂ ಅವರ ಅನುಭವ ಸತ್ಯ. ಈ ಸತ್ಯವನ್ನು ಅತ್ಯಂತ ನಿರಾಯಾಸವಾಗಿ ಅವರು ಸಮುದಾಯಕ್ಕೆ ಹಂಚಬಲ್ಲರೆಂಬುದಕ್ಕೆ ಅವರಿಗೆ ಅವರೇ ಸಾಟಿ.

* * *

ಈ ಸಂಕಲನದ ಹಾಡುಗಳ ಹಾಡುಗಾರ ಒಬ್ಬನೇ ಆಗಿದ್ದರೂ ಇವು ಏಕವ್ಯಕ್ತಿ ಕೃತಿಗಳಲ್ಲ. ಯಾಕೆಂದರೆ ಇಲ್ಲಿ ಹಾರುಗೇರಿ, ಹಂದಿಗುಂದ, ಉಪ್ಪಾರಟ್ಟಿ, ಕ್ಯಾರಕೊಪ್ಪ, ನಾಗನೂರ, ಹುಲಕುಂದ, ಮುಗಳ್ಖಾಳ, ತಳಗಾನಟ್ಟಿ – ಮುಂತಾದ ಸ್ಥಳನಾಮಗಳಿದ್ದು, ಇವು ಆಯಾ ಊರಿನ ಕವಿರಚನೆಗಳಾಗಿರಬೇಕೆನಿಸುತ್ತದೆ. ಇಂಥ ಅಪರೂಪದ ಹಾಡುಗಾರರನ್ನು, ಹಾಡುಗಳನ್ನೂ ಪರಿಚಯಿಸಿದ ಕಮಲಾ ಹೆಮ್ಮಿಗೆ ಅಭಿನಂದನಾರ್ಹರು.

**ಡಾ|| ಬಾಳಣ್ಣ ಶೀಗೀಹಳ್ಳಿ**
೧ನೇ ಅಡ್ಡರಸ್ತೆ, ಶ್ರೀನಗರ
ಧಾರವಾಡ – ೫೮೦ ೦೦೩

# ಮಂಗಳವಾದ್ಯ, ಮದುವೆ ಇತ್ಯಾದಿ!




ವಾಲಗದ ಸದ್ದಿಲ್ಲದೆ ಮದುವೆಯ ಒಂದು ಸಣ್ಣ ಕ್ರಿಯೆಯೂ ನಡೆಯುವಂತಿಲ್ಲ! ವಾಲಗದವರು ಬರುವುದು ತಡವಾದರೆ ಎಲ್ಲರೂ ಅವರನ್ನು ದಬಾಯಿಸುವವರೆ! ವಾಲಗದವರೆಂದರೆ ಎಲ್ಲರಿಗೂ ಸದರ. ನುಡಿಸುವಾಗ ತಪ್ಪಾದರೂ ಅದನ್ನು ಅವರು ಗಮನಿಸುತ್ತಿರಲಿಲ್ಲ. ಒಟ್ಟಾರೆ ವಾಲಗ ನಿರಂತರ ಸದ್ದು ಮಾಡುತ್ತಿರಬೇಕು! ವಾಲಗದವರು ಕೆಲವು ಭಜನೆಗಳನ್ನು, ಆಗ ಜನಪ್ರಿಯವಾಗಿದ್ದ ಕೆಲವು ಸಿನೆಮಾ ಹಾಡುಗಳನ್ನು ಪ್ರಾಕ್ಟೀಸು ಮಾಡಿಕೊಂಡು ಬಂದಿರುತ್ತಿದ್ದರು. ಯಾವ ಶಾಸ್ತ್ರದ ಸಂದರ್ಭದಲ್ಲಿ ಯಾವ ಹಾಡು ಎಂಬುದು ಅವರಿಗೆ ಪಾಠವಾಗಿರುತ್ತಿರಲಿಲ್ಲ. ನಾದಸ್ವರ ಏರಿಗೆಳೆದರೆ, ಡೋಲು ನೀರಿಗೆಳೆಯಿತು ಎಂಬ ಹೊಸ ಗಾದೆಯಂತೆ, ಕೆಲವೊಮ್ಮೆ ಅವೆರಡಕ್ಕೂ ಹೊಂದಿಕೆಯಾಗದೆ ಆಭಾಸವಾಗುತ್ತಿದ್ದುದುಂಟು! ತಾಳಿ ಕಟ್ಟುವಾಗ ವಾಲಗದವರಿಗೆ 'ಶಿವಪ್ಪಾ ಕಾಯೊ ತಂದೇ' ನೆನಪಾದರೂ ನಡೆಯುತ್ತದೆ!

ಚಿತ್ರಲೇಖನ : **ಪರಂಜ್ಯೋತಿ**

**ಯಾ**ವುದೇ ಕಾರ್ಯಕ್ರಮದಲ್ಲಿ ಭಾಗವಹಿಸಿದರೂ ಇದರಿಂದ ಕಲಿಯಬಹುದಾದದ್ದು ಏನು? ಎಂಬ ಪ್ರಶ್ನೆ ನನ್ನ ತಲೆಗೆ ಹೊಕ್ಕುಬಿಡುತ್ತದೆ. ಜೊತೆಗೆ, ಯಾಕೆ? ಹೇಗೆ? ಎಂಬ ಪ್ರಶ್ನೆಗಳು ಸಹ. ಇದನ್ನು ಮಗುತನದ ಕುತೂಹಲ ಎನ್ನಿ, ಬೇಕಾದರೆ!

ವಿಶಾಲವಾದ ಆಧುನಿಕ ಮದುವೆ ಮಂಟಪ (ಹಾಲ್). ನೆಂಟರಿಷ್ಟರು, ಬಂಧು ಬಳಗದವರು ಪರಸ್ಪರ ಕುಶಲ ವಿಚಾರಿಸಿ ಸಂಭ್ರಮಿಸುವ ಗದ್ದಲ. ಸಾಲಿನ ಕೊನೆಯಲ್ಲಿ ಗಾಳಿ ಬರುವ ಕಡೆ ಕುರ್ಚಿಯಲ್ಲಿ ಕುಳಿತದ್ದಾಯಿತು. ಬರುವಾಗಲೇ ಸ್ಯಾಕ್ಸೊಫೋನ್ ನುಡಿಸುತ್ತಿದ್ದ ತ್ರಿಮೂರ್ತಿಗಳನ್ನು ಗಮನಿಸಿದ್ದೆ. ಕಿವಿಗಳು ಜನರ ಗದ್ದಲದಿಂದ ತಪ್ಪಿಸಿಕೊಂಡು ವಾದ್ಯದ ಇಂಪಾದ ನಾದಕ್ಕೆ ತೆರೆದುಕೊಂಡವು.

ಪಾಶ್ಚಾತ್ಯ ಸಂಗೀತ ಉಪಕರಣಗಳಾದ ಪಿಟೀಲು, ಕ್ಲಾರಿಯೊನೆಟ್ ಮತ್ತು ಸ್ಯಾಕ್ಸೊಫೋನ್ ವಾದ್ಯಗಳನ್ನು ಭಾರತೀಯ ರಾಗಗಳಿಗೆ ಒಗ್ಗಿಸಲು ಮಾಡಿದ ಪ್ರಯತ್ನಗಳ ಬಗ್ಗೆ ನೆನಪು ಮಾಡಿಕೊಳ್ಳತೊಡಗಿದೆ. ಸುಮಾರು ನೂರು ವರ್ಷಗಳಿಗಿಂತ ಹಿಂದೆಯೇ, ನಾಲ್ಕು ತಂತಿಯ ಪಿಟೀಲನ್ನು ಕರ್ನಾಟಕ ಸಂಗೀತಕ್ಕೆ ಒಗ್ಗಿಸುವ ಪ್ರಯತ್ನಗಳು ನಡೆದವು. ಹಾಡುಗಾರರ ಸ್ವರದೊಂದಿಗೆ ಮಿಳಿತವಾಗಿ, ರಾಗದ ಎಲ್ಲ ಸೂಕ್ಷ್ಮಗಳು, ಏರಿಳಿತಗಳು, ಪಲುಕುಗಳು ಪಿಟೀಲಿನ ತಂತಿಗಳಿಂದ ಪ್ರತಿಧ್ವನಿಸಿದಾಗ ಅದೊಂದು ಕ್ರಾಂತಿಕಾರಿ ಪ್ರಯೋಗವಾಗಿ ಎಲ್ಲರಿಗೂ ಆಶ್ಚರ್ಯವಾಗದೆ ಇರಲಿಲ್ಲ. ಅದು ಮ್ಲೇಚ್ಛರ ವಾದ್ಯವೆಂದು ಮೂಗು ಮುರಿಯುತ್ತಿದ್ದ ಮಡಿವಂತ ವಿಮರ್ಶಕರು ಬಾಯಿ ಮುಚ್ಚಿಕೊಳ್ಳಬೇಕಾಯಿತು. ಆವರೆಗೆ ಕಚೇರಿಗಳಲ್ಲಿ ಹಾಡುಗಾರರಿಗೆ ಪಕ್ಕವಾದ್ಯವಾಗಿ ವೀಣೆಯನ್ನು ನುಡಿಸುವ ಸಂಪ್ರದಾಯವಿತ್ತು. ಮುಂದೆ ಪಿಟೀಲು ಆ ಸ್ಥಾನ ಗಳಿಸಿತು. ಪಿಟೀಲು ನಮ್ಮ ವಾದ್ಯವಾಯಿತು. ಈಗ ಪಿಟೀಲಿನ ಸಾಥಿ ಇಲ್ಲದ ಸಂಗೀತ ಕಚೇರಿಯನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಾಗದು! ಕರ್ನಾಟಕ ಸಂಗೀತ ರಾಗಗಳಿಗೆ ಮಾತ್ರವಲ್ಲದೆ ಉತ್ತರಾದಿ ಸಂಗೀತಕ್ಕೂ ಪಿಟೀಲು

ಒಗ್ಗಿಕೊಂಡಿತು. ಅದೇ ಸಂದರ್ಭದಲ್ಲಿ ಹಾರ್ಮೋನಿಯಂ ಮಾನ್ಯತೆ ಗಳಿಸಿತು.

ಆವರೆಗೆ ಬ್ಯಾಂಡ್ ಮೇಳದಲ್ಲಿ ಬಳಕೆಯಾಗುತ್ತಿದ್ದ ಕ್ಲಾರಿಯೊನೆಟ್ ಮತ್ತು ಸ್ಯಾಕ್ಸೊಫೋನ್ ವಾದ್ಯಗಳು ಕ್ರಮೇಣ ಭಾರತೀಯ ರಾಗಗಳಿಗೆ ಹೊಂದಿಕೊಂಡವು. ಮುಂದೆ ಹಲವು ಹೊಸ ಪ್ರಯೋಗಗಳಾದವು. ಮ್ಯಾಂಡೊಲಿನ್ ಮತ್ತು ಗಿಟಾರ್‌ಗಳು ಸಹ ನಮ್ಮ ರಾಗಗಳನ್ನು ನುಡಿಸಿ ಜನಪ್ರಿಯವಾದವು. ಇಲ್ಲಿ ಮ್ಯಾಂಡೊಲಿನ್ ಶ್ರೀನಿವಾಸ್ ಮತ್ತು ವಿಶ್ವಮೋಹನ್ ಭಟ್‌ರಂಥವರನ್ನು ನೆನಪಿಸಿಕೊಳ್ಳಬಹುದು !

ಆದರೆ, ಪ್ರತಿಷ್ಠಿತ ಕುಟುಂಬಗಳವರ ಮದುವೆಗಳಲ್ಲಿ, ದೇವಾಲಯಗಳ ಪೂಜಾಕಾರ್ಯಗಳಲ್ಲಿ, ದೇವರ ಉತ್ಸವ, ಕುಂಭಾಭಿಷೇಕ ಮುಂತಾದ ಸಂಭ್ರಮ ಆಚರಣೆಗಳ ಸಂದರ್ಭದಲ್ಲಿ ನಾದಸ್ವರ ಮಾತ್ರ ಮಂಗಳವಾದ್ಯ ಎಂಬ ಮನ್ನಣೆಗೆ ಪಾತ್ರವಾಗಿದೆ. ಮದುವೆಗಳಿಗೆ ಪ್ರಖ್ಯಾತ ನಾದಸ್ವರ ವಿದ್ವಾಂಸರನ್ನು ಕರೆಸುವುದು ಪ್ರತಿಷ್ಠೆಯ ಸಂಕೇತ ಎಂದು ಭಾವಿಸುವವರಿದ್ದಾರೆ. ದೇವಾಲಯಗಳಲ್ಲಿ ನಾದಸ್ವರ ಸೇವೆ ಪೂಜೆಯ ಒಂದು ಅಂಗವಾಗಿದೆ.

ಕಾಲ ಬದಲಾಗುತ್ತಿದೆಯಲ್ಲವೆ ? ಮನುಷ್ಯ ತನ್ನ ಪ್ರಯತ್ನದಿಂದ ಪರಿಸ್ಥಿತಿಯನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಬದಲಾಯಿಸಿಕೊಳ್ಳಬಲ್ಲ.

ಇತ್ತೀಚಿನ ದಿನಗಳಲ್ಲಿ ಸ್ಯಾಕ್ಸೊಫೋನ್ ಮದುವೆ ಸಮಾರಂಭಗಳಲ್ಲಿ ಸ್ಥಾನ ಗಿಟ್ಟಿಸಿಕೊಂಡಿದೆ. ನಾದಸ್ವರ ವಾದಕರು ಹೆಚ್ಚು ಸಂಖ್ಯೆಯಲ್ಲಿ ಲಭ್ಯವಿಲ್ಲದಿರುವುದು ಮತ್ತು ಸಂಭಾವನೆ ದುಬಾರಿಯಾಗಿರುವುದು ಇದಕ್ಕೆ ಮುಖ್ಯ ಕಾರಣವಾಗಿರಬಹುದು !

ಅನುಕೂಲಕ್ಕೆ ತಕ್ಕಂತೆ ಮದುವೆ ಸಂಪ್ರದಾಯಗಳಲ್ಲೂ ಬದಲಾವಣೆಗಳಾಗಿವೆ. ಹಿಂದಿನವರು ಮಾಡುತ್ತಿದ್ದಂತೆ 'ಶಾಸ್ತ್ರೋಕ್ತ' ಮದುವೆಗೆ ರಿಯಾಯಿತಿ ನೀಡಲಾಗಿದೆ. ಯಾರೂ ಆಕ್ಷೇಪಣೆ ಮಾಡುವಂತಿಲ್ಲ. ಮಾಂಗಲ್ಯಧಾರಣೆಯ ಹಿಂದಿನ ದಿನ ಆರತಕ್ಷತೆ (ರಿಸೆಪ್ಷನ್) ನಡೆಯುತ್ತದೆ. ಗಂಡು ಹೆಣ್ಣು ಚಂದದ ಆಧುನಿಕ ಉಡುಪು ಧರಿಸಿ, ವೇದಿಕೆಯ ಮೇಲೆ ನಿಂತು, ನಗುನಗುತ್ತ ಹಿರಿಯರ, ಬಂಧುಬಳಗದವರ, ಮಿತ್ರರ ಅಭಿನಂದನೆ, ಆಶೀರ್ವಾದ ಸ್ವೀಕರಿಸುತ್ತಾರೆ. ಮರುದಿನ ತಾಳಿಕಟ್ಟುವ ಶಾಸ್ತ್ರ !

ಬೇಡಬೇಡವೆಂದರೂ ಮನಸ್ಸು ಸುಮಾರು ಐವತ್ತು ವರ್ಷ ಹಿಂದಿನ ಹಳ್ಳಿ ಮದುವೆಗಳ ಸಂಭ್ರಮದತ್ತ ಹುಚ್ಚು ಕುದುರೆಯಂತೆ ಓಡತೊಡಗಿತು. ಎಂಥ ದಿನಗಳು ಅವು ! ಆಗಿನ ವಾಲಗದವರ ನೆನಪೂ ಕಣ್ಣಮುಂದೆ ಸುಳಿಯಿತು.

ಅವರೇನೂ ವೃತ್ತಿಪರ ಕಲೆಗಾರರಲ್ಲ. ಎಲ್ಲರಂತೆ ಹೊಲಗದ್ದೆಗಳಲ್ಲಿ ದುಡಿಯುವ ರೈತರು. ವಾಲಗ ಕಲಿಯುವ ಉಮೇದಿನಿಂದ ನಾಲ್ಕೈದು ಜನ ಸೇರಿ ರಚಿಸಿಕೊಂಡ ವೃಂದ. ಸುತಿ (ಶ್ರುತಿ) ಹಿಡಿಯುವವನೊಬ್ಬ, ಒಬ್ಬ ಅಥವಾ ಇಬ್ಬರು ವಾಲಗ ಬಾರಿಸುವವರು, ಡೋಲು ಬಾರಿಸುವವನೊಬ್ಬ, ತಾಳ ಕುಟ್ಟಲು ಮತ್ತೊಬ್ಬ. ಸಂಜೆಯವರೆಗೆ ದುಡಿದು, ವಾಲಗಕ್ಕೆ ಒಪ್ಪಿಕೊಂಡಿರುವುದನ್ನು ನೆನಪು ಮಾಡಿಕೊಂಡು, ವಾದ್ಯ ಹೆಗಲಿಗೇರಿಸಿ ಏಳುತ್ತ ಬೀಳುತ್ತ ಓಡಿಬಂದವರು. ದುಡಿಮೆ ಅವರ ವೃತ್ತಿ, ವಾಲಗ ಬಾರಿಸುವುದು ಹವ್ಯಾಸ !

ಮೇಳಿ ಹಿಡಿಯುವ ಕೈಗಳಲ್ಲಿ ನಾದಸ್ವರ, ಗಾಡಿ ಹೊಡೆಯುವವನ ಕೈಯ್ಯಲ್ಲಿ ಡೋಲು !

ಶ್ರುತಿ ಹಿಡಿಯುವ ವ್ಯಕ್ತಿಯ ಬಗ್ಗೆ ಮಕ್ಕಳಿಗೆ ಹೆಚ್ಚು ಕುತೂಹಲ. ಆತನದೂ ವಾಲಗವೆ ! ಆದರೆ ನುಡಿಸುವ ವಾಲಗವಲ್ಲ. ಆತ ಒಂದು ಕ್ಷಣವೂ ಪೀಪಿಯಿಂದ ಬಾಯಿ ತೆಗೆಯದೆ, ಮೂಗಿನಿಂದ ಉಸಿರೆಳೆದುಕೊಂಡು ಊದುವಾಗ ಆತನ ಕೆನ್ನೆಗಳು ಕಡುಬಿನಂತೆ ಉಬ್ಬಿಕೊಳ್ಳುತ್ತಿದ್ದವು. ಅದಾದರೂ ಹೇಗೆ ಸಾಧ್ಯವಾಗುತ್ತದೆ ಎಂಬುದೇ ಮಕ್ಕಳ ಕುತೂಹಲಕ್ಕೆ ಕಾರಣ. ಆತನದು ಒಂದು ರೀತಿಯ ಪ್ರಾಣಾಯಾಮ ! ಮೊದಲಿನಿಂದ ಕೊನೆಯವರೆಗೂ ಆತನ ಪ್ರಾಣಾಯಾಮ ಮುಂದುವರಿಯುತ್ತಿತ್ತು. ಈಗ ಹಳ್ಳಿಗಳಲ್ಲಿ ಅಂಥ ಶ್ರಮಜೀವಿ ಕಲೆಗಾರರು ಇದ್ದಾರೋ ತಿಳಿಯದು !

ವಾಲಗದ ಸದ್ದಿಲ್ಲದೆ ಮದುವೆಯ ಒಂದು ಸಣ್ಣ ಕ್ರಿಯೆಯೂ ನಡೆಯುವಂತಿಲ್ಲ ! ವಾಲಗದವರು ಬರುವುದು ತಡವಾದರೆ ಎಲ್ಲರೂ ಅವರನ್ನು ದಬಾಯಿಸುವವರೆ ! ವಾಲಗದವರೆಂದರೆ ಎಲ್ಲರಿಗೂ ಸದರ. ನುಡಿಸುವಾಗ ತಪ್ಪಾದರೂ ಅದನ್ನು ಅವರು ಗಮನಿಸುತ್ತಿರಲಿಲ್ಲ. ಒಟ್ಟಾರೆ ವಾಲಗ ನಿರಂತರ ಸದ್ದುಮಾಡುತ್ತಿರಬೇಕು ! ವಾಲಗದವರು ಕೆಲವು ಭಜನೆಗಳನ್ನು, ಆಗ ಜನಪ್ರಿಯವಾಗಿದ್ದ ಕೆಲವು ಸಿನೆಮಾ ಹಾಡುಗಳನ್ನು ಪ್ರಾಕ್ಟೀಸು ಮಾಡಿಕೊಂಡು ಬಂದಿರುತ್ತಿದ್ದರು. ಯಾವ ಶಾಸ್ತ್ರದ ಸಂದರ್ಭದಲ್ಲಿ ಯಾವ ಹಾಡು ಎಂಬುದು ಅವರಿಗೆ ಪಾಠವಾಗಿರುತ್ತಿರಲಿಲ್ಲ. ನಾದಸ್ವರ ಏರಿಗೆಳೆದರೆ, ಡೋಲು ನೀರಿಗೆಳೆಯಿತು ಎಂಬ ಹೊಸ



*ನಿಂಗರಾಜ ಪಾಂಡವ*

ಗಾದೆಯಂತೆ, ಕೆಲವೊಮ್ಮೆ ಅವೆರಡಕ್ಕೂ ಹೊಂದಿಕೆಯಾಗದೆ ಆಭಾಸವಾಗುತ್ತಿದ್ದುದುಂಟು ! ತಾಳಿ ಕಟ್ಟುವಾಗ ವಾಲಗದವರಿಗೆ 'ಶಿವಪ್ಪಾ ಕಾಯೊ ತಂದೇ' ನೆನಪಾದರೂ ನಡೆಯುತ್ತದೆ !

ಹಳ್ಳಿ ಮದುವೆಗೆ ಅದರದೇ ಗಮ್ಮತ್ತು ಇರುತ್ತಿತ್ತು. ಹಿಂದಿನ ಸಂಜೆ ವೀಳ್ಯೆ ಶಾಸ್ತ್ರ. ಮರುದಿನ ಮುಂಜಾನೆ ಊರಿನಿಂದ ಸ್ವಲ್ಪ ದೂರದಲ್ಲಿರುವ ಹಳ್ಳದಿಂದ ದೇವಾಲಯಕ್ಕೆ ನೀರು ತರುವ, ಗಂಡು ಹೆಣ್ಣಿಗೆ ಪ್ರತ್ಯೇಕವಾಗಿ ಕಂಕಣ ಕಟ್ಟುವ, ಗಂಡಿನ ಕಂಕುಳಿಗೆ ಒಂದು ಹಳೆಯ ಕೊಡೆ ಸಿಕ್ಕಿಸಿ ಗಂಡನ್ನು ಕಾಶಿಯಾತ್ರೆಗೆ ಕರೆದೊಯ್ದು ಯಾರದಾದರೂ ಪಡಸಾಲೆಯಲ್ಲಿ ಕುಳ್ಳಿರಿಸುವ, ಹೆಣ್ಣಿನ ಅಪ್ಪ ಅಥವಾ ಸೋದರಮಾವ ಗಂಡನ್ನು ಕಾಶಿಯಿಂದ ಕರೆತರುವ, ವಧುವರರನ್ನು ಎದುರುಬದುರು ನಿಲ್ಲಿಸಿ ಅವರ ಮುಂದೆ ಪರದೆ ಇಳಿಬಿಟ್ಟು ಅನಂತರ ಪರದೆ ಸರಿಸಿ ತಾಳಿ ಕಟ್ಟಿಸುವ, ಅವರನ್ನು ಎದುರುಬದುರು ಕುಳ್ಳಿರಿಸಿ ಅವರ ಬೊಗಸೆಗೆ ಬಂದವರು ಹಾಲನ್ನು 'ಧಾರೆ ಎರೆಯುವ' ಅನಂತರ ಅವರನ್ನು ಊರಿನ ಬೀದಿಗಳಲ್ಲಿ ಮೆರವಣಿಗೆ ಹೊರಡಿಸಿ, ಗುಡಿಯಲ್ಲಿ ದೇವರಿಗೆ ಕೈ ಮುಗಿಸಿ ಕರೆತರುವ ಶಾಸ್ತ್ರಗಳೆಲ್ಲ ಸಾಂಗವಾಗಬೇಕು.

ಮದುವೆಗೆ ಬಂದವರಲ್ಲಿ ಕೆಲವರು ಗಂಡಿನ ಕಡೆಯವರಾಗಿ, ಮತ್ತೆ ಕೆಲವರು ಹೆಣ್ಣಿನ ಕಡೆಯವರಾಗಿ ಪರಸ್ಪರ ಕಿಚಾಯಿಸುವ ಸೊಗಸು ಒಂದು ಕಡೆ. ತಾಳಿ ಕಟ್ಟಿಸಲು ಪರದೆ ಸರಿಸಿದಾಗ 'ತಾಲಿ ಕಟ್ಟೊ ಮಾರಾಯ, ನಿನ್ನೆಂಡ್ತಿಯಾ ಆಮ್ಯಾಲೂ ನೋಡೀವಂತೆ ! ' ಎಂದು ಗಂಡಿನ ಕೆನ್ನೆ ಕೆಂಪಾಗಿಸುವ ಪರಿ, ಪ್ರತಿಯಾಗಿ ಹೆಣ್ಣಿನ ಕಡೆಯವರೂ ಗೇಲಿ ಮಾಡದೆ ಇರುತ್ತಾರೆಯೆ ? ಕೆಲವೊಮ್ಮೆ ವಿನಾಕಾರಣ ವಾಗ್ವಾದಗಳು, ಜಗಳಗಳಾಗುವುದುಂಟು.

ಒಂದು ಕಡೆ ವಾಲಗದವರಾದರೆ ಮತ್ತೊಂದು ಕಡೆ ಸೋಬಾನೆಯವರು. ಅಲ್ಲಿ ಹಿರಿಯ ಹೆಂಗಸರ ಜೊತೆಗೆ ಕೆಲವು ಯುವತಿಯರೂ ಸೇರಿಕೊಳ್ಳುವುದುಂಟು. ತಾಳಿ ಕಟ್ಟಿದ ನಂತರ ಸೋಬಾನೆಯವರು ಎರಡು ಗುಂಪುಗಳಾಗಿ, ಗಂಡಿನ ಕಡೆಯವರು ಹೆಣ್ಣಿನವರನ್ನು, ಹೆಣ್ಣಿನ ಕಡೆಯವರು ಗಂಡಿನ ಕಡೆಯವರನ್ನು ಅಣಕಿಸುವ ಸೋಬಾನೆ ಸ್ಪರ್ಧೆ ನಡೆಸುವುದುಂಟು ! ಇದು ಬೀಗರ ಅಣಕು !

ಶಾಸ್ತ್ರಗಳೆಲ್ಲ ಮುಗಿದು, ಮದುವೆಗೆ ಬಂದವರೆಲ್ಲ ಉಂಡು ಹೋಗುವವರೆಗೂ ಬಡಪಾಯಿ ವಾಲಗದವರ ನೆನಪು ಯಾರಿಗೂ ಆಗಿರುವುದಿಲ್ಲ ! ಕೆಲವೊಮ್ಮೆ ನಾಚಿಕೆ ಬಿಟ್ಟು ವಾಲಗದವರೇ ನೆನಪಿಸಬೇಕಾಗಬಹುದು ! ಅವರು ಊಟಕ್ಕೆ ಕುಳಿತುಕೊಳ್ಳುವ ವೇಳೆಗೆ ಎಲ್ಲ ಆರಿ ತಣ್ಣಗಾಗಿರುತ್ತದೆ. ಅವರೇನೂ ತಕರಾರು ತೆಗೆಯುವವರಲ್ಲ. ಅವರಿಗೆ ಸಂಭಾವನೆ ನೀಡುವಾಗಲೂ ತಡವಾಗುತ್ತದೆ, ಚೌಕಾಶಿ ನಡೆಯುತ್ತದೆ !

ಈಗ ಹಳ್ಳಿಯವರೂ ಮದುವೆ ವಿಷಯದಲ್ಲಿ ಕೆಲವು ಬದಲಾವಣೆ ಮಾಡಿಕೊಂಡಿದ್ದಾರೆ. ಶ್ರಮಜೀವಿ ವಾಲಗದವರಿಲ್ಲ, ಸೋಬಾನೆಯವರ ಪತ್ತೆಯಿಲ್ಲ.

ತಮ್ಮ ಮನೆಯಲ್ಲಿ ನಡೆಯುವ ಮದುವೆಗೆ ಪಟ್ಟಣದಿಂದ ಬ್ಯಾಂಡ್ ಸೆಟ್ ತರಿಸುವ ಕುಳಗಳಿದ್ದಾರೆ. ಕಾಲ ಬದಲಾಗುತ್ತಿದೆ !

✶ ✶ ✶

ನನ್ನ ಕಣ್ಣುಗಳು ಮುಂದೆ ನಡೆಯುತ್ತಿದ್ದುದನ್ನು ನೋಡುತ್ತಿದ್ದರೂ, ಕಿವಿಗಳು ಸ್ಯಾಕ್ಸೊಫೋನ್ ನಾದಕ್ಕೆ ತೆರೆದುಕೊಂಡೇ ಇದ್ದವು.

ಬಂದವರು ಕಾಯುತ್ತ ಕುಳಿತಿದ್ದರೂ, ವೇಳೆ ಮೀರುತ್ತಿದ್ದರೂ ಫೋಟೋ ಸೆಷನ್ ಮುಗಿದಿರಲಿಲ್ಲ. ಗಂಡಿನ ಕಡೆಯವರು, ಹೆಣ್ಣಿನ ಕಡೆಯವರು ಬೇರೆ ಬೇರೆ ಫೋಟೋಗ್ರಾಫರುಗಳನ್ನು ಗೊತ್ತುಪಡಿಸಿದ್ದರು. ಅವರು ಹೆಣ್ಣು, ಗಂಡನ್ನು ಬೇರೆ ಬೇರೆ ಪೋಸುಗಳಲ್ಲಿ ಹಿಂಸಿಸಿ, ಗಂಡಿನದು ನೂರು ಮತ್ತು ಹೆಣ್ಣಿನದು ನೂರು ಫೋಟೋ ಕ್ಲಿಕ್ಕಿಸಿದ್ದರು. ಆದರೂ ಕಾಯುತ್ತ ಕುಳಿತಿರುವ ಬಡಪಾಯಿಗಳ ಮೇಲೆ ಅವರಿಗೆ ಕರುಣೆಯಿಲ್ಲ ! ಮದುಮಕ್ಕಳ ಜೀವನದ ಅತ್ಯಂತ ಅಪೂರ್ವ, ಸ್ಮರಣೀಯ ಕ್ಷಣವನ್ನು ದಾಖಲಿಸುತ್ತಿರುವ ಮಹಾನುಭಾವರು ಅವರು. ಈಗ ಬಹುಪಾಲು ಮದುವೆಗಳು ನಡೆಯುವುದು ಹೀಗೆಯೆ ತಾನೆ ! ಫೋಟೋಗ್ರಾಫರ್‌ಗಳೂ ಬದುಕಬೇಕಲ್ಲ !

ಯಾವುದಾದರೂ ಮದುವೆ ಆಲ್ಬಂನಲ್ಲಿ ವೇದಿಕೆಯ ಮೇಲಿನಿಂದ ನಾದಸುಧೆ ಹರಿಸುತ್ತಿರುವವರ ಒಂದಾದರೂ ಫೋಟೋ ಇದೆಯೆ ಎಂದು ತಿಳಿದುಕೊಳ್ಳುವ ಕುತೂಹಲ ನನ್ನದು !

ಸ್ಯಾಕ್ಸೊಫೋನ್ ಮಂಗಳವಾದ್ಯವೆಂದು ಮಾನ್ಯತೆ ಗಳಿಸಲಿ, ಗಳಿಸದಿರಲಿ, ಇತ್ತೀಚೆಗೆ ಅದು ನಾದಸ್ವರದ ಸ್ಥಾನ ಹಿಡಿದುಕೊಳ್ಳುತ್ತಿರುವುದು ನಿಜ.

ಮರುದಿನ ಧಾರೆ ಮುಗಿಯುವವರೆಗೂ ನಾನು ನಾದದ ಗುಂಗಿನಲ್ಲಿ ಮುಳುಗಿದ್ದೆ ಎನ್ನಬಹುದು. ಮದುವೆ ಸಾಂಗವಾಯಿತು. ವಧುವರರನ್ನು ಹರಸಲು ಕ್ಯೂ ನಿಂತದ್ದಾಯಿತು. ಫೋಟೋ ತೆಗೆಸಿಕೊಂಡದ್ದಾಯಿತು. ಮದುವೆಗೆ ಬಂದವರು ಲಗುಬಗೆಯಿಂದ ಊಟದ ಹಾಲಿನತ್ತ ದೌಡಾಯಿಸತೊಡಗಿದರು. ನಾನು ವಾದ್ಯವೃಂದದವರತ್ತ ನಡೆದು ಅವರನ್ನು ಮಾತಿಗೆಳೆದೆ.

ವಾದನ ಸೊಗಸಾಗಿತ್ತು ಎಂದು ಅವರನ್ನು ಅಭಿನಂದಿಸಿದಾಗ ಅವರಿಗೆ ಆಶ್ಚರ್ಯ ! ಹೀಗೆ ಮನ ತೆರೆದು ಅಭಿನಂದಿಸುವ ಮಂದಿ ಅಪರೂಪ ಎಂದರು.

ತ್ರಿಮೂರ್ತಿಗಳ ಪೈಕಿ ಮುಖ್ಯ ಕಲಾವಿದ ನಿಂಗರಾಜ ಪಾಂಡವ. ಬಿ.ಎ.ವರೆಗೆ ಕಲಿತವರು. ಜೊತೆಯಲ್ಲಿ ನುಡಿಸುತ್ತಿರುವವರು ಅವರ ಅಕ್ಕನ ಮಕ್ಕಳು. ಅವರು ಪಾಂಡವಪುರದವರು. ತಮ್ಮ ಹೆಸರುಗಳ ಹಿಂದೆ 'ಪಾಂಡವ' ಎಂದು ಸೇರಿಸಿಕೊಳ್ಳುವುದು ಅವರ ಸಂಪ್ರದಾಯ.

ನನ್ನ ತಲೆಗೆ ಮತ್ತೊಂದು ಅಡ್ಡ ಪ್ರಶ್ನೆ ಸುಳಿಯಬೇಕೆ! ದ್ವಾಪರಯುಗದಲ್ಲಿ ಪಾಂಡವರು ಅಜ್ಞಾತವಾಸದಲ್ಲಿದ್ದಾಗ ಕೆಲವು ದಿನ ಪಾಂಡವಪುರದಲ್ಲಿ ತಂಗಿದ್ದಿರಬಹುದೆ ? ಆ ನೆನಪಿಗಾಗಿ ಇವರು ತಮ್ಮ ಹೆಸರಿನ ಹಿಂದೆ 'ಪಾಂಡವ' ಅಭಿಧಾನ ಸೇರಿಸಿಕೊಳ್ಳುತ್ತಿರಬಹುದೆ ?

ಮಂಡ್ಯ ಜಿಲ್ಲೆಯ ಒಂದು ತಾಲ್ಲೂಕು ಮುಖ್ಯ ಸ್ಥಳ ಪಾಂಡವಪುರ. ಕಬ್ಬು, ಭತ್ತ, ರಾಗಿ ಬೆಳೆಯುವ ಕೃಷಿಕರ ಊರು. ಅಲ್ಲಿ ಅವರ ಕುಟುಂಬಗಳು ಹಲವು



ತಲೆಮಾರಿನಿಂದ ಜೀವಿಸುತ್ತ ಬಂದಿವೆ. ಇಂಥ ಅರವತ್ತು ಮಂದಿ ಕಲೆಗಾರರಿರುವುದು ಆ ಊರಿನ ವೈಶಿಷ್ಟ್ಯ. ಮೂರು ನಾಲ್ಕು ಆರ್ಕೆಸ್ಟ್ರಾ ವೃಂದಗಳಿವೆ. ಸ್ಯಾಕ್ಸೊಫೋನ್, ಕ್ಲಾರಿಯೊನೆಟ್, ಕೀಬೋರ್ಡ್, ಗಿಟಾರ್, ಡ್ರಮ್, ತಬಲಾ, ಡೋಲು – ಮುಂತಾದ ವಾದ್ಯಗಳನ್ನು ನುಡಿಸುವವರಿದ್ದಾರೆ. ಪ್ರತಿಯೊಬ್ಬ ಕಲಾವಿದ ಎರಡು ಮೂರು ವಾದ್ಯಗಳನ್ನು ನುಡಿಸಬಲ್ಲವನಾಗಿರುತ್ತಾನೆ. ಪರಸ್ಪರ ಸಹಕಾರ ಅವರ ಧ್ಯೇಯ. ಕಾರ್ಯಕ್ರಮ ಗೊತ್ತಾದ ನಂತರ ಒಂದು ಆರ್ಕೆಸ್ಟ್ರಾದ ಕಲಾವಿದನೊಬ್ಬನಿಗೆ ಏನಾದರೂ ಕಾರಣಕ್ಕೆ ಬರಲು ಸಾಧ್ಯವಾಗದೆ ಹೋದಾಗ, ಮತ್ತೊಂದು ಆರ್ಕೆಸ್ಟ್ರಾದ ಸಹಾಯ ಪಡೆಯಬಹುದು.

'ಕ್ಯಾಮರಾ ಕಣ್ಣು ನಿಮ್ಮ ಕಡೆ ಬಿದ್ದಿತೆ ?' – ಎಂಬ ತುಂಟ ಪ್ರಶ್ನೆಗೆ ನಿಂಗರಾಜ ಪಾಂಡವ ಹೀಗೆಂದರು : ಎಲ್ಲರ ಕಿವಿಗಳನ್ನು ನಾದದಿಂದ ತುಂಬಿಸಿದರೆ ಅಷ್ಟು ಸಾಕು ನಮಗೆ.

'ನಾದಸ್ವರ ಕಲಿಯಲು ಪ್ರಯತ್ನಿಸಲಿಲ್ಲವೆ ?'

'ನನ್ನ ತಂದೆ ನಾದಸ್ವರ ನುಡಿಸುತ್ತಿದ್ದವರೇ. ಆದರೆ ನನಗೆ ಚಿಕ್ಕಂದಿನಿಂದಲೇ ಸ್ಯಾಕ್ಸೊಫೋನ್ ಮೇಲೆ ಆಸಕ್ತಿ. ಕದ್ರಿ ಗೋಪಾಲನಾಥ್ ನನ್ನ ಮಾನಸಿಕ ಗುರು, ಸ್ಫೂರ್ತಿ.'

'ನಾದಸ್ವರ, ಸ್ಯಾಕ್ಸೊಫೋನ್ ಈ ಎರಡರಲ್ಲಿ ಯಾವುದು ಸರಳ, ಕಲಿಯಲು ಸುಲಭ ?'

'ಎರಡರಲ್ಲಿ ಯಾವುದೂ ಹೆಚ್ಚಲ್ಲ, ಯಾವುದೂ ಕಡಿಮೆಯಲ್ಲ. ಎರಡೂ ಸುಲಭದಲ್ಲಿ ಒಲಿಯುವಂಥವಲ್ಲ. ಏಕಾಗ್ರತೆಯನ್ನು, ಅಷ್ಟೇ ಶ್ರಮವನ್ನು ಬೇಡುವ ವಾದ್ಯಗಳು ! '

ನಾದಸ್ವರಕ್ಕಿಂತ ಸ್ಯಾಕ್ಸೊಫೋನ್ ಹೆಚ್ಚು ನವ್ಯವಾದದ್ದು. ತನಿಯಾಗಿ ನುಡಿಸಬಹುದು. ಬ್ಯಾಂಡ್ ಸೆಟ್ಟಿನೊಂದಿಗೆ, ಆರ್ಕೆಸ್ಟ್ರಾದೊಂದಿಗೆ ಚೆನ್ನಾಗಿ ಹೊಂದಿಕೊಳ್ಳುತ್ತದೆ. ಪಕ್ಕವಾದ್ಯಗಳಾಗಿ ಡೋಲು, ತಬಲಾ, ಡ್ರಮ್ – ಈ ಎಲ್ಲ ಚರ್ಮವಾದ್ಯಗಳು ಅದಕ್ಕೆ ಹೊಂದಿಕೆಯಾಗುತ್ತವೆ.

ನಿಂಗರಾಜ ಪಾಂಡವ ವಿದ್ವಾನ್ ಅಣ್ಣಾಸ್ವಾಮಿ ಅವರಲ್ಲಿ ಶಿಷ್ಯವೃತ್ತಿ ಮಾಡಿದರು. ಇವರಿಗೆ ಇಬ್ಬರು ಹೆಣ್ಣು ಮಕ್ಕಳು. ರಾಜ್ಯೋತ್ಸವ ಸಂದರ್ಭದಲ್ಲಿ ಇವರಿಗೆ ಹೆಚ್ಚಿನ ಬೇಡಿಕೆ. ಶಾಸ್ತ್ರೀಯ ರಾಗಗಳಿಗಿಂತ ಹೆಚ್ಚಾಗಿ ಜನರು ಲಘು ಸಂಗೀತ, ಸಿನೆಮಾ ಹಾಡುಗಳನ್ನು ಇಷ್ಟಪಡುತ್ತಾರೆ. ಹಾಗೆಂದು ರಾಮನವಮಿ ಸಂದರ್ಭದಲ್ಲಿ ಇಂಥ ಗಿಮಿಕ್ ಮಾಡಲು ಸಾಧ್ಯವಿಲ್ಲ. ನಮ್ಮ ರಾಜ್ಯದಂತೆ ಉತ್ತರ ಭಾರತದ ಹಲವು ಊರುಗಳಲ್ಲಿ ಇವರು ಕಾರ್ಯಕ್ರಮ ನೀಡಿದ್ದಾರೆ. ಸಿಗುವ ಸಂಭಾವನೆಯನ್ನು ಸದಸ್ಯರು ಸಮನಾಗಿ ಹಂಚಿಕೊಳ್ಳುತ್ತಾರೆ.

ನಿಂಗರಾಜ ಪಾಂಡವ ತಮ್ಮ ಆರ್ಕೆಸ್ಟ್ರಾ ವೃಂದದ ಜೊತೆಗೆ ಮುಂಬೈ, ವಾರಾಣಸಿ, ಚೆನ್ನೈ ಮುಂತಾದ ನಗರಗಳಿಗಲ್ಲದೆ ಆಸ್ಟ್ರೇಲಿಯಾದ ಪರ್ತ್ ನಗರದಲ್ಲಿ, ಅಮೆರಿಕದ ನ್ಯೂಜೆರ್ಸಿಯಲ್ಲಿ ನಡೆದ 'ಅಕ್ಕ' ಸಮ್ಮೇಳನದಲ್ಲಿ ಕಾರ್ಯಕ್ರಮ ನೀಡಿ ಬಂದಿದ್ದಾರೆ. ಇವರ ಸ್ಯಾಕ್ಸೊಫೋನ್ ಸಂಗೀತ ಚಿಕಿತ್ಸೆಗೂ ಬಳಕೆಯಾಗಿದೆ !

ಸಂಗೀತ ವೃತ್ತಿಯೊಂದನ್ನೇ ನೆಚ್ಚಿಕೊಂಡಿರುವ ಇವರಿಗೆ, ತಾತನ ಕಾಲದಲ್ಲಿ ಎರಡು ಎಕರೆಯಷ್ಟು ಜಮೀನಿತ್ತು. ಅದನ್ನು ಬಂಧುಬಳಗದವರಿಗೆ ಮನೆ ಕಟ್ಟಿಕೊಳ್ಳಲು ಹಂಚಲಾಯಿತು. ಉಳಿದದ್ದು ವಾಸದ ಮನೆಯೊಂದೇ. ಇಬ್ಬರು ಹೆಣ್ಣು ಮಕ್ಕಳ ತಂದೆ, ಡೋಲು, ಡ್ರಮ್ – ಮುಂತಾದ ಇವರ ವಾದ್ಯಗಳನ್ನು ಕಂಡರೆ ಬಸ್ಸಿನವರು ಹತ್ತಿಸಿಕೊಳ್ಳುವುದಿಲ್ಲ. ದೂರದ ಊರುಗಳಿಗೆ ಹೋಗುವಾಗ ಬಾಡಿಗೆ ಕಾರಿನಲ್ಲಿ ಹೋಗಬೇಕಾಗುತ್ತದೆ. ಪಯಣದ ಖರ್ಚನ್ನೂ ಇವರೇ ಭರಿಸಬೇಕಾಗುತ್ತದೆ !

ಲೇಖನ ಓದಿದ ಕೆಲವರಿಗೆ ಹೀಗೆನ್ನಿಸಬಹುದು : ಮದುವೆಗೆ ಹೋದದ್ದೇನೋ ಸರಿ. ಮದುಮಕ್ಕಳನ್ನು ಅಭಿನಂದಿಸಿ, ಗಿಫ್ಟ್ ನೀಡಿ, ಗಡದ್ದಾಗಿ ಉಂಡು ವಾಪಸ್ ಬರುವುದು ಬಿಟ್ಟು, ಹಳೆಯ ನೆನಪುಗಳ ಬೆನ್ನೇರಿ, ಮಂಗಳವಾದ್ಯದ ಗುಂಗು ಹಿಡಿಸಿಕೊಳ್ಳುವುದೆ ?

**ಕೆ. ಪಿ. ಸ್ವಾಮಿ**
ನಂ. ೧೦, ೧ನೇ ಮಹಡಿ, ೩ನೇ ಅಡ್ಡರಸ್ತೆ
ಶ್ರೀರಾಮ ದೇವಾಲಯ ರಸ್ತೆ, ಈಜಿಪುರ, ವಿವೇಕನಗರ ಅಂಚೆ
ಬೆಂಗಳೂರು – ೫೬೦ ೦೪೭

ಕೆಲವರು ತಮ್ಮ ಹೆಸರಿನೊಂದಿಗೆ ತಂದೆಯ ಹೆಸರನ್ನು ಸೇರಿಸುತ್ತಾರೆ. ತಾಯಿಯ ಹೆಸರನ್ನಲ್ಲ. ವಿವಾಹವಾದ ನಂತರ ತಮ್ಮ ಹೆಸರಿನಲ್ಲಿದ್ದ ತಂದೆಯ ಹೆಸರು ಮಾಯವಾಗಿಬಿಡುತ್ತೆ. ಆ ಸ್ಥಾನವನ್ನು ಪತಿಯ ಹೆಸರು ಆಕ್ರಮಿಸುತ್ತದೆ. ಪತಿಯ ಹೆಸರಿನಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ವಿವಾಹಕ್ಕೆ ಮೊದಲು ಹಾಗೂ ನಂತರ ಹಾಗೇ ಇರುತ್ತದೆ. ಶ್ರೀನಿವಾಸ ಎಂಬ ಹೆಸರು ಮದುವೆಗೆ ಮುನ್ನ ಇದ್ದರೆ ಮದುವೆಯಾದ ನಂತರವೂ ಶ್ರೀನಿವಾಸನೇ ಆಗಿರುತ್ತಾನೆ. ಅವನ ಹೆಂಡತಿ ಲೀಲಾ ಎಂದಾದರೆ ಶ್ರೀನಿವಾಸ ಲೀಲಾ ಆಗುವುದೇ ಇಲ್ಲ. ಹೀಗಾದಲ್ಲಿ ಅದು ವಿಚಿತ್ರವಾಗಿ ಕಿವಿಗೆ ಬೀಳುತ್ತದೆ. ಇಂತಹ ಬದಲಾವಣೆಗೇ ಶ್ರೀನಿವಾಸನ ಹೆಂಡತಿಯೂ ಸಮ್ಮತಿಸುವುದಿಲ್ಲ !

# ಅವರ ಹೆಸರು ಅವರ ಹೆಸರು ಹೇಗಾಯಿತು?

**ದು**ಡ್ಡಿಲ್ಲ ಕಾಸಿಲ್ಲ ಸಂಪತ್ತಯ್ಯಂಗಾರ್
ಹಾಲಿಲ್ಲ ಮೊಸರಿಲ್ಲ ಕ್ಷೀರಸಾಗರ ಭಟ್ಟ
ರೆಕ್ಕಿಲ್ಲ ಪುಕ್ಕಿಲ್ಲ ಗರುಡಾಚಾರ್
ತೋಟ ಇಲ್ಲ ತುಡಿಕೆ ಇಲ್ಲ ಗದ್ದೆಲಿಂಗಯ್ಯ

ಇಂತಹ ಗಾದೆಗಳನ್ನು ತನ್ನಲ್ಲಿ ಇಲ್ಲದಿದ್ದುದನ್ನು ಇದೆ ಎಂದು ಬೊಗಳೆ ಬಿಡುವ ಮಹಾನುಭಾವರನ್ನು ಅವಹೇಳನ ಮಾಡಲು ಬಳಸಲಾಗುತ್ತದೆ. ಇದು ಎಷ್ಟು ಸಮಂಜಸ ಎಂಬ ಪ್ರಶ್ನೆ ನನ್ನನ್ನು ಕಾಡುತ್ತಿದೆ. ಯಾಕೆಂದರೆ ಅವರು ತನಗೆ ಇಂತಹ ಹೆಸರನ್ನು ಇಡಬೇಕೆಂದು ಅರ್ಜಿಯನ್ನೇನೂ ಗುಜರಾಯಿಸಿರುವುದಿಲ್ಲ ಅಥವಾ ಈ ಹೆಸರನ್ನೇ ನನಗೆ ಇಡಬೇಕೆಂದು ಅಶರೀರವಾಣಿಯ ಮೂಲಕ ಬಿತ್ತರಿಸಿಯೂ ಇರುವುದಿಲ್ಲ. ಆದರೂ ಈ ಹೆಸರನ್ನು ಇಡಲಾಗಿದೆ. ಯಾರದ್ದೋ ಸಂತೋಷಕ್ಕೋ, ತೆವಲಿಗೋ, ಹಂಬಲಕ್ಕೋ ಅಥವಾ ಮತ್ತಾವುದೋ ಕಾರಣಕ್ಕೋ ವ್ಯಕ್ತಿಗೆ ಈ ಹೆಸರು ಗಂಟುಬಿದ್ದಿರುತ್ತದೆ. ಅವನ ಹೆಸರು ಅವನದ್ದೇ ಆಗುವಲ್ಲಿ ಅವನ ಪಾತ್ರವೇನೂ ಇಲ್ಲ. 'ಸಂಪತ್ತೂ' 'ಸಂಪತ್ತೂ' ಅಂತ ಬಾಯಿತುಂಬ ಕರೆಯಿಸಿಕೊಳ್ಳುವ ವ್ಯಕ್ತಿ ಜೆಂಟಲ್‌ಮನ್ ಇನ್ ಸೂಟ್ ಎಂಪ್ಟಿ ಪಾಕೆಟ್ ಆಗಿದ್ದಲ್ಲಿ ಅವನ ಅಪರಾಧ ಏನೂ ಇಲ್ಲ. ಇಂತಹ ಗಾದೆಗಳನ್ನು ಬಳಸುವುದು ಆ ಹೆಸರಿನ ವ್ಯಕ್ತಿಗಳಿಗೆ, ಅವರದ್ದಲ್ಲದ ತಪ್ಪುಗಳಿಗೆ ಅವರಿಗೆ ಮಾಡುವ ಅವಮಾನ ಎಂದೇ ನನ್ನ ಸ್ಪಷ್ಟ ಅಭಿಮತ. ಹಾಗೆ ನೋಡಿದರೆ ಯಾರೂ ಅವರ ಹೆಸರಿಗೆ ಅವರೇ ಜವಾಬ್ದಾರರಾಗಿರುವುದಿಲ್ಲ. ಕೆಲವು ಅಪವಾದಗಳಿರಬಹುದು.



ನಾನು ಪ್ರೌಢಶಾಲಾ ವ್ಯಾಸಂಗ ಮಾಡಿದ್ದು ಮೇಲುಕೋಟೆಯಲ್ಲಿ. ಅಲ್ಲಿ ನನ್ನ ಸಹಪಾಠಿ ಒಬ್ಬ ಇದ್ದ. ಆತನ ಹೆಸರು ಸುಂದರ ಸಂಪತ್‌ಕುಮಾರ ಅಯ್ಯಂಗಾರ್ ಎಂಬುದಾಗಿತ್ತು. ಮೂರು ನಾಲ್ಕು ಜನರಿಗೆ ಆಗಿ ಉಳಿಯಬಹುದಾದಷ್ಟು ಹೆಸರುಗಳನ್ನು ಒಬ್ಬನೇ ಆಪೋಷಣೆ ಮಾಡಿದ್ದ. ತರಗತಿಯ ಎಲ್ಲ ವಿದ್ಯಾರ್ಥಿಗಳೂ ಇಂತಹದ್ದೇ ಹೆಸರನ್ನು ಇಟ್ಟುಕೊಂಡಿದ್ದರೆ ಮಾಸ್ತರುಗಳು ಪಾಠ ಮಾಡುವುದಕ್ಕಿಂತ ಹೆಚ್ಚು ಸಮಯವನ್ನು ಹಾಜರಾತಿ ತೆಗೆದುಕೊಳ್ಳುವುದಕ್ಕೆ ವ್ಯಯಿಸಬೇಕಿತ್ತೇನೋ ! ಅವನ ಪೂರ್ಣ ಹೆಸರನ್ನು ಹೇಳುವ ಶ್ರಮವನ್ನು ಯಾರೂ ತೆಗೆದುಕೊಂಡದ್ದು ಕಾಣೆ. ಅದಕ್ಕೆ ಹಿಂದೆ ಮುಂದೆ ಕತ್ತರಿ ಹಾಕಿ ಎದುರಿನಲ್ಲಿದ್ದಾಗ 'ಸಂಪತ್ತು', 'ಸುಂದರೂ' ಎಂಬುದಾಗಿ ಬೆಣ್ಣೆಯಲ್ಲಿ ಕೂದಲು ತೆಗೆದಂತೆ ನಯವಾಗಿ ಕರೆದರೂ ಬೆನ್ನಹಿಂದೆ 'ಮಾರುದ್ದ' ಎಂದು ಗೇಲಿ ಮಾಡುತ್ತಿದ್ದೆವು. ಇದು ಅವನಿಗೆ ತಿಳಿದಾಗ ನೊಂದುಕೊಳ್ಳುತ್ತಿದ್ದ. ತನ್ನನ್ನು ಹೆತ್ತವರಿಗೆ ಶಾಪ ಹಾಕುತ್ತಿದ್ದ. ಇದಕ್ಕೆ ಕಾರಣವೂ ಇತ್ತು. ಅವನ ತಾಯಿಯ ತಂದೆಯ ಹೆಸರು ಸುಂದರ ಅಯ್ಯಂಗಾರ್. ತನ್ನ ತಂದೆಯ ಪಡಿಯಚ್ಚು ಈ ಕಂದ ಎಂಬ ನಂಬಿಕೆ ಆ ತಾಯಿಯದ್ದು. ಅವರ ಹೆಸರನ್ನೇ ತನ್ನ ಕುಮಾರ ಕಂಠೀರವನಿಗೆ ಇಡಬೇಕೆಂದು ಆಕೆಯ ಆಸೆ. ಆದರೆ ಆ ಮಗು ಉದ್ಧಾರ ಮಾಡಬೇಕಾದದ್ದು ತಂದೆಯ ವಂಶವನ್ನು, ತಾಯಿಯ ವಂಶವನ್ನಲ್ಲ. ತನ್ನ ವಂಶೋದ್ಧಾರಕನಿಗೆ ತನ್ನ ತಂದೆಯ ಹೆಸರಾದ ಸಂಪತ್ ಅಯ್ಯಂಗಾರ್ ಎಂಬುದೇ ಶ್ರೇಯಸ್ಕರ ಎಂದು ತಂದೆಯ ಸ್ಪಷ್ಟ ನಿಲುವು. ಕುಮಾರ ಕಂಠೀರವನ ನಾಮಕರಣವೇ ಗಂಡಹೆಂಡಿರ ವೈಮನಸ್ಯಕ್ಕೆ ಕಾರಣವಾಗಿದ್ದುದನ್ನು

**ಎಚ್. ಎಲ್. ಕೇಶವಮೂರ್ತಿ**

ತಿಳಿದು ಹಿರಿಯರೊಬ್ಬರು, 'ದಾಂಪತ್ಯ ಜೀವನದಲ್ಲಿ ಇವೆಲ್ಲ ಸಹಜ. ಇಬ್ಬರ ಆಲೋಚನೆಯೂ ಸರಿಯಾಗೇ ಇದೆ. ಇಬ್ಬರ ತಂದೆಯ ಹೆಸರನ್ನೂ ಮಗುವಿಗೆ ಇಟ್ಟುಬಿಡಿ' ಎಂದು ಖಾಜಿನ್ಯಾಯ ಮಾಡಿದರಂತೆ. ಅವರೆಲ್ಲರ ಮುದ್ದಿನ ಕುವರ ಇವನಾಗಿದ್ದರಿಂದ ಸುಂದರ ಸಂಪತ್ ಕುಮಾರ ಅಯ್ಯಂಗಾರ್ ಎಂದು ನಾಮಕರಣ ಮಾಡಿದರಂತೆ !

ಕೆಲವು ಕನ್ನಡ ಸಾಹಿತ್ಯ ದಿಗ್ಗಜರಿದ್ದಾರೆ. ಅವರಿಗೆ ಸಂಸ್ಕೃತದ ಮೇಲೆ ವಿಪರೀತ ವ್ಯಾಮೋಹ. ಮಾತಿನಲ್ಲಿ, ಬರಹದಲ್ಲಿ ಸಂಸ್ಕೃತ ಪದಗಳನ್ನು ಯಥೇಚ್ಛವಾಗಿ ಬಳಸಿದರೇ ಭಾಷೆಯ ಮೇಲಿನ ಪ್ರಭುತ್ವ ಘನವಾಗಿದೆ ಎಂದು ಜನರು ಮೆಚ್ಚುವುದು ಎಂದೇ ಅವರ ನಂಬಿಕೆ. ಹಾಗೆ, ಮಾಡಿದಾಗಲೇ ಅವರಿಗೆ ತೃಪ್ತಿ. ಅಂತಹವರು ತಮಗಿರುವ ಭಾಷಾಪ್ರೌಢಿಮೆಯನ್ನು, ಆಳವಾದ ಸಾಹಿತ್ಯಜ್ಞಾನವನ್ನು, ಸಂಸ್ಕೃತಿ ಮೇಲಿನ ಅಗಾಧ ಪ್ರೀತಿಯನ್ನು ತಮ್ಮ ಮಕ್ಕಳಿಗೆ ಹೆಸರಿಡುವಲ್ಲಿ ತೋರಿಸುತ್ತಾರೆ. ಆ ಹೆಸರುಗಳು ಸಾಮಾನ್ಯರ ಪ್ರಜ್ಞಾವಲಯಕ್ಕೆ ಸುಲಭಕ್ಕೆ ಬರುವುದಿಲ್ಲ. ಬಂದಮೇಲೂ ಅವುಗಳ ಉಚ್ಚಾರಣೆಗೆ ಬಡಪಾಯಿ ನಾಲಗೆ ತುಂಬಾನೆ ಶ್ರಮಪಡಬೇಕು. ಇಂತಹ ಒಬ್ಬರು ತಮ್ಮ ಪುತ್ರರತ್ನಕ್ಕೆ 'ಅರ್ಚೀಷ್ಮತಿ ಶೋಭಿತ ಕುವರ' ಎಂದು ನಾಮಕರಣ ಮಾಡಿದರು. ಇದನ್ನು ಹೆಮ್ಮೆಯಿಂದ ಹೇಳುತ್ತಾ ಬೀಗಿದರಾದರೂ ಅವರ ತಾಯಿ, 'ಇದೇನ್ಲಾ ಮಗ, ಈ ಮಗೀಗೆ ಅರಚೋಪತಿ ಸೋಬನ ಅಂತ ಹೆಸರಿಟ್ಟಿದ್ದೀಯಲ್ಲಾ' ಅಂತ ಕೇಳಿದಾಗ ಸಂಸ್ಕೃತ ಪಂಡಿತೋತ್ತಮರು ...

ಸಾಮಾನ್ಯರಿಗೆ ಸಂಸ್ಕೃತ ಪ್ರತಿಷ್ಠೆ ಬಹಳವಾಗಿ ಕಾಡುವುದಿಲ್ಲ. ಅವರು ತಮ್ಮ ವಂಶೋದ್ಧಾರಕರಿಗೆ ಸರಳವಾದ ಹೆಸರನ್ನು ಇಡುತ್ತಾರೆ. ದೇವರ ಹೆಸರನ್ನು ಇಟ್ಟರೆ ಶ್ರೇಯಸ್ಸು ಎಂದು ಅವರು ನಂಬಿರುತ್ತಾರೆ. ಅದರಲ್ಲೂ ಒಂದು ತೊಡಕಿದೆ. ಸಾಮಾನ್ಯವಾದ ಹೆಸರುಗಳು ಅಂದರೆ ಕೃಷ್ಣ, ರಾಮ, ನಾರಾಯಣ, ಶ್ರೀನಿವಾಸ ಇಂತಹವು. ಹೀಗಾಗಿ ಒಂದೇ ಬಡಾವಣೆಯಲ್ಲಿ ಹಲವಾರು ನಾರಾಯಣಗಳು, ಹತ್ತೆಂಟು ಶ್ರೀನಿವಾಸಗಳು, ಸಾಕಷ್ಟು ರಾಮಗಳು, ಬೇಕಾದಷ್ಟು ಕೃಷ್ಣಗಳು ಇರುವ ಸಾಧ್ಯತೆ ಇದೆ. ನಾರಾಯಣ ಎಂದರೆ ಯಾವ ನಾರಾಯಣ ಎಂಬ ಪ್ರಶ್ನೆ ಬರುತ್ತದೆ. ದೇಹದ ವರ್ಣನೆ ಮಾಡಿದರೂ ಅಂತಹವರು ಐದಾರು ಮಂದಿ ಇರುವ ಸಂಭವ ಇರುತ್ತದೆ. ಅವರಲ್ಲಿ ಯಾರು ಎಂಬ ಪ್ರಶ್ನೆ ಬರಬಹುದು. ಸಮಸ್ಯೆಗಳು ಎದುರಾದಾಗ ಅದಕ್ಕೆ ಪರಿಹಾರ ಕಂಡುಹಿಡಿಯಲು ಚೈತನ್ಯ ಚುರುಕಾಗುತ್ತಂತೆ. ಇಂತಹ ಒಂದು ಸಮಸ್ಯೆ ಬೆಂಗಳೂರಿನ ಒಂದು ಬಡಾವಣೆಯಲ್ಲಿದ್ದವರಿಗೆ ಬಂದಿತಂತೆ. ಅಲ್ಲಿ ನಾರಾಯಣರು ಬಹಳ ಇದ್ದರಂತೆ. ಅವರೆಲ್ಲ ವಿವಿಧ ಕಾರ್ಖಾನೆಗಳಲ್ಲಿ ಸರ್ಕಾರಿ ಇಲಾಖೆಗಳಲ್ಲಿ, ಖಾಸಗಿ ಉದ್ದಿಮೆಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದರಂತೆ. ಅವರನ್ನು ಕರಾರುವಾಕ್ಕಾಗಿ ಗುರುತಿಸಲು ಹೆಚ್ಎಎಲ್ ನಾರಾಯಣ, ಬಿಇಎಲ್ ನಾರಾಯಣ, ಎಚ್ಎಂಟಿ ನಾರಾಯಣ, ಸರ್ವೆ ನಾರಾಯಣ, ಅಕೌಂಟ್ಸ್ ನಾರಾಯಣ, ಹೊಟೇಲ್ ನಾರಾಯಣ ಹೀಗೆ ಹೇಳುತ್ತಿದ್ದರಂತೆ !

ಸೋಜಿಗದ ಸಂಗತಿ ಎಂದರೆ ನನ್ನ ಹೆಸರು ನನ್ನ ಹೆಸರಾಗಲು ನಾನು ಯಾವುದೇ ರೀತಿಯಲ್ಲಿ ಕಾರಣ ನಲ್ಲದಿದ್ದರೂ ಕಾಲ ಕಳೆದಂತೆ ಆ ಹೆಸರಿನ ಬಗೆಗೆ ಏನೋ ಒಂದು ರೀತಿಯ ವ್ಯಾಮೋಹ ಆವರಿಸುತ್ತದೆ. ಅದನ್ನು ಯಾರಾದರೂ ತಪ್ಪು ತಪ್ಪಾಗಿ ಉಚ್ಚರಿಸಿದರೆ ಮನಸ್ಸಿಗೆ ಕಿರಿಕಿರಿಯಾಗುತ್ತದೆ. ಹಾಗೆ ಮಾಡಿದವರ ಬಗೆಗೆ ಉಂಟಾಗುವ ಕ್ಲೇಶ ಭಾವನೆಯನ್ನು ಸುಲಭವಾಗಿ ಹೋಗಲಾಡಿಸ ಲಾಗುವುದಿಲ್ಲ. ಬರೆಯುವಾಗ ತಪ್ಪು ಮಾಡುವುದು ಸಹಜವೇನೋ ಸರಿ. ಆದರೆ ಹೆಸರನ್ನು ತಪ್ಪಾಗಿ ಬರೆದದ್ದು ಕಂಡುಬಂದರೆ ಉದ್ದೇಶಪೂರ್ವಕ ವಾಗಿಯೇ ಹೀಗೆ ಬರೆದಿದ್ದಾರೆ ಎಂಬ ಅನುಮಾನ ಕಾಡುತ್ತದೆ. ಮನಸ್ಸಿಗೆ ಹಿಂಸೆಯಾಗುತ್ತದೆ. ನನ್ನದು, ನನಗೆ ಸೇರಿದ್ದು, ನನ್ನ ಸ್ವತ್ತು ಇದು. ಇದರ ಅತಿಕ್ರಮಣ ಆಗಬಾರದು ಎಂಬ ಅಪ್ರಜ್ಞಾಪೂರ್ವಕ ತಿಳುವಳಿಕೆ ಇದಕ್ಕೆ ಕಾರಣ ಇರಬಹುದು.

ಸಂಸ್ಕೃತ ವ್ಯಾಮೋಹಿ ಪಂಡಿತರ ವಿಷಯ ಪ್ರಸ್ತಾಪಿಸಿದೆನಲ್ಲ. ಅವರು ತಮ್ಮ ಗಂಡುಮಕ್ಕಳಿಗೆ ಸುಲಭಕ್ಕೆ ನಾಲಗೆ ಹೊರಳದ ಹೆಸರನ್ನು ಇಟ್ಟಿದ್ದನ್ನು ಹೇಳಿದೆನಲ್ಲ. ಆಶ್ಚರ್ಯವೋ ಎಂಬಂತೆ ತಮ್ಮ ಹೆಣ್ಣುಮಕ್ಕಳಿಗೆ ಮಾತ್ರ ಸರಳ ಸಾಮಾನ್ಯ ಹೆಸರನ್ನೇ ಇಡುತ್ತಾರೆ. ಇದು ಲಿಂಗ ತಾರತಮ್ಯದ ಪರಾಕಾಷ್ಠೆಯೋ ಅಥವಾ ಸಂಸ್ಕೃತ ಭೂಯಿಷ್ಠ ಹೆಸರನ್ನು ಇಟ್ಟರೆ ಆ ಹೆಸರನ್ನು ಕೇಳಿಯೇ ಭಾವೀ ವರಮಹಾಶಯರು ಪಲಾಯನಗೈಯಬಹುದು ಎಂಬ ಭಯವೋ ತಿಳಿಯದು.

ಲಿಂಗ ತಾರತಮ್ಯ ಕುರಿತು ಮಾತು ಬಂತಲ್ಲ, ಇದಕ್ಕೆ ಪುರುಷರನ್ನೇ ಸಂಪೂರ್ಣ ಹೊಣೆ ಮಾಡಲಾಗದು. ಹೆಣ್ಣು ತಾನಾಗಿಯೇ ಗಂಡಿನ ಅಡಿಯಾಳಾಗುವುದನ್ನು ಬಯಸುತ್ತಾಳೇನೋ, ಆಕೆಯೂ ಪುರುಷ ಪಕ್ಷಪಾತಿಯೇನೋ ಎಂಬ ಅನುಮಾನ ನನಗಿದೆ. ಅವರ ಹೆಸರುಗಳನ್ನು ಗಮನಿಸಿ. ಕೆಲವರು ತಮ್ಮ ಹೆಸರಿನೊಂದಿಗೆ ತಂದೆಯ ಹೆಸರನ್ನು ಸೇರಿಸುತ್ತಾರೆ, ತಾಯಿಯ ಹೆಸರನ್ನಲ್ಲ. ವಿವಾಹವಾದ ನಂತರ ತಮ್ಮ ಹೆಸರಿನಲ್ಲಿದ್ದ ತಂದೆಯ ಹೆಸರು ಮಾಯವಾಗಿಬಿಡುತ್ತೆ. ಆ ಸ್ಥಾನವನ್ನು ಪತಿಯ ಹೆಸರು ಆಕ್ರಮಿಸುತ್ತದೆ. ಪತಿಯ ಹೆಸರಿನಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ವಿವಾಹಕ್ಕೆ ಮೊದಲು ಹಾಗೂ ನಂತರ ಹಾಗೇ ಇರುತ್ತದೆ. ಶ್ರೀನಿವಾಸ ಎಂಬ ಹೆಸರು ಮದುವೆಗೆ ಮುನ್ನ ಇದ್ದರೆ ಮದುವೆಯಾದ ನಂತರವೂ ಶ್ರೀನಿವಾಸನೇ ಆಗಿರುತ್ತಾನೆ. ಅವನ ಹೆಂಡತಿ ಲೀಲಾ ಎಂದಾದರೆ ಶ್ರೀನಿವಾಸ ಲೀಲಾ ಆಗುವುದೇ ಇಲ್ಲ. ಹೀಗಾದಲ್ಲಿ ಅದು ವಿಚಿತ್ರವಾಗಿ ಕಿವಿಗೆ ಬೀಳುತ್ತದೆ. ಇಂತಹ ಬದಲಾವಣೆಗೆ ಶ್ರೀನಿವಾಸನ ಹೆಂಡತಿಯೂ ಸಮ್ಮತಿಸುವುದಿಲ್ಲ !

ವಿವಾಹದ ನಂತರ ಹೆಣ್ಣುಮಕ್ಕಳ ಹೆಸರಿನಲ್ಲಿ ಆಗುವ ತಂದೆಯ ಸ್ಥಾನಪಲ್ಲಟದಿಂದ ಉಂಟಾಗುವ ಗೊಂದಲವನ್ನು ಕೇರಳದ ಹೆಣ್ಣುಮಗಳೊಬ್ಬಳು ವಿವರಿಸಿದ್ದ ನೆನಪು. ಅನೇಕ ಹೆಣ್ಣುಮಕ್ಕಳು ಶಾಲಾ ಕಾಲೇಜುಗಳಲ್ಲಿ ಆಕೆಯ ಸಹಪಾಠಿಗಳಾಗಿದ್ದರಂತೆ. ಅವರಲ್ಲಿ ಕೆಲವರು ವಿವಾಹದ ನಂತರ ಅಮೆರಿಕದಲ್ಲಿ ವಾಸವಾಗಿದ್ದರಂತೆ. ಒಮ್ಮೆ ಅಮೆರಿಕಕ್ಕೆ ಹೋಗುವ ಅವಕಾಶ ಆಕೆಗೆ ದೊರೆಯಿತಂತೆ. ಅಲ್ಲಿ ಆಕೆ ತನ್ನ ಹಳೆಯ ಗೆಳತಿಯರನ್ನು ಸಂಪರ್ಕಿಸಲು ಬಯಸಿದರಂತೆ.

ಟೆಲಿಫೋನ್ ಡೈರೆಕ್ಟರಿಯಲ್ಲಿ ಗೆಳತಿಯರ ಹೆಸರನ್ನು ಹುಡುಕಿದರಂತೆ. ರೀಟಾ ಫರ್ನಾಂಡಿಸ್ ಎನ್ನುವ ಗೆಳತಿಯ ಹೆಸರು ಸಿಕ್ಕಿತಂತೆ. ಗೆಳತಿಯ ಉತ್ಸಾಹದ ದನಿಯನ್ನು ನಿರೀಕ್ಷಿಸುತ್ತಾ ರಿಂಗ್ ಮಾಡಿ ಮಾತನಾಡಲು ಪ್ರಯತ್ನಿಸಿದಾಗ, ಆ ಕಡೆಯಿಂದ ರಾಂಗ್ ನಂಬರ್ ಎನ್ನುವ ಗೊಗ್ಗರು ದನಿ ಬಂದಿತಂತೆ. ಮತ್ತೆ ಡೈರೆಕ್ಟರಿಯಲ್ಲಿ ತಡಕಿದರಂತೆ. ಎಂತೆಂತಹ ರೀಟಾಗಳೋ ಇದ್ದರಂತೆ. ಆದರೆ ಅವರಾರೂ ಇವರಿಗೆ ಬೇಕಾಗಿದ್ದ ರೀಟಾ ಫರ್ನಾಂಡಿಸ್ ಆಗಿರಲಿಲ್ಲವಂತೆ ! ಹಿಂದೆ ರೀಟಾ ಫರ್ನಾಂಡಿಸ್ ಆಗಿದ್ದವಳು ಈಗ ರೀಟಾ ನಂತರ ಯಾವ ಹೆಸರಿದೆಯೋ ಎಂದು ಗೊಂದಲ ಕ್ಕೊಳಗಾದರಂತೆ. ತಮಗೆ ಆದ ಅನುಭವವನ್ನು ವಿವರಿಸಿದ ನಂತರ ಅವರು ಹೇಳಿದ್ದು: ವಿವಾಹವಾದ ಮಾತ್ರಕ್ಕೆ ಮಹಿಳೆ ತನ್ನ ಹೆಸರನ್ನು ಬದಲಾಯಿಸಿ ಕೊಳ್ಳಬೇಕೆ ? ಆಕೆಗೆ ಅವಳತನ ಎನ್ನುವುದು ಇಲ್ಲವೇ ?

**ಎಚ್. ಎಲ್. ಕೇಶವಮೂರ್ತಿ**
ನಂ. ೧೩, ಹೌಸಿಂಗ್ ಬೋರ್ಡ್ ಅಪಾರ್ಟ್‌ಮೆಂಟ್ಸ್
ಅಗ್ನಿಶಾಮಕ ಠಾಣೆ ಎದುರು, ಗುತ್ತಲು ಅಂಚೆ
ಮಂಡ್ಯ – ೫೭೧ ೪೦೩

## ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತರಿಗೆ ಅಭಿನಂದನೆ

ಕರ್ನಾಟಕ ಸಾಹಿತ್ಯ ಅಕಾಡೆಮಿಯು ಕೊಡುವ '೨೦೧೩ನೇ ಸಾಲಿನ ಗೌರವ ಪ್ರಶಸ್ತಿ'ಯು ಪ್ರೊ॥ ಕೆ. ಎಸ್. ಭಗವಾನ್, ಡಾ॥ ಬಿ. ಎನ್, ಸುಮಿತ್ರಾಬಾಯಿ, ಡಾ॥ ಮೊಗಳ್ಳಿ ಗಣೇಶ್, ಡಾ॥ ರಾಜೇಂದ್ರ ಚೆನ್ನಿ ಮತ್ತು ಡಾ॥ ರಹಮತ್ ತರೀಕೆರೆ ಅವರುಗಳಿಗೆ ದೊರೆತಿದೆ. ಕುಲದೀಪ್ ನಯ್ಯರ್ ಅವರ ಆತ್ಮಕಥೆಯ ಅನುವಾದ 'ಒಂದು ಜೀವನ ಸಾಲದು' ಕೃತಿಗೆ '೨೦೧೨ರ ವರ್ಷದ ಪುಸ್ತಕ ಬಹುಮಾನ'ವೂ ದೊರಕಿದೆ. ಇದನ್ನು ಡಾ॥ ಆರ್. ಪೂರ್ಣಿಮಾ ಅವರು ಅನುವಾದಿಸಿದ್ದು, ನವಕರ್ನಾಟಕ ಪ್ರಕಟಿಸಿದೆ. ಪುರಸ್ಕೃತ ಲೇಖಕರೆಲ್ಲರಿಗೂ 'ಹೊಸತು' ಹಾಗೂ 'ನವಕರ್ನಾಟಕ ಪ್ರಕಾಶನ' ಬಳಗದಿಂದ ಹಾರ್ದಿಕ ಅಭಿನಂದನೆಗಳು.

# ಕೊನೆ ಎಲೆ

**ಎಸ್. ಎನ್. ಸ್ವಾಮಿ**

## ದೃಶ್ಯ – ಒಂದು

(ರೈಲ್ವೇ ಸ್ಟೇಷನ್ ದೃಶ್ಯ. ಮೂರ್‍ನಾಲ್ಕು ಜನರ ಒಂದು ಗುಂಪು ಮಾತನಾಡುತ್ತಿದೆ. ಒಂದಿಬ್ಬರು ಬಂದು ಹೋಗುತ್ತಿದ್ದಾರೆ. ಒಂದಿಬ್ಬರು ಕುಳಿತುಕೊಂಡು ಯಾರಿಗೋ ಕಾಯುತ್ತಾ ಮೆಲುದನಿಯಲ್ಲಿ ಮಾತನಾಡುತ್ತಿದ್ದಾರೆ. ಗುಂಪಿನಲ್ಲಿ ಮಾತನಾಡುತ್ತಾ ನಿಂತಿದ್ದವರು ಇದ್ದಕ್ಕಿದ್ದಂತೆ ಜೋರಾಗಿ ಗಹಗಹಿಸಿ ನಗುತ್ತಾರೆ. ಮಾತನಾಡಿ ನಗುತ್ತಾರೆ. ನಗುತ್ತಾ ಮಾತನಾಡುತ್ತಾರೆ. ಅದೇ ಸಮಯದಲ್ಲಿ ಅವರನ್ನೆಲ್ಲಾ ಹಾದುಹೋಗುತ್ತಿದ್ದ ಜೆನ್ನಿ ತಿರುಗುತ್ತಾಳೆ)

**ಜೇಮ್ಸ್** : ಹೊ ಜೆನ್ನಿ ! ಬಾ ಇಲ್ಲಿ, ಬಾ ಇಲ್ಲಿ. (ಜೆನ್ನಿ ಹತ್ತಿರ ಬರುತ್ತಾಳೆ)

**ಜೆನ್ನಿ** : ಏನು ಜೇಮ್ಸ್ ? ಅಷ್ಟೊಂದು ನಗು ?

**ಟಾಮ್** : ನಿಮಗೆ... ನಿಮ್ಮಂಥ ಕಲಾವಿದರಿಗೆ... (ಮತ್ತೆ ಜೋರಾಗಿ ನಗುತ್ತಾನೆ)

**ಜೆನ್ನಿ** : ಏನದು ? ನಮ್ಮಂಥ ಕಲಾವಿದರಿಗೆ ?

**ಟಾಮ್** : ಮ್ಯಾಕ್‌ವೆಲ್, ನನ್ನ ಕೈಲಿ ಆಗೋದಿಲ್ಲ. ನೀನೇ ಹೇಳು. (ನಗು)

**ಮ್ಯಾಕ್‌ವೆಲ್** : ನೋಡು ಜೆನ್ನಿ, ಅದು ಹೀಗೆ. ಈ ಗ್ರೀನ್‌ವಿಚ್ ಹಳ್ಳಿ ಕಲಾವಿದರಿಗೆ ಎಷ್ಟು ಅನುಕೂಲ ಅನ್ನುವುದರ ಬಗ್ಗೆ ಮಾತಾಡ್ತಾ ಇದ್ವಿ. ಕಲಾವಿದರು ಬಣ್ಣ, ಬ್ರಷ್, ಕ್ಯಾನ್ವಾಸ್, ಏನೇನ್ ಬೇಕೊ ಎಲ್ಲಾನೂ ಸಾಲ ತಗೋಳ್ಳೋದು. ಈ ಹಳ್ಳಿಗೆ ಬನ್ನಿ, ಕೊಡ್ತೀವಿ ಅಂತ ಹೇಳೋದು. ಅಂಗಡಿಯವನೇನಾದ್ರೂ ಅವನನ್ನ ಹುಡುಕಿಕೊಂಡು ಬಂದರೆ...

**ಜೆನ್ನಿ** : ಬಂದರೆ ?

**ಟಾಮ್** : ಬಂದಾಗ, ಈ ಚಕ್ರವ್ಯೂಹದ ರಸ್ತೆಗಳಲ್ಲಿ ಹುಡುಕಿಕೊಂಡು ಒಳಗೆ ಬರ್‍ತಾ ಇರ್‍ತಾನೆ. ಕೊನೇಲಿ ನೋಡಿದ್ರೆ ಊರ ಹೊರಗಡೆ ಹೊರಟ್ಹೋಗಿರ್‍ತಾನೆ. (ಎಲ್ಲರೂ ನಗುತ್ತಾರೆ)

**ಜೇಮ್ಸ್** : ಆಗ ನಮ್ಮ ಕಲಾವಿದರು ಆರಾಮವಾಗಿ ಚಿತ್ರ ಬಿಡಿಸ್ತಾ ಇರಬಹುದು. ಅಲ್ವಾ ಗೋವನ್ ?

**ಗೋವನ್** : ಹೌದೌದು. ಅದಕ್ಕೇ ನಮ್ಮ ಬಹರ್ಮನ್ ಕೂಡ ಇಲ್ಲಿಗೇ ಬರ್‍ತಿದಾನೆ.

**ಜೇಮ್ಸ್** : ಯಾರು ಆ ಮಹಾಕೃತಿ ಬಹರ್ಮನ್ನಾ ?

**ಗೋವನ್** : ಹೌದು.

**ಜೇಮ್ಸ್** : (ವ್ಯಂಗ್ಯವಾಗಿ) ಎಲ್ಲಾ ಕಡೆ ಮಹಾಕೃತಿ ರಚಿಸಿದ್ದಾಯಿತು. ಈಗ ಇಲ್ಲಿಗೆ ಬರ್‍ತಿದಾನ ?

**ಟಾಮ್** : ಏನದು ಮಹಾಕೃತಿ ?

**ಜೇಮ್ಸ್** : ಅದೊಂದು ದೊಡ್ಡ ಕಥೆ ಟಾಮ್. ಈ ಬಹರ್ಮನ್ ಇದಾನಲ್ಲ, ಅವನು ಬಹಳ ಒಳ್ಳೆ ಕಲಾವಿದ. ಆದರೆ ಯಾವ ಕೃತೀನೂ ರಚಿಸ್ತಾ ಇಲ್ಲ. ಸುಮಾರು ವರ್ಷಗಳಿಂದ, ನಾನೊಂದು ಮಹಾಕೃತಿ ರಚಿಸ್ತೇನೆ ಅಂತಿದಾನೆ. ಕ್ಯಾನ್ವಾಸ್ ಅಂತೂ ಯಾವಾಗ್ಲೂ ರೆಡಿ ಇರುತ್ತೆ. ಬಣ್ಣ, ಬ್ರಷ್ ಜೊತೇಲಿದ್ರೂ ಮಹಾಕೃತಿ ಇರಲಿ, ಕ್ಯಾನ್ವಾಸ್ ಮೇಲೆ ಒಂದು ಗೆರೇನೂ ಬಿದ್ದಿಲ್ಲ. ಇಲ್ಲಾದ್ರೂ ಅವನ ಅದೃಷ್ಟ ಖುಲಾಯಿಸಬಹುದು.

**ಜೆನ್ನಿ** : ಪಾಪ, ನ್ಯುಮೋನಿಯಾದಿಂದ ನರಳಿ, ನರಳಿ ಒಣಗ್ಹೋಗಿದಾನೆ. ಇಲ್ಲಿಗೆ ಬಂದು ಆರೋಗ್ಯ ಸುಧಾರಿಸಲಿ ಅಂತ ಹಾರೈಸೋಣ. ಹಾಂ ! ಅವನು ಬರೋದ್ರಿಂದ ಇನ್ನೂ ಒಂದು ಅನುಕೂಲ ಇದೆ. ಅವನಿಗೆ ಸ್ವಲ್ಪ ಹಣ ಕೊಟ್ರೆ ಸಾಕು, ಮಾಡೆಲ್ ಕೂತ್ಕೋತಾನೆ. ಇಲ್ಲಾಂದ್ರೆ ಅದಕ್ಕೊಂದಿಷ್ಟು ಹಣ ಸುರೀಬೇಕು. ಈಗಾಗಲೇ ಬಣ್ಣ, ಬ್ರಷ್ ತಗೊಂಡೇ ಬಡವರಾಗಿದೀವಿ.

**ಜೇಮ್ಸ್** : ಅದೊ, ಬಹರ್ಮನ್ ಬಂದ. ವೆಲ್‌ಕಮ್ ಟು ಆರ್ಟಿಸ್ಟ್ಸ್ ರಿಹ್ಯಾಬಿಲಿಟೇಶನ್ ಸೆಂಟರ್. (ಎಲ್ಲರೂ ನಗುತ್ತಾರೆ)

**ಮ್ಯಾಕ್‌ವೆಲ್** : ಹೇಗಿದ್ದೀಯಾ ಬಹರ್ಮನ್ ?

**ಬಹರ್ಮನ್** : ನಾನಾ ? ಚೆನ್ನಾಗಿದ್ದೀನಿ. ನೀವೆಲ್ಲಾ ಹೇಗಿದ್ದೀರಾ ?

**ಎಲ್ಲರೂ** : ಚೆನ್ನಾಗಿದೀವಿ. ಜೀವನ ನಡೀತಾ ಇದೆ. ಇದೀವಿ ಜೀವಂತವಾಗಿ.

**ಜೆನ್ನಿ** : ನೀನು ಬಂದಿದ್ದು ನಮಗೆಲ್ಲಾ ಸಂತೋಷ ಆಯ್ತು.

**ಜೇಮ್ಸ್** : ಎಲ್ಲಿ ನಿನ್ನ ಮಹಾಕೃತಿ ? ನಾವಂತೂ ಕಾಯ್ತಾ ಕಾಯ್ತಾ ಮುದುಕರಾದ್ವಿ. (ಎಲ್ಲರೂ ನಗುತ್ತಾರೆ)

**ಬಹರ್ಮನ್** : ಬರುತ್ತೆ, ಬರುತ್ತೆ. ಯಾವುದೇ ಆದ್ರೂ, ಅದು ಬರಬೇಕಾದ ಗಳಿಗೆ ಬರಬೇಕು. ಆದ್ರೆ ಬಂದಾಗ ಕಣ್ಣುಮುಚ್ಚಿಕೊಂಡು ಕುಳಿತುಕೊಳ್ಳಬಾರದು. ಸುಮ್ನೆ ಬಾ ಅಂದ್ರೆ ಬರಲ್ಲ. ಜೀವನದಲ್ಲಿ ಬರೋ ಒಳ್ಳೇ ಕಾಲಕ್ಕೆ ಕಾಯಬೇಕು. ಅದಕ್ಕೋಸ್ಕರ ಮನಸ್ಸು, ಪ್ರಯತ್ನ ಎರಡೂ ಕೆಲಸ ಮಾಡ್ತಾ ಇರಬೇಕು.



ಬರಲೇಬೇಕಾದ ಸಮಯ ಬಂದಾಗ ಅದೇ ಕಿತ್ಕೊಂಡು ಬರುತ್ತೆ. ಆಗ ನನ್ನ ಮಹಾಕೃತಿ ರಚನೆಯಾಗುತ್ತೆ.

**ಜೆನ್ನಿ** : ಅಂಥ ದಿನ ಬೇಗ ಬರಲಿ. ಹೋ! ಡಾಕ್ಟರ್ ಬಂದರು. (ಎಲ್ಲರೂ ಆ ಕಡೆ ತಿರುಗುತ್ತಾರೆ) ಸಾರ್... (ಜೆನ್ನಿ ಡಾಕ್ಟರ್ ಕಡೆ ಹೋಗುತ್ತಾಳೆ. ಎಲ್ಲರೂ ಡಾಕ್ಟರ್ ಕಡೆ ನಡೆಯುತ್ತಾರೆ)

**ಬಹರ್ಮನ್** : ಯಾರು ಆ ಡಾಕ್ಟರ್ ?

**ಗೋವನ್** : ಅವರು ಡಾ॥ ಹೆನ್ರಿ. ಜೆನ್ನಿ ಸ್ನೇಹಿತೆ ಜಾನ್ಸಿಗೆ ಹುಷಾರಿಲ್ಲ. ಅವರೇ ನೋಡ್ತಾ ಇರೋದು.

**ಬಹರ್ಮನ್** : ಅವಳಿಗೆ ಏನಾಗಿದೆ ?

**ಗೋವನ್** : ಯಾರಿಗ್ಗೊತ್ತು. ದಿನೇದಿನೇ ಸೊರಗಿ ಹೋಗ್ತಿದಾಳೆ. ಈ ಡಾಕ್ಟರಿಗೂ ಏನೂ ಅರ್ಥ ಆಗ್ತಿಲ್ಲ. ಇವತ್ತೇನೋ ರಿಪೋರ್ಟ್ ಬರುತ್ತೆ, ನೋಡಿ ಹೇಳ್ತೀನಿ ಅಂದಿದಾರೆ. ನಡಿ ಕೇಳೋಣ.

**ಜೆನ್ನಿ** : (ಆತಂಕದಿಂದ) ಡಾಕ್ಟರ್ ಏನಾಯ್ತು ?

**ಡಾಕ್ಟರ್** : ಕುದುರೇನ ನೀರಿನವರೆಗೂ ಕರೆದು ಕೊಂಡು ಹೋಗಬಹುದು ಆದರೆ ನೀರು ಕುಡಿಸೋದಕ್ಕೆ ಆಗಲ್ಲ.

**ಟಾಮ್** : ನೀವು ಪ್ರಿಸ್ಕ್ರಿಪ್ಷನ್ ಬರೆಯೋ ಥರ ಮಾತಾಡಿದ್ರೆ, ನಮಗೆ ಹೇಗೆ ಅರ್ಥ ಆಗುತ್ತೆ? ಸ್ವಲ್ಪ ವಿವರವಾಗಿ ಹೇಳಿ.

**ಡಾಕ್ಟರ್** : ಏನನ್ನ ವಿವರವಾಗಿ ಹೇಳಬೇಕು ?

**ಮ್ಯಾಕ್‌ವೆಲ್** : ಅದೇ, ರಿಪೋರ್ಟ್ ಏನು ಹೇಳುತ್ತೆ ಅಂತ.

**ಡಾಕ್ಟರ್** : (ವಿಷಾದದ ಧ್ವನಿಯಲ್ಲಿ) ರಿಪೋರ್ಟ್ ಏನು ಹೇಳುತ್ತೆ ?

**ಟಾಮ್** : ಅದು ನಮಗೆ ಗೊತ್ತಿದ್ದರೆ ನಿಮಗ್ಯಾಕೆ ಕೇಳ್ತಿದ್ವಿ.

**ಜೆನ್ನಿ** : ಡಾಕ್ಟರ್ ಪ್ಲೀಸ್, ಅದೇನೂಂತ ಹೇಳಿ.

**ಡಾಕ್ಟರ್** : ನೋಡು ಜೆನ್ನಿ, ಯಾವಾಗ ರೋಗಿ 'ನನ್ನ ಚಟ್ಟ ಹೊರೋಕೆ ಎಷ್ಟು ಜನ ಬರ್ತಾರೆ' ಅನ್ನೋ ಲೆಕ್ಕ ಹಾಕ್ತಾನೋ, ಆಗ ಅವನು ಹುಷಾರಾಗೋದು ಅರ್ಧಕ್ಕರ್ಧ ಹೋದ್ಹಾಗೇನೆ.

**ಜೆನ್ನಿ** : ಅಂದ್ರೆ, ಅವಳು ಬದುಕೋದಿಲ್ವಾ ?

**ಡಾಕ್ಟರ್** : ಅದು ಅವಳು ನಿರ್ಧಾರ ಮಾಡಬೇಕು.

**ಗೋವನ್** : ಯಾಕೆ ಡಾಕ್ಟರಾಗಿ ನಿಮಗೆ ಆಗೋಲ್ವಾ ?

**ಡಾಕ್ಟರ್** : ನಾನು ದೇಹಕ್ಕೆ ಔಷಧಿ ಕೊಡಬಹುದು, ಮನಸ್ಸಿಗಲ್ಲ. ಮನಸ್ಸು ಬದಲಾಯಿಸೋ ಔಷಧೀನ ಇನ್ನೂ ಯಾರೂ ಕಂಡುಹಿಡಿದಿಲ್ಲ.

**ಗೋವನ್** : ನಿಮಗೆ ಸಾಧ್ಯವಾಗಲ್ಲ ಅನ್ನೋದಾದ್ರೆ ಹೇಳಿ, ಬೇರೆ ಯಾರನ್ನಾದರೂ ನೋಡ್ತೀವಿ.

**ಡಾಕ್ಟರ್** : ನೋಡು, ನೋಡು ಹೋಗು. ಯಾವ ಡಾಕ್ಟರ್ ಬಂದ್ರೂ ಅಷ್ಟೇನೇ. ಬದುಕಬೇಕು ಅನ್ನೋ ಮನಸು ಅವಳಲ್ಲಿ ಬರದೇ ಇದ್ರೆ, ಪ್ರಪಂಚದ ಯಾವ ಡಾಕ್ಟರ್ ಬಂದರೂ ಅವಳನ್ನು ಉಳಿಸೋಕ್ಕಾಗಲ್ಲ. ಬ್ರಹ್ಮನ ಕೈಲೂ ಸಾಧ್ಯ ಇಲ್ಲ. ಯಮನೇ ಬೇಡ ಅಂತ ವಾಪಸ್ ಹೋದ್ರೂ ಇವಳೇ ಅವನ ಹಿಂದೆ ಓಡಿಹೋಗ್ತಾಳೆ.

**ಜೇಮ್ಸ್** : ಹಾಗಾದರೆ ಇದು ಮಾನಸಿಕ ಕಾಯಿಲೆ.

## ಅಭಿನಂದನೆಗಳು

ಭಾರತೀಯ ಮನೋವೈದ್ಯಕೀಯ ಸಂಘ, ಕರ್ನಾಟಕ ಶಾಖೆ ನೀಡುವ ೨೦೧೧ಳರ ಪ್ರತಿಷ್ಠಿತ "ಡಾ॥ ಎಸ್. ಎಸ್. ಜಯರಾಮ್ ಪ್ರಶಸ್ತಿ"ಯು ಖ್ಯಾತ ವೈದ್ಯೆ ಡಾ॥ ಕೆ. ಎಸ್. ಚೈತ್ರಾ ಅವರು ರಚಿಸಿರುವ "ಆಸೆ ಮತ್ತು ಅಗತ್ಯಗಳು" ಕೃತಿಗೆ ಲಭಿಸಿದೆ. ನವಕರ್ನಾಟಕ ಪ್ರಕಾಶನದ 'ವ್ಯಕ್ತಿ ವಿಕಸನ ಮಾಲೆ' ಮಾಲಿಕೆಯಲ್ಲಿ ಪ್ರಕಟಿಸಿದ ಕೃತಿ ಇದು. ಲೇಖಕಿಗೆ ನವಕರ್ನಾಟಕ ಪ್ರಕಾಶನ ಮತ್ತು 'ಹೊಸತು' ಬಳಗದ ಹಾರ್ದಿಕ ಅಭಿನಂದನೆಗಳು.

**ಮ್ಯಾಕ್‌ವೆಲ್** : ಸೈಕಿಯಾಟ್ರಿಸ್ಟ್‌ಗೆ ತೋರಿಸಿದ್ರೆ ?

**ಡಾಕ್ಟರ್** : ಉಪಯೋಗ ಇಲ್ಲ. ಅವರೂ ಕೂಡ ಅಷ್ಟೆ. ದೇಹದಲ್ಲಿ ಆಗೋ ವೈಪರೀತ್ಯದಿಂದ ಬರೋ ಮಾನಸಿಕ ಕಾಯಿಲೆಗೆ ಔಷಧಿ ಕೊಡ್ತಾರೆ. ಮನಸ್ಸನ್ನು ತಹಬಂದಿಗೆ ತಂದುಕೊಳ್ಳೋದಿಕ್ಕೆ ಕೌನ್ಸಲಿಂಗ್ ಮೂಲಕ ಸಹಾಯ ಮಾಡ್ತಾರೆ. ತಾನು ಚೆನ್ನಾಗಿರಬೇಕು, ಬಾಳಬೇಕು, ಬದುಕಬೇಕು ಅನ್ನೋ ಆಶಾಭಾವನೆ ಇರೋ ವ್ಯಕ್ತಿಗೆ ಚಿಕಿತ್ಸೆ ಕೊಡ ಬಹುದು. ಆದ್ರೆ ಸಾಯೋ ದಿನಗಳನ್ನು ಎಣಿಸ್ತಾ ಕುಳಿತಿರೋವರಿಗಲ್ಲ.

**ಜೆನ್ನಿ** : ಹಾಗಂದ್ರೆ ಏನು ಡಾಕ್ಟರ್? ಅವಳಿಗೆ ಬದುಕೋ ಆಸೇನೇ ಇಲ್ವಾ ?

**ಡಾಕ್ಟರ್** : ಇಲ್ಲಾ ಜೆನ್ನಿ. ಬಹಳ ಬೇಸರವಾಗುತ್ತೆ. ಅವಳಿನ್ನೂ ಬದುಕಬೇಕಾದವಳು. ಜೀವನವನ್ನು ಅನುಭವಿಸಬೇಕಾದವಳು. ಅದ್ಯಾಕೆ ಸ್ಮಶಾನದ ಕಡೆ ಮುಖ ಹಾಕಿ ಕುಳಿತಿದಾಳೋ ಅರ್ಥಾನೇ ಆಗ್ತಿಲ್ಲ.

**ಜೆನ್ನಿ** : ಅವಳ್ಯಾಕೆ ಹೀಗಾದ್ಲು ? ನಾನು ಹೋಗಿ ನೋಡ್ತೀನಿ.

(ಜೆನ್ನಿ ಹೊರಟುಹೋಗುತ್ತಾಳೆ. ಒಬ್ಬೊಬ್ಬರೂ ಒಂದೊಂದು ದಿಕ್ಕಿಗೆ ಹೋಗುತ್ತಾರೆ)

### ದೃಶ್ಯ – ಎರಡು

(ಒಂದು ಸಣ್ಣ ರೂಮು. ಮೂಲೆಯಲ್ಲಿ ಮಂಚವಿದೆ. ಮಂಚದ ಮೇಲೆ ಮಲಗಿಕೊಂಡರೆ ಎದುರಿಗೆ ಕಾಣುವಂತೆ ಕಿಟಕಿಯಿದೆ. ಮೂಲೆಯಲ್ಲಿ ಈಸಲ್ ನಿಂತಿದೆ. ಒಂದೆರಡು ಕಲಾಕೃತಿಗಳು ಗೋಡೆಗಳನ್ನು ಅಲಂಕರಿಸಿವೆ. ಟೇಬಲ್ ಮೇಲೆ ಬ್ರಷ್, ಬಣ್ಣ, ಪೇಪರ್ ಅಸ್ತವ್ಯಸ್ತವಾಗಿ ಬಿದ್ದಿವೆ. ಟೇಬಲ್ ಮೇಲೆ ಗೋಡೆಗೆ ಕನ್ನಡೀನ ತೂಗುಹಾಕಲಾಗಿದೆ. ಜಾನ್ಸಿ ಕಿಟಕಿಗೆ ಒರಗಿಕೊಂಡು ಎಣಿಸ್ತಾ ನಿಂತಿದಾಳೆ.)

**ಜಾನ್ಸಿ** : ಐವತ್ತು. (ನಿಟ್ಟುಸಿರು ಬಿಡುತ್ತಾಳೆ) ನೋಡಿದವರನ್ನೆಲ್ಲಾ ತನ್ನ ಕಡೆಗೆ ಸೆಳೆಯುತ್ತಿದ್ದ ಬಳ್ಳಿ, ಲತೆ! ಈ ಲತೆಗಳನ್ನೆಲ್ಲಾ ಕಳೆದುಕೊಳ್ಳುತ್ತಾ ಇದೆ. ಬೋಳಾಗ್ತಾ ಇದೆ. ಎಲೆಗಳನ್ನೆಲ್ಲಾ ಕಳೆದುಕೊಂಡ ಮೇಲೆ ಕೇವಲ ನೆನಪಷ್ಟೇ ಉಳಿಯುತ್ತೆ. ಅದೂ ಮಾಸಿಹೋಗಬಹುದು. ಯಾವುದು ಶಾಶ್ವತ. ಎಲ್ಲವೂ ಹೋಗೋದೇನೆ. (ಭಾರವಾದ ಹೆಜ್ಜೆಯಿಡುತ್ತಾ ಕನ್ನಡಿ ಬಳಿ ಬರುತ್ತಾಳೆ) ಲತೆ! (ಒಮ್ಮೆ ಕನ್ನಡಿ, ಮತ್ತೊಮ್ಮೆ ಕಿಟಕಿ ನೋಡುತ್ತಾ) ಲತೆ! ಆ ಲತೆ ಎಲೆಗಳನ್ನು ಕಳಚಿಕೊಂಡು ಅಂತ್ಯದ ಕಡೆಗೆ ಹೋಗ್ತಾ ಇದೆ. ನಾನೂ ಕೂಡ ಅಷ್ಟೆ. ಜೀವನದ ಶಕ್ತಿಯ ಎಲೆಗಳನ್ನು ಕಳಚಿಕೊಂಡು ಸಾವಿನ ಸುಖದತ್ತ ಹೋಗ್ತಾ ಇದೀನಿ. (ಮತ್ತೆ ಕಿಟಕಿಯತ್ತ ಹೋಗುತ್ತಾಳೆ) ಎಷ್ಟು ಜೋರು ಗಾಳಿ! (ಶಾಲನ್ನು ಹೊದ್ದುಕೊಂಡು) ಈ ಗಾಳಿಗೆ ಇನ್ನೊಂದಷ್ಟು ಎಲೆಗಳು ಉದುರಿಹೋಗಿವೆ. ನನಗೆ ನಿಲ್ಲೋದಕ್ಕೂ ಕಷ್ಟವಾಗ್ತಿದೆ. (ಕಾಲನ್ನು ಎಳೆದುಕೊಂಡು ಹೋಗಿ ಮಂಚದ ಮೇಲೆ ಕುಳಿತುಕೊಳ್ಳುತ್ತಾಳೆ. ದಿಂಬನ್ನು ಸರಿಪಡಿಸಿಕೊಂಡು ಕಿಟಕಿ ಕಾಣುವಂತೆ ಒರಗಿಕೊಂಡು ಕುಳಿತುಕೊಳ್ಳುತ್ತಾಳೆ. ಮತ್ತೆ ಎಣಿಕೆ ಆರಂಭವಾಗುತ್ತದೆ) ಮಳೆ ಬೇರೆ ಬರೋ ಹಾಗಿದೆ. ಈ ಗಾಳಿ ಹೊಡೆತಕ್ಕೆ ಮತ್ತಷ್ಟು ಎಲೆಗಳು ಉದುರಿಹೋಗ್ತಿವೆ. (ಆಗ ಜೆನ್ನಿ ಬರುತ್ತಾಳೆ)

**ಜೆನ್ನಿ** : ಜಾನ್ಸಿ, ಜಾನ್ಸಿ ಈಗ ಹೇಗಿದ್ದೀಯಾ ? ಡಾಕ್ಟರ್ ಹೇಳಿದ್ರು, ನೀನು ಬೇಗ ಹುಷಾರಾಗ್ತೀಯಂತೆ.

**ಜಾನ್ಸಿ** : (ತಣ್ಣಗೆ) ಸುಮ್ಮನೆ ಸುಳ್ಳು ಹೇಳೋದು ಯಾಕೆ ಜೆನ್ನಿ? ಯಾವ ಡಾಕ್ಟರ್ ಔಷಧಾನೂ ನನ್ನನ್ನ ಗುಣಪಡಿಸೋಲ್ಲ.

**ಜೆನ್ನಿ** : ಒಳ್ಳೆ ಮುದುಕಿ ಥರ ಮಾತಾಡ್ತೀಯಲ್ಲ.

**ಜಾನ್ಸಿ** : (ಕಿಟಕಿಯನ್ನೇ ನೋಡುತ್ತಾ) ಸೋಲು, ನೋವುಗಳ ಜೊತೆ ಜೀವನಾನ ಎಳೆದಾಡಿಕೊಂಡು ಹೋಗೋದಕ್ಕಿಂತ, ಸಾವಿನ ಕತ್ತಲೆಯಲ್ಲಿ ನೆಮ್ಮದಿಯಾಗಿ ಇರೋದೇ ಉತ್ತಮ.

**ಜೆನ್ನಿ** : ಏನ್ ಮಾತಾಡ್ತೀಯ ಜಾನ್ಸಿ, ನೀನೊಬ್ಬ ಮೂರ್ಖಳು. ಸೋಲು, ನೋವುಗಳಿಲ್ಲದ ಜೀವನಾನೇ ಇಲ್ಲ. ಮಹಾನ್ ಕಲಾವಿದರನ್ನೇ ತಗೋ. ಅವರು ಅದ್ಭುತವಾದದ್ದನ್ನು ಸೃಷ್ಟಿ ಮಾಡೋದಕ್ಕೆ ಮುಂಚೆ, ಅದೆಷ್ಟು ಪೇಂಟಿಂಗ್‌ಗಳನ್ನು ಕಸದ ಬುಟ್ಟಿಗೆ ಹಾಕಿಲ್ಲ. ವಿಫಲರಾದಾಗ ಅದೆಷ್ಟು ನೋವು ಅನುಭವಿಸಿಲ್ಲ. ಸೋಲೇ ಇಲ್ಲದ ಜಯವಿಲ್ಲ. ನೋವೇ ಇಲ್ಲದ ನೆಮ್ಮದಿಯಿಲ್ಲ.

**ಜಾನ್ಸಿ** : (ತನ್ನ ಪಾಡಿಗೆ ತಾನು) ಇನ್ನು ಹತ್ತೇ ಹತ್ತು.

**ಜೆನ್ನಿ** : ಏನದು, ಹತ್ತೇ ಹತ್ತು ?

**ಜಾನ್ಸಿ** : ಎಲೆಗಳು ಉದುರ್ತಾ ಇವೆ.

**ಜೆನ್ನಿ** : (ಅಸಹನೆಯಿಂದ) ಏನು ಎಲೆಗಳು ?

**ಜಾನ್ಸಿ** : ಕಿಟಕಿಯಿಂದಾಚೆ ನೋಡು. ಎದುರುಗಡೆ ಗೋಡೆ ಮೇಲೆ ಬೆಳೆದ ಬಳ್ಳಿ, ನಾವು ಬಂದಾಗ ಮೈದುಂಬಿ ನಿಂತಿತ್ತು. ನನ್ನ ಹಾಗೇನೇ. ಈಗ ಎಲೆಗಳೆಲ್ಲಾ ಉದುರ್ತಾ ಇವೆ. ಅದೂ ನನ್ನ ಹಾಗೇನೆ.

**ಜೆನ್ನಿ** : ಹುಚ್ಚುಚ್ಚಾಗಿ ಏನೇನೋ ಮಾತಾಡ್ತಾ ಇದೀಯ. ಬಳ್ಳಿಯಂತೆ, ಎಲೆಗಳಂತೆ, ಉದುರ್ತಾ ಇವೆಯಂತೆ, ನನ್ನ ಹಾಗೇನೇ ಅಂತೆ. ಅದಕ್ಕೇನಾದರೂ ಅರ್ಥ ಇದೆಯಾ ?

**ಜಾನ್ಸಿ :** ಹೌದು ತುಂಬ ಅರ್ಥ ಇದೆ. ಎಲೆಗಳು ಉದುರ್ತಾ ಹೋದ ಹಾಗೆ, ಕೊನೆ ಎಲೆ ಬಿದ್ದಾಗ, ಅದು ಬಳ್ಳಿಯ ಅಂತ್ಯ.

**ಜೆನ್ನಿ :** ಅದರಲ್ಲೇನಿದೆ ಮಹಾ ರಹಸ್ಯ ? ಎಲೆಗಳು ಬೀಳ್ತಾ ಇವೆ ಅಂದ್ರೆ, ಬಳ್ಳಿ ಒಣಗ್ತಾ ಇದೆ ಅಂತ ಅರ್ಥ. ಅದು ಸಹಜ.

**ಜಾನ್ಸಿ :** ಹಾಗೇನೇ, ನನ್ನ ಜೀವದ ಶಕ್ತಿಯ ಎಲೆಗಳೂ ಅದರ ಜೊತೇನೇ ಬೀಳ್ತಾ ಇವೆ. ಕೊನೆ ಎಲೆ ಬಿದ್ದಾಗ...

**ಜೆನ್ನಿ :** ನಿನಗೆಲ್ಲೋ ತಲೆ ಕೆಟ್ಟಿದೆ, ಅಷ್ಟೆ. ದೇಹದಲ್ಲಿ ಶಕ್ತಿ ಕಡಿಮೆಯಾದರೆ, ಕೆಲವರಿಗೆ ಹುಚ್ಚು ಕೆರಳುತ್ತೆ ಅಂತ ಕೇಳಿದ್ದೆ. ನಿನಗೂ ಹಾಗೇ ಅನ್ಸುತ್ತೆ. ಸ್ವಲ್ಪ ಹೊರಗೆ ಬಂದು ಒಳ್ಳೇ ಗಾಳಿ ಕುಡಿದ್ರೆ, ಜನರ ಜೊತೆ ಮಾತಾಡಿದ್ರೆ, ದೇಹಕ್ಕೂ ಮೆದುಳಿಗೂ ಶಕ್ತಿ ಬರುತ್ತೆ. ಬಾ ಹೊರಗಡೆ ಹೋಗಿ ಬರೋಣ.

**ಜಾನ್ಸಿ :** ಇಲ್ಲ ಜೆನ್ನಿ. ನನಗೆ ಎದ್ದು ಓಡಾಡೋದಕ್ಕೂ ಶಕ್ತಿಯಿಲ್ಲ.

**ಜೆನ್ನಿ :** (ಹತ್ತಿರ ಹೋಗಿ) ಸುಮ್ಮನೆ ಬಾ ಅಂದ್ರೆ ಬಾ.

**ಜಾನ್ಸಿ :** (ಸಿಟ್ಟಿನಿಂದ) ಬೇಡ ಜೆನ್ನಿ, ನನಗೆ ಆಗಲ್ಲ ಅಂದ್ರೆ ಆಗಲ್ಲ. ಒಂದು ಹೆಜ್ಜೆ ಇಡೋದಿಕ್ಕೂ ಆಗಲ್ಲ. ನೀನು ಎಲ್ಲಿಗೆ ಬೇಕಾದ್ರೂ ಹೋಗಿ ಬಾ. (ಜೆನ್ನಿ ಅವಳ ಮಾತು ಕೇಳದೆ ಕೈ ಹಿಡಿದು ಎಳೆಯುತ್ತಾಳೆ. ಜಾನ್ಸಿ ನೆಲಕ್ಕೆ ಬೀಳುತ್ತಾಳೆ)

**ಜಾನ್ಸಿ :** ಹೇಳಿದಷ್ಟು ಕೇಳು. ನನ್ನನ್ನ ಮಂಚದ ಮೇಲೆ ಮಲಗ್ಸು.

**ಜೆನ್ನಿ :** ಸಾರಿ ಜಾನ್ಸಿ. (ಮಂಚದ ಮೇಲೆ ಮಲಗಿಸಿ ಅವಳನ್ನು ಸಮಾಧಾನಪಡಿಸುತ್ತಾ ) ಜಾನ್ಸಿ , ಸ್ವಲ್ಪ ಸೂಪ್ ತರ್ತೀನಿ. (ಸೂಪ್ ತರಲು ಹೋಗುತ್ತಾಳೆ)

**ಜಾನ್ಸಿ :** ನನಗೇನೂ ಬೇಡ. ಯಾವುದೂ ಬೇಕಾಗಿಲ್ಲ.

**ಜೆನ್ನಿ :** (ಸೂಪ್ ಹಿಡಿದುಕೊಂಡು ಬಂದು) ಸ್ವಲ್ಪ ಸೂಪ್ ಕುಡಿದ್ರೆ ಜೀವ ಬಂದ ಹಾಗೆ ಆಗುತ್ತೆ. ಸ್ವಲ್ಪ ಕುಡಿ ಜಾನ್ಸಿ .

**ಜಾನ್ಸಿ :** (ಕಿಟಕಿಯತ್ತ ನೋಡುತ್ತಾ ) ಜೆನ್ನಿ, ಒಂದು ಕೆಲಸ ಮಾಡು. ಒಳ್ಳೆ ಗೊಬ್ಬರ ತಂದು ಬಳ್ಳಿಗೆ ಹಾಕು.

**ಜೆನ್ನಿ :** ಯಾಕೆ ?

**ಜಾನ್ಸಿ :** ನಾಳೆ ಬಳ್ಳಿ ಚಿಗುರುತ್ತೆ. ಆಗ ನಾನೂ ಚಿಗುರ್ತೀನಿ. ಸಾಯೋ ಗಿಡಕ್ಕೆ ಎಷ್ಟು ಗೊಬ್ಬರ, ನೀರು ಹಾಕಿದ್ರೂ ಅಷ್ಟೇನೆ. (ಚಳಿಗೆ ಮೈ ಮುದುಡಿಕೊಂಡು) ಇನ್ನೊಂದೆರಡು ಎಲೆ ಇದೆ.

**ಜೆನ್ನಿ :** ಈಗ ಸ್ವಲ್ಪ ಮಲಕ್ಕೋ, ಆಮೇಲೆ ಎಣಿಸುವಂತೆ. ಇಷ್ಟೊಂದು ಚಳಿ ಒಳ್ಳೇದಲ್ಲ.

**ಜಾನ್ಸಿ :** ಇರಲಿ ಬಿಡು.

**ಜೆನ್ನಿ :** ನೋಡು ಎಲ್ಲದಕ್ಕೂ ಹಠ ಮಾಡ್ಬೇಡ. ಶೀತಗಾಳಿ ಜೋರಾಗಿ ಬೀಸ್ತಾ ಇದೆ. ಮಳೆ ಸಣ್ಣಗೆ ಸುರೀತಿದೆ. ಕಿಟಕಿ ಮುಚ್ತೀನಿ.

**ಜಾನ್ಸಿ :** ಬೇಡ ಜೆನ್ನಿ, ಹಾಗೇ ಇರಲಿ. ಎಲೆ ಉದುರೋದನ್ನ ನೋಡ್ಬೇಕು.

**ಜೆನ್ನಿ :** (ಕಿಟಕಿಯನ್ನು ಮುಚ್ಚುತ್ತಾ ) ನೋಡು, ಸ್ವಲ್ಪ ನಿದ್ದೆ ಮಾಡು. ನಾನು ಗಣಿ ಕಾರ್ಮಿಕನ ಪೇಂಟಿಂಗ್ ಮಾಡ್ಬೇಕು. ಬಹರ್ಮನ್ ಮಾಡೆಲ್ ಆಗೋದಿಕ್ಕೆ ಕರೀಬೇಕು. ಸ್ವಲ್ಪ ನಿದ್ದೆ ಮಾಡಿ ಏಳು. ಆಮೇಲೆ ಎಣಿಸೋವಂತೆ. (ಜೆನ್ನಿ ಹೊರಡುತ್ತಾಳೆ)

**ಜಾನ್ಸಿ :** (ಜೆನ್ನಿ ಕೈ ಹಿಡಿದುಕೊಂಡು) ನಿನಗೆ ನನ್ನ ಮೇಲೆ ಎಷ್ಟೊಂದು ಪ್ರೀತಿ ಇದೆ. ಆದರೆ ನಾನೇನ್ ಮಾಡಲಿ, ನಾನು ಅಸಹಾಯಕಳು. ಹೋಗೋದಿಕ್ಕೆ ಮುಂಚೆ ಒಂದು ಸಲ ಕಿಟಕಿ ತೆಗೆ. (ಜೆನ್ನಿ ಕಿಟಕಿ ತೆರೆಯುತ್ತಾಳೆ. ಜಾನ್ಸಿ ಒಂದು ರೀತಿಯ ಉದ್ರೇಕ, ಅವ್ಯಕ್ತ ಸಂತೋಷದಿಂದ) ಒಂದೇ ಒಂದು ಎಲೆ ಉಳಿದುಕೊಂಡಿದೆ. (ಜೆನ್ನಿ ಬೇಸರ, ದುಃಖದಿಂದ ಕಿಟಕಿಯನ್ನು ಮುಚ್ಚಿ ಬಿರುಸಾಗಿ ಹೊರಗಡೆ ಹೋಗುತ್ತಾಳೆ) ಒಂದೇ ಒಂದು ಎಲೆ, ಕೊನೆ ಎಲೆ. ಅಲ್ಲಿಗೆ ಎಲ್ಲವೂ ಕೊನೆ. ಒಂದೇ ಎಲೆ, ಕೊನೆ ಎಲೆ.

## ದೃಶ್ಯ – ಮೂರು

(ಜೆನ್ನಿ ಬಹರ್ಮನ್ ರೂಮಿಗೆ ಬರುತ್ತಾಳೆ. ಅಲ್ಲೊಂದು ಖಾಲಿ ಕ್ಯಾನ್ವಾಸ್ ಬಿದ್ದಿದೆ. ಬಹರ್ಮನ್ ಪೈಪ್ ಹಿಡಿದುಕೊಂಡು ಏನನ್ನೋ ಯೋಚಿಸುತ್ತಾ ಕುಳಿತಿದ್ದಾನೆ. ಸಣ್ಣಗೆ ಕೆಮ್ಮುತ್ತಿದ್ದಾನೆ. ಜೆನ್ನಿ ಪ್ರವೇಶ.)

**ಜೆನ್ನಿ :** ಬಹರ್ಮನ್, ನಾನು ಗಣಿ ಕಾರ್ಮಿಕರ ಬಗ್ಗೆ ಪೇಂಟಿಂಗ್ ಮಾಡಬೇಕು. ಮಾಡೆಲ್ ಕುಳಿತುಕೊಳ್ತೀಯಾ ?

**ಬಹರ್ಮನ್ :** ಹುಂ. ನನಗೆ ಅದನ್ನು ಬಿಟ್ಟರೆ ಬೇರೆ ಕೆಲಸವೇನಿದೆ ? ಅಂದ ಹಾಗೆ ನಿನ್ನ ಸ್ನೇಹಿತೆ, ಆಕೆ ಹೆಸರೇನೂ... ಜ...

**ಜೆನ್ನಿ :** ಜಾನ್ಸಿ .

**ಬಹರ್ಮನ್ :** ಹಾಂ, ಜಾನ್ಸಿ , ಹೇಗಿದಾಳೆ ?

**ಜೆನ್ನಿ :** ಅವಳ ಬಗ್ಗೆ ಏನು ಹೇಳಲಿ ? ಬದುಕುವುದರ ಬಗ್ಗೆ ಯೋಚನೆ ಬಿಟ್ಟು ಸಾಯುವ ಸುಖಕ್ಕೆ ಕಾಯ್ತಾ ಇದಾಳೆ. ಬಹರ್ಮನ್, ಅವಳು ಅದೆಷ್ಟು ವಿಚಿತ್ರವಾಗಿ ಆಡ್ತಾ ಇದಾಳೆ ಗೊತ್ತಾ. ನಮ್ಮ ರೂಮಿನ ಕಿಟಕಿ ಎದುರುಗಡೆ ಗೋಡೆ ಇದೆ. ಅಲ್ಲೊಂದು ಬಳ್ಳಿ ಇದೆ. ಅದರ ಎಲೆಗಳು ಉದುರ್ತಾ ಇವೆ. ಜಾನ್ಸಿ, ಆ ಬಳ್ಳಿ ಜೊತೆ ತನ್ನ ಜೀವನಾನೂ ಸುತ್ತಿಕೊಂಡಿದಾಳೆ. ಅದರಲ್ಲಿ ಈಗ ಒಂದೇ ಒಂದು ಎಲೆ ಉಳಿದಿದೆ. ಆ ಕೊನೆ ಎಲೆ ಬಿದ್ದಾಗ ತಾನೂ ಸತ್ಹೋಗ್ತೀನಿ ಅಂತ ಹೇಳ್ತಿದಾಳೆ.

**ಬಹರ್ಮನ್ :** ನಮ್ಮ ಜನ ಚಿಕ್ಕ ವಯಸ್ಸಿಗೇ ಮುದುಕರಾಗ್ತಾ ಇದಾರೆ. ನೋಡು, ಜೀವನದಲ್ಲಿ ಉತ್ಸಾಹ ಕಾಣದೆ ಇರೋನು ಕಲಾವಿದ ಆಗೋಲ್ಲ. ಒಳ್ಳೆಯ ಕಲಾವಿದನಾಗಿ ಬೆಳೆಯೋದಂತೂ ಅಸಾಧ್ಯ. ಹೊಸ ಹೊಸ ಸವಾಲುಗಳನ್ನು ನಗ್ತಾ ಸ್ವೀಕರಿಸಬೇಕು. ಹೊಸದನ್ನು ಸೃಷ್ಟಿ ಮಾಡ್ತಾ ಇರ್ಬೇಕು. ಅವಳೆಂಥಾ ಕಲಾವಿದೆ ? ಜೆನ್ನಿ, ಅವಳಿಗೆ ಜೀವನದಲ್ಲಿ ಏನನ್ನಾದರೂ ಮಾಡ್ಬೇಕು ಅನ್ನೋ ಆಸೇನೆ ಇಲ್ವಾ ? ಏನಾದರೂ ಅದ್ಭುತವಾದದ್ದನ್ನ ಸಾಧಿಸೋದು. ಅದು ಮನುಷ್ಯನಲ್ಲಿ ಜೀವಂತಿಕೆ ತುಂಬುತ್ತೆ. ಮನುಷ್ಯನಿಗೆ ಒಂದು ಧ್ಯೇಯ ಇರ್ಬೇಕು. ಉದಾತ್ತವಾದ ಧ್ಯೇಯ.

**ಜೆನ್ನಿ :** ಅವಳಿಗೆ ನೇಪಲ್ಸ್‌ನ ಕಡಲ ತೀರವನ್ನು ಚಿತ್ರಿಸ್ಬೇಕು ಅಂತ ಆಸೆ ಇತ್ತು.

**ಬಹರ್ಮನ್ :** ಅವಳೇನಾದರೂ ನೇಪಲ್ಸ್ ಕಡಲತೀರದ ಪೇಂಟಿಂಗ್ ಮಾಡಿದ್ರೆ, ನೋಡಿದವರು ನೇರವಾಗಿ ಹೋಗಿ ಆತ್ಮಹತ್ಯೆ ಮಾಡ್ಕೋತಾರೆ.

**ಜೆನ್ನಿ :** ಯಾಕೆ ?

**ಬಹರ್ಮನ್ :** ನೇಪಲ್ಸ್ ಕಡಲತೀರ ಬಹಳ ಮನೋಹರವಾದದ್ದು. ಕಣ್ಣು ಹಾಯಿಸಿದಷ್ಟೂ ಅಂತ್ಯವೇ ಕಾಣದ ಸಮುದ್ರದ ತೀರ. ಜೀವನದ ಅನಂತ ಸಾಧ್ಯತೆಗಳ ಪ್ರತೀಕ. ಜೀವನದ ಸೌಂದರ್ಯವನ್ನು ಸವಿಯಬೇಕು ಅನ್ನೋ ರಸಿಕತೆಯ ಸಂಕೇತವಾದ ನೀಲಿ ಬಣ್ಣ. ಎತ್ತರೆತ್ತರ ಬೆಳೆದು ನಿಂತ ಕಲ್ಲುಬಂಡೆಗಳನ್ನೂ ಮೀರಿ ಚಿಮ್ಮುವ ಬೃಹದಾಕಾರದ ಅಲೆಗಳ ರುದ್ರಮನೋಹರ ನೆಗೆತ. ಅದೊಂದು ಅದ್ಭುತ ದೃಶ್ಯ. ಅದೇನಾದ್ರೂ ನಿನ್ನ ಜಾನ್ಸಿ ಕೈಗೆ ಸಿಕ್ಕಿದ್ರೆ ...

**ಜೆನ್ನಿ :** ಸಿಕ್ಕಿದ್ರೆ ಏನಾಗುತ್ತೆ ?

**ಬಹರ್ಮನ್ :** ಇನ್ನೇನಾಗುತ್ತೆ. ಕಡಲ ನೀರಿಗೆಲ್ಲಾ ಕಪ್ಪು ಬಳೀತಾಳೆ. ಮರಳಿನ ಮೇಲೆ ಕುಳಿತಿರೋ ವ್ಯಕ್ತಿಗಳು ಶವಗಳ ರೀತಿ ಇರ್ತಾರೆ. ಕಪ್ಪು ಅಲೆಗಳು ಜನಗಳನ್ನು ತಮ್ಮ ಮಡಿಲಿಗೆ ಎಳೆದುಕೊಳ್ಳೋ ದೆವ್ವಗಳ ಥರ ಇರ್ತವೆ.

**ಜೆನ್ನಿ :** ಕಲಾವಿದರು ತಮ್ಮ ಮನಸ್ಸಿಗೆ ಏನು ಬರುತ್ತೋ ಅದನ್ನು ಚಿತ್ರಿಸ್ತಾರೆ.

**ಬಹರ್ಮನ್ :** ಅದೇನೋ ನಿಜ. ಒಂದು ವಸ್ತು ತನಗೆ ಹೇಗೆ ಕಾಣ್ಸುತ್ತೋ ಅದೇ ರೀತಿ ಕಲಾವಿದ ಚಿತ್ರಿಸ್ತಾನೆ. ಆದರೆ ಒಂದು ವಿಷಯ ನೆನಪಿಟ್ಕೊ. ಕಲಾವಿದ ಎಲ್ಲದಕ್ಕಿಂತ ಮೊದಲು ಜೀವನಾನ ಆಳವಾಗಿ ಅರ್ಥ ಮಾಡ್ಕೋಬೇಕು. ಜೀವನಕ್ಕಿಂತ

ದೊಡ್ಡದಾದ ಕಲೆ ಇಲ್ಲ. ನಮ್ಮ ಸುತ್ತಮುತ್ತ ಇರೋ ಸೌಂದರ್ಯ, ಕುರೂಪ, ಒಳ್ಳೆಯದು, ಕೆಟ್ಟದ್ದು, ನೋವು, ನಲಿವು, ಎಲ್ಲದರ ಬಗ್ಗೆ ತಿಳ್ಕೋಬೇಕು. ಜೀವನದಲ್ಲಿರೋ ಸೌಂದರ್ಯ, ಸಾಧ್ಯತೆ, ಭರವಸೆ, ಭವಿಷ್ಯಗಳ ಬಗ್ಗೆ ಚಿತ್ರಿಸ್ಬೇಕು. ಒಂದು ಪೇಂಟಿಂಗ್ ನೋಡಿದ ವ್ಯಕ್ತಿಯಲ್ಲಿ ಉತ್ಸಾಹ ಬರಬೇಕು. ಜೀವನ ಸುಂದರವಾಗಿದೆ ಅನ್ನಿಸಬೇಕು. ಇಲ್ಲಾಂದ್ರೆ ಸುಂದರಗೊಳಿಸಬೇಕು ಅನ್ನಿಸ್ಬೇಕು.

**ಜೆನ್ನಿ :** ಆದ್ರೆ ಅಂಥ ಪೇಂಟಿಂಗ್‌ನ ಯಾರು ತಗೋಳ್ತಾರೆ ಬಹರ್ಮನ್ ?

**ಬಹರ್ಮನ್ :** ಪೇಂಟಿಂಗ್‌ನ ಮಾರಲೇಬೇಕು ಅನ್ನೋದಾದ್ರೆ ಪೇಂಟಿಂಗ್ ಯಾಕೆ ಮಾಡ್ತೀರ ? ಬೇರೆ ಏನಾದ್ರೂ ಕೆಲಸ ಮಾಡಬಹುದಲ್ಲ. ಮಾರುವುದಕ್ಕೋಸ್ಕರ ಪೇಂಟಿಂಗ್ ಮಾಡೋರು ಕಲಾವಿದರಲ್ಲ, ಕೆಲಸಗಾರರು.

**ಜೆನ್ನಿ :** ಕಲಾವಿದ ಜೀವನ ಮಾಡೋದು ಬೇಡ್ವಾ ? ಹಸಿವಿನಿಂದ ಸಾಯ್ಬೇಕಾ ?

**ಬಹರ್ಮನ್ :** ಸರಿ, ಕಲಾವಿದರು ಹಸಿವಿನಿಂದ ನರಳೋದ ಕ್ಕೋಸ್ಕರಾನೆ ಬ್ರಷ್ ಹಿಡಿಯಲ್ಲ. ಅವರು ಮಾಡಿದ ಪೇಂಟಿಂಗ್‌ನಿಂದ ಹಣ ಬಂದರೆ ಒಳ್ಳೆಯದೆ. ಆದ್ರೆ ಅದೇ ಉದ್ದೇಶ ಆಗಬಾರದು.

**ಜೆನ್ನಿ :** ಅಂಥ ಪೇಂಟಿಂಗ್‌ನಿಂದ ಹಸಿವು ಹಿಂಗೋದಿಲ್ಲ.

**ಬಹರ್ಮನ್ :** ಅದೇ ವಿಪರ್ಯಾಸ. ಈ ಹಸಿವು ಅನ್ನೋದು ಕಲಾವಿದನ ಕಲ್ಪನೆ, ಸೃಷ್ಟಿ, ಸೃಜನಶೀಲತೆ, ಎಲ್ಲವನ್ನೂ ನುಂಗಿಬಿಡುತ್ತೆ. ಆದರೆ ಕಲಾವಿದ ಪರಿಸ್ಥಿತಿಯ ಗುಲಾಮನಾಗಬಾರದು. ಅದನ್ನೂ ಮೀರಿ ನಿಲ್ಲಬೇಕು. ಜೆನ್ನಿ ಭವಿಷ್ಯದ ಬದುಕಿನ ಬಗ್ಗೆ ಭರವಸೆ ಮೂಡಿಸೋದು, ಜನರ ಮನಸ್ಸನ್ನು ಅದಕ್ಕೆ ಸೆಳೆಯೋದು – ಅದೇ ಕಲೆಯ ಗುರಿ. ಅಂಥದೊಂದು ಕೃತಿಗೋಸ್ಕರ, ಬೇರೆಯವರ ಬದುಕಿಗೆ ಜೀವ ತುಂಬುವ ಕೃತಿಯ ರಚನೆಗೋಸ್ಕರ ಕಲಾವಿದ ಎಲ್ಲದಕ್ಕೂ ತಯಾರಾಗಿರಬೇಕು.

**ಜೆನ್ನಿ :** ನೀನು ಹೇಳೋದು ಸರಿ ಅನ್ಸುತ್ತೆ. ಆದ್ರೆ ಜೀವನದಲ್ಲಿ ಪಾಲಿಸೋದು ಭಾರಿ ಕಷ್ಟ. ನಡಿ, ತುಂಬ ಲೇಟಾಗುತ್ತೆ.

**ಬಹರ್ಮನ್ :** ನಿಮ್ಮಂಥ ಕಲಾವಿದರಿಗೆ ನಾನು ಮಾಡೆಲ್ ಆಗಿ ಕುಳಿತುಕೊಳ್ಳಬೇಕು.

**ಜೆನ್ನಿ :** ನೋಡು ಬಹರ್ಮನ್, ನಿನಗೆ ಇಷ್ಟ ಇದ್ದರೆ ಬಾ, ಇಲ್ಲದಿದ್ದರೆ ಬಿಡು.

**ಬಹರ್ಮನ್ :** (ಹೋಗುತ್ತಿದ್ದವಳನ್ನು ತಡೆದು) ಅಯ್ಯೊ ಜೆನ್ನಿ, ನಿಲ್ಲು ! ಸಿಗೊ ಸ್ವಲ್ಪ ಬ್ರೆಡ್ಡಿಗೂ ಯಾಕೆ ಕಲ್ಲು ಹಾಕ್ತೀಯಾ ?

## ದೃಶ್ಯ – ನಾಲ್ಕು

(ಜೆನ್ನಿ ಮತ್ತು ಬಹರ್ಮನ್ ಒಳಗೆ ಬರುತ್ತಾರೆ)

**ಜೆನ್ನಿ :** ಬಾ, ಬಹರ್ಮನ್, ಒಳಗಡೆ ಬಾ.

**ಬಹರ್ಮನ್ :** (ಜಾನ್ಸಿಯತ್ತ ನೋಡುತ್ತಾ) ಇವಳೇನಾ ಜಾನ್ಸಿ ?

**ಜೆನ್ನಿ :** ಹೌದು. ಸದ್ಯ ನಿದ್ರೆ ಮಾಡ್ತಿದಾಳೆ. ನಿದ್ರೆ ಮಾಡಿದ ಮೇಲಾದ್ರೂ ಸಮಾಧಾನ ಆಗಬಹುದು.

**ಬಹರ್ಮನ್ :** (ನಿಟ್ಟುಸಿರು ಬಿಟ್ಟು ) ಪ್ರಪಂಚವನ್ನೇ ಜಯಿಸ್ತೀನಿ ಅನ್ನೋ ವಯಸ್ಸು. ಒಂದು ಕಾಲದಲ್ಲಿ ಈ ಮುಖ ಕಾಂತಿಯಿಂದ ಹೊಳೀತಾ ಇತ್ತು ಅನ್ಸುತ್ತೆ. ಮನಸ್ಸಿಗೆ ಮುಪ್ಪಾದರೆ ದೇಹ ಬೇಗ ಶಿಥಿಲ ಆಗುತ್ತೆ.

**ಜೆನ್ನಿ :** ಎಷ್ಟು ಲವಲವಿಕೆಯಿಂದ ಇದ್ಲು. ನೋಡೋದಿಕ್ಕೆ ಸಂತೋಷವಾಗೋದು.

**ಬಹರ್ಮನ್ :** ಜಾನ್ಸಿ, ಮೊಗ್ಗು ಹೂವಾಗಿ ಅರಳಿದಾಗ, ಅದರ ಸುಗಂಧ ಎಲ್ಲಾ ಕಡೆ ಹರಡುತ್ತೆ. ಎಲ್ಲರ ಮನಸ್ಸನ್ನೂ ಮುದಗೊಳಿಸುತ್ತೆ. ಅದೇ ಬಳ್ಳಿಯ ಸೌಂದರ್ಯ, ಸಾರ್ಥಕತೆ ಎಲ್ಲಾ. ಮನುಷ್ಯನ ಜೀವನಾ ಕೂಡ ಹಾಗೇನೆ. ಅಂದ ಹಾಗೆ ಬಳ್ಳಿ ಎಲ್ಲಿ ?

ಕಾವ್ಯಲೋಕ

# ಅಪ್ಪ ಈಗೀಗ ಬದಲಾಗಿದ್ದಾನೆ



ದಿನರಾತ್ರಿ
ನನ್ನಪ್ಪನ ಸಿಡುಕಗಳನ್ನೆಲ್ಲ
ಊದುಗೊಳವೆಯೊಟ್ಟು
ಗಾಳಿ ಊದುತ್ತಾಳೆ - ನನ್ನವ್ವ .

ಧಗಧಗನೆ ಉರಿದು
ಅನ್ನ ಬೇಯುವ ನೆಪದಲ್ಲಿ
ಸುಟ್ಟು ಬೂದಿಯಾಗುತ್ತವೆ ಸಿಟ್ಟುಗಳೆಲ್ಲ

ಗಂಟೆ ಎಂಟಾಗಿ
ಚಕ್ಕಂಬಕ್ಕಳ ಕೂರುತ್ತಾನೆ,
ಮಗುವಿನಂಥ ತಂದೆ
ತಟ್ಟೆಯ ಮುಂದೆ

ಸತ್ತ ಸಿಟ್ಟಿನ ಬೂದಿ
ನಗುತ್ತದೆ ಒಳಗೊಳಗೆ,
ನಿಗಿನಿಗಿ ಉರಿಕೆಂಡ ಅನ್ನದ ಮುಂದೆ
ಮಲ್ಲಿಗೆ ಅರಳಿದ ಪರಿಗೆ

ಇನ್ನೂ ಹೊಗೆಯಾಡುತ್ತಲೆ ಇದೆ
ಒಳ-ಹೊರಗೆ

ಹೇಳಬೇಕೆಂದರೆ
ಈಗೀಗ ನನ್ನಪ್ಪನಿಗೆ ಸಿಟ್ಟು ಬರುವದಿಲ್ಲ
ತಟ್ಟೆ ತೂರುವದಿಲ್ಲ, ಹಟ ಮಾಡುವದಿಲ್ಲ
ತಟ್ಟೆಯಲಿ ಅನ್ನವಿರುವಾಗಲೆ
ಕೈತೊಳೆಯುವದಿಲ್ಲ

ಎಂದಿನಂತೆ ಮರುಬೆಳಗು
ನಸುಕಿನಲ್ಲಿ ಬೂದಿ ಚೆಲ್ಲುತ್ತಾಳೆ
ನನ್ನವ್ವ ಹೊರಗೆ,
ಯಾರೂ ಇಲ್ಲದ್ದ ನೋಡಿ ಬೂದಿ ಕದ್ದ
ಚಂದ್ರನ ಅಂಗಿಗೆ
ಇಂದಿಗೂ ಅದೇ ಬಣ್ಣ !

ಮಲಗಿದ್ದಾನೆ ಅಪ್ಪ
ಮಗುವಿನಂತೆ ಒಳಗೆ, ತಣ್ಣಗೆ !

**ಪ್ರವೀಣಕುಮಾರ ದೈವಜ್ಞಾಚಾರ್ಯ**
ಶಿಕ್ಷಕರು, S/O : ಆನಂದ ದೈವಜ್ಞಾಚಾರ್ಯ
ನಂ. ೪೧೫ ಎ/೧೧, ೧೦ನೇ ವಾರ್ಡ್, ಮಹಾವೀರ ನಗರ
ಪೋಸ್ಟ್ : ಹೂವಿನಹಡಗಲಿ – ೫೮೩ ೨೧೯, ಬಳ್ಳಾರಿ ಜಿಲ್ಲೆ

**ಜೆನ್ನಿ :** (ಕಿಟಕಿಯತ್ತ ಹೋಗಿ) ಬಾ. (ಕಿಟಕಿ ತೆಗೆಯುತ್ತಾಳೆ. ಜೋರಾಗಿ ಬೀಸಿದ ಗಾಳಿಗೆ ಮುಖಾನ ಹಿಂದಕ್ಕೆಳೆದುಕೊಳ್ಳುತ್ತಾಳೆ) ಏನು ಗಾಳಿ. ಮಳೆ ಬೇರೆ ಸುರೀತಾ ಇದೆ. (ಬಹರ್ಮನ್ ಕಿಟಕಿಯ ಹತ್ತಿರ ಹೋಗುತ್ತಾನೆ) ಅಲ್ಲಿ ನೋಡು ಗೋಡೆಗೆ ಅಂಟಿಕೊಂಡು ನಿಂತಿದೆಯಲ್ಲ ಬಳ್ಳಿ ...

(ಜೆನ್ನಿ ಮತ್ತು ಬಹರ್ಮನ್ ಪರಸ್ಪರ ಮುಖ ನೋಡಿಕೊಳ್ಳುತ್ತಾರೆ. ಬಹರ್ಮನ್ ಕಿಟಕಿಯ ಹೊರಗೆ ತಲೆಹಾಕಿ ನೋಡುತ್ತಾನೆ)

**ಬಹರ್ಮನ್ :** ಕೆಳಗಡೆ ಅಡುಗೆಮನೆ ಹಿಂದೆ ಇರುವ ಓಣಿಯಲ್ವಾ? (ಜೆನ್ನಿ ತಲೆಯಾಡಿಸುತ್ತಾಳೆ. ಕಿಟಕಿಯನ್ನು ಮುಚ್ಚುತ್ತಾ ) ಹುಂ ನಡಿ. ಎಲ್ಲಿ ಕುಳಿತುಕೊಳ್ಳಲಿ ?

(ಜೆನ್ನಿ ಒಂದು ಸ್ಟೂಲನ್ನು ಮಧ್ಯದಲ್ಲಿಡುತ್ತಾಳೆ. ಈಸಲ್‌ಅನ್ನು ತನ್ನ ಮುಂದೆ ಇಟ್ಟುಕೊಂಡು ಚಿತ್ರರಚನೆಗೆ ತೊಡಗುತ್ತಾಳೆ. ಒಂದೆರಡು ಗೆರೆ ಎಳೆಯುತ್ತಾಳೆ. ಜಾನ್ಸಿಯತ್ತ ನೋಡುತ್ತಾಳೆ. ಮತ್ತೆ ಚಿತ್ರರಚನೆಗೆ ಪ್ರಯತ್ನಪಡುತ್ತಾಳೆ. ಮತ್ತೆ ಜಾನ್ಸಿಯತ್ತ ನೋಡುತ್ತಾಳೆ)

**ಜೆನ್ನಿ :** ಇಲ್ಲ ಬಹರ್ಮನ್. ನನ್ನ ಕೈಲಿ ಆಗೋದಿಲ್ಲ. ನಾಳೆ ನೋಡೋಣ.

(ಜೆನ್ನಿ ಈಸಲ್ ಮೇಲೆ ತಲೆಯಿಟ್ಟು ಬಿಕ್ಕುತ್ತಾಳೆ. ರಂಗದ ಮೇಲೆ ಕತ್ತಲೆ)

## ದೃಶ್ಯ – ಐದು

(ಬೆಳಿಗ್ಗೆ ತುಂಬ ಹೊತ್ತಾಗಿದೆ. ಜೆನ್ನಿ ಮಲಗಿದ್ದಾಳೆ. ಜಾನ್ಸಿ ಚಡಪಡಿಸುತ್ತಾ ಒದ್ದಾಡುತ್ತಿದ್ದಾಳೆ)

**ಜಾನ್ಸಿ :** ಜೆನ್ನಿ. (ಸ್ವಲ್ಪ ಜೋರಾಗಿ) ಜೆನ್ನಿ, ತುಂಬ ಹೊತ್ತಾಗಿದೆ. ಎದ್ದೇಳು.

**ಜೆನ್ನಿ :** (ಎದ್ದೇಳುತ್ತಾ) ಏನು ಜಾನ್ಸಿ ?

**ಜಾನ್ಸಿ :** ಎಷ್ಟೊತ್ತಿಂದ ಕಾಯ್ತಾ ಇದೀನಿ. ಕಿಟಕಿ ತೆಗಿ.

**ಜೆನ್ನಿ :** (ಯಾಂತ್ರಿಕವಾಗಿ ಕಿಟಕಿಯ ಬಳಿ ಹೋಗಿ ಥಟ್ಟನೆ ನಿಲ್ಲುತ್ತಾಳೆ) ಇರಲಿ ಬಿಡು ಜಾನ್ಸಿ . ಚಳಿ ಇದೆ. ಆಮೇಲೆ ತೆಗೆದರಾಯ್ತು.

**ಜಾನ್ಸಿ :** (ಆತುರದಿಂದ) ಇಲ್ಲ ಜೆನ್ನಿ. ಈಗ್ಲೇ ತೆಗಿ. ನಾನು ಬೇಗ ನೋಡಬೇಕು.

**ಜೆನ್ನಿ :** (ಗಾಬರಿಯಿಂದ) ಬೇಡ ಜಾನ್ಸಿ ಬೇಡ. ಸುಮ್ಮನೆ ಹಠ ಹಿಡೀಬೇಡ. ಇನೂ ಸ್ವಲ್ಪ ಹೊತ್ತು ಆರಾಮವಾಗಿ ಮಲಗಿರು.

**ಜಾನ್ಸಿ :** ಹಠ ಹಿಡಿದಿರೋದು ನೀನು. ಸುಮ್ಮನೆ ಕಿಟಕಿ ತೆಗಿ.

**ಜೆನ್ನಿ :** ನಿನಗಂತೂ ಬುದ್ಧಿ ಬರಲ್ಲ. ಏನಾದ್ರೂ ಮಾಡ್ಕೊ.

(ಜೆನ್ನಿ ಕಿಟಕಿ ಬಾಗಿಲು ತೆಗೆದು, ತಲೆ ತಗ್ಗಿಸಿಕೊಂಡು ಹಿಂದೆ ಬರುತ್ತಾಳೆ. ಜಾನ್ಸಿ ಕಿಟಕಿಯ ಕಡೆ ಬಿರುಗಣ್ಣಿನಿಂದ ನೋಡುತ್ತಾಳೆ. ಮುಖದಲ್ಲಿ ಆಶ್ಚರ್ಯ)

**ಜಾನ್ಸಿ :** ಕೊನೆ ಎಲೆ ಬಿದ್ದೇ ಇಲ್ಲ. (ಮಂಚದ ಮೇಲೆ ಕುಳಿತುಕೊಳ್ಳುತ್ತಾಳೆ) ಜೆನ್ನಿ, ಜೆನ್ನಿ, ಅಲ್ಲಿ ನೋಡು, ಆ ಎಲೆ ಬಿದ್ದೇ ಇಲ್ಲ. (ಜೆನ್ನಿ ಕಿಟಕಿಯ ಕಡೆ ಆಶ್ಚರ್ಯದಿಂದ ನೋಡುತ್ತಾಳೆ) ಜೆನ್ನಿ, ಸ್ವಲ್ಪ ಕೈ ಹಿಡ್ಕೊ. (ಕಿಟಕಿಯ ಹತ್ತಿರ ಹೋಗುತ್ತಾಳೆ) ರಾತ್ರಿ ಗಾಳಿ ಜೋರಾಗಿ ಬೀಸ್ತಾ ಇತ್ತು. ಮಳೇನೂ ಸುರೀತಾ ಇತ್ತು. ಆದ್ರೂ ಆ ಕೊನೆ ಎಲೆ ಗೋಡೆಗೆ ಗಟ್ಟಿಯಾಗಿ ಅಂಟಿಕೊಂಡಿದೆ. ಜೆನ್ನಿ, ಯಾವ್ದೂ ಬೇಗ ಸಾಯೋದಿಕ್ಕೆ ಇಷ್ಟಪಡಲ್ವಾ ?

**ಜೆನ್ನಿ :** ಸಣ್ಣ ಹುಳ ಕೂಡ ಬದುಕೋ ಪ್ರಯತ್ನ ಮಾಡುತ್ತೆ.

**ಜಾನ್ಸಿ :** ಗಾಳಿ, ಮಳೆ – ಸೋಲು, ದುಃಖ, ಇವುಗಳ ನಡುವೆ, ಅಲ್ಲ ಅವುಗಳನ್ನು ಮೀರಿ ಭದ್ರವಾಗಿ ನಿಲ್ಲಬೇಕು. ಆದ್ರೆ ಯಾಕೆ ನಿಲ್ಲಬೇಕು ? ಜೀವಂತವಾಗಿ ಇರೋದಿಕ್ಕೆ ಬಯಸೋದೇನೆ ಅದರ ಗುಣ ಇರ್‍ಬೇಕು.

**ಜೆನ್ನಿ :** ಬಹರ್ಮನ್ ಹೇಳ್ತಿದ್ದ ಹಾಗೆ ಸೋಲಿಗೆ ಶರಣಾದ್ರೆ ಜಯ ಪಡೆಯೋದು ಅಸಾಧ್ಯ. ಸಾವನ್ನು ಇಷ್ಟಪಟ್ಟರೆ ಬದುಕೋದು ಅಸಾಧ್ಯ.

**ಜಾನ್ಸಿ :** ನಾನು ಬದುಕೋದ್ರಿಂದ ಏನಾದರೂ ಉಪಯೋಗ ಇದೆಯಾ ?

**ಜೆನ್ನಿ :** ಏನು ಮಾತಾಡ್ತೀಯ ಜಾನ್ಸಿ. ಸರಿಯಾದ ರೀತಿಯಲ್ಲಿ ಬದುಕಿದ್ರೆ, ಪ್ರತಿಯೊಬ್ಬರ ಬದುಕು ಉಪಯೋಗಾನೆ; ಒಬ್ಬರಲ್ಲ, ಇನ್ನೊಬ್ಬರಿಗೆ. ಒಂದು ರೀತಿ ಯಲ್ಲದಿದ್ದರೆ ಇನ್ನೊಂದು ರೀತೀಲಿ. ಜಾನ್ಸಿ ನೀನು ನನಗೆ ಬೇಕು... ನಮ್ಮೆಲ್ಲರಿಗೂ ಬೇಕು. ನಿನ್ನನ್ನು ಒಳ್ಳೆಯ ಕಲಾವಿದೆಯಾಗಿ ನೋಡೋಕೆ ಎಲ್ಲರೂ ಇಷ್ಟಪಡ್ತಾರೆ.

**ಜಾನ್ಸಿ :** ಒಳ್ಳೆಯ ಕಲಾವಿದೆಯಾಗಿ ನೋಡೋದಿಕ್ಕೆ ಇಷ್ಟ ಪಡ್ತಾರೆ. ಶವವಾಗಿ ನೋಡೋದಿಕ್ಕೆ...

**ಜೆನ್ನಿ :** ಕಷ್ಟಪಡ್ತಾರೆ. ಹೆಚ್ಚು ದಿನ ಆದ್ರೆ ಮೂಗು ಮುಚ್ಕೋತಾರೆ.

**ಜಾನ್ಸಿ :** (ನಗುತ್ತಾ) ಹೌದು. ಹೌದು. ಜೆನ್ನಿ, ರಾತ್ರಿ ಸೂಪ್ ಕೊಡ್ತೀನಂತ ಹೇಳಿದ್ದೆಯಲ್ಲ, ಈಗ ಕೊಡ್ತೀಯಾ ? (ಜೆನ್ನಿ ತುಂಬಿದ ಕಣ್ಣುಗಳಿಂದ ತಲೆಯಾಡಿಸುತ್ತಾ ಹೋಗುತ್ತಾಳೆ) ನನ್ನ ಬದುಕಿಗೂ ಒಂದು ಅರ್ಥ ಇದೆ. ನಾನೂ ಬದುಕಬೇಕು. (ಕನಸಿನಲ್ಲಿರುವವಳಂತೆ) ನೇಪಲ್ಸ್‌ನ ಕಡಲತೀರ... ಮೈದುಂಬಿ ನಲಿಯತ್ತಾ, ಮುಗಿಲೆತ್ತರಕ್ಕೆ ಹಾರುವ ಅಲೆಗಳು. ಉದಯದ ಸೂರ್ಯನ ಹೊಂಗಿರಣಗಳನ್ನು ಮೈತುಂಬಾ ಹೊದ್ದು ಮಿಂಚುವ ಸಾಗರದ ನೀರು. ಅದನ್ನು ನೋಡುತ್ತಾ ಹೊಸ ಚೈತನ್ಯ ತುಂಬಿಕೊಳ್ಳುವ ಜನ. ಇದನ್ನೆಲ್ಲಾ ಚಿತ್ರಿಸ್ಬೇಕು.

(ಜಾನ್ಸಿ ಹಾಗೆ ನಿಂತಿರುತ್ತಾಳೆ. ಡಾಕ್ಟರ್ ಹೆನ್ರಿ ಒಳಗೆ ಬರುತ್ತಾರೆ. ಜಾನ್ಸಿಯನ್ನು ನೋಡಿ ದಿಗ್ಭ್ರಾಂತರಾಗಿ ನಿಲ್ಲುತ್ತಾರೆ)

**ಡಾಕ್ಟರ್ :** (ಆಶ್ಚರ್ಯದಿಂದ) ಜಾನ್ಸಿ !!

**ಜಾನ್ಸಿ :** (ಬೆಚ್ಚಿದವಳಂತೆ) ಹಾಂ ! ಹೋ ಡಾಕ್ಟರ್, ಬನ್ನಿ. ಡಾಕ್ಟರ್. ನನಗೆ ಮೆಡಿಸನ್ ಕೊಡಿ. ಬೇಗ ಹುಷಾರಾಗ್ಬೇಕು. ನೇಪಲ್ಸ್ ಕಡಲತೀರದ ಪೇಂಟಿಂಗ್ ಮಾಡಬೇಕು.

**ಡಾಕ್ಟರ್ :** ನೀನು ಈಗಾಗಲೇ ಅರ್ಧ ಹುಷಾರಾಗಿದ್ದೀಯ. ಒಂದಷ್ಟು ಒಳ್ಳೆ ಆಹಾರ ತಗೊಂಡ್ರೆ ಪೂರ್ತಿ ಗುಣವಾಗ್ತೀಯ. (ಜೆನ್ನಿ ಬರುತ್ತಾಳೆ)

**ಜೆನ್ನಿ :** ಹಲೋ ಡಾಕ್ಟರ್ !

**ಡಾಕ್ಟರ್ :** ಹಲೋ ಜೆನ್ನಿ. ಜಾನ್ಸಿಗೆ ಚೆನ್ನಾಗಿ ತಿನ್ನೋದಿಕ್ಕೆ ಕೊಡು. ಇನ್ನು ಸ್ವಲ್ಪ ದಿನದಲ್ಲೇ ರನ್ನಿಂಗ್ ರೇಸ್‌ಗೆ ಕಳುಹಿಸಬಹುದು. (ಅಲ್ಲಿ ಪೈಪ್ ಬಿದ್ದಿದ್ದನ್ನು ನೋಡಿ) ಹೋ ! ಇದೇನಿದು ಪೈಪ್ ? ಇದನ್ಯಾವಾಗ ಶುರು ಮಾಡ್ದೆ.

**ಜೆನ್ನಿ :** ಇಲ್ಲ, ಇಲ್ಲ, ನನ್ನದಲ್ಲ. ನಿನ್ನೆ ಬಹರ್ಮನ್ನೇ ಮಾಡೆಲ್ ಆಗಿದ್ದ. ಮರೆತುಬಿಟ್ಟು ಹೋಗಿರಬೇಕು.

**ಡಾಕ್ಟರ್ :** ಅಂದ ಹಾಗೆ, ಬಹರ್ಮನ್‌ಗೆ ತುಂಬ ಹುಷಾರಿಲ್ಲ.

**ಜೆನ್ನಿ :** ಏನಾಯ್ತು ?

**ಡಾಕ್ಟರ್ :** ನ್ಯೂಮೋನಿಯಾ ತುಂಬ ಹೆಚ್ಚಾಗಿದೆ. ಬೆಳಿಗ್ಗೆ ತುಂಬ ನರಳ್ತಾ ಇದಾನೆ ಅಂತ ಆಸ್ಪತ್ರೆಗೆ ಕರೆದುಕೊಂಡು ಬಂದ್ರು. ರೋಗ ತುಂಬ ಹೆಚ್ಚಾಗಿದೆ.

**ಜೆನ್ನಿ :** ಅಯ್ಯೋ, ಎಂಥ ಕೆಲಸ ಆಯ್ತಲ್ಲ.

(ಅಷ್ಟರಲ್ಲಿ ಟಾಮ್, ಜೇಮ್ಸ್ , ಮ್ಯಾಕ್‌ವೆಲ್, ಗೋವನ್ ಬರುತ್ತಾರೆ)

**ಜೇಮ್ಸ್ :** ಜೆನ್ನಿ, ವಿಷಯ ಗೊತ್ತಾಯ್ತು ಅನ್ಸುತ್ತೆ.

**ಜೆನ್ನಿ :** ಏನು, ಬಹರ್ಮನ್ ವಿಷಯಾನಾ ? ಈಗ ತಾನೆ ಡಾಕ್ಟರ್ ಹೇಳ್ತಾ ಇದ್ರು. ಬಹರ್ಮನ್‌ಗೆ ತುಂಬ ಹುಷಾರಿಲ್ಲಾಂತ.

**ಜೇಮ್ಸ್ :** ಅವನು ಉಳೀಲಿಲ್ಲ. (ತಲೆ ತಗ್ಗಿಸುತ್ತಾನೆ. ಹ್ಯಾಟ್ ತೆಗೆಯುತ್ತಾನೆ)

**ಗೋವನ್ :** ಬಹರ್ಮನ್ ನಮ್ಮನ್ನೆಲ್ಲಾ ತೊರೆದುಹೋದ.

**ಟಾಮ್ :** ಇನ್ನೆಲ್ಲಿ ಆ ಬಹರ್ಮನ್ !

**ಜೆನ್ನಿ :** (ಅಳುವ ಧ್ವನಿಯಲ್ಲಿ) ರಾತ್ರಿ ತಾನೆ ಮಾಡೆಲ್ ಆಗೋದಿಕ್ಕೆ ನಿಮ್ಮ ರೂಮಿಗೆ ಬಂದಿದ್ದೆ. ಆದ್ರೆ ಪರ್ವಾಗಿಲ್ಲ, ಚೆನ್ನಾಗೇ ಇದ್ದ.

**ಗೋವನ್ :** ಬೆಳಿಗ್ಗೆ ಅಷ್ಟೊತ್ತಿಗೆ ಎಚ್ಚರ ಆಯ್ತು. ಟೀ ಕುಡಿಯೋಣ ಅಂದುಕೊಂಡು ಹೊರಗೆ ಬಂದೆ. ಬಹರ್ಮನ್ ರೂಮಿನಲ್ಲಿ ತುಂಬ ನರಳೋ ಶಬ್ದ ಬಂತು. ಬಾಗಿಲು ತೆಗೆದೇ ಇತ್ತು. ರೂಮೆಲ್ಲಾ ಕೆಸರಾಗಿತ್ತು.

**ಜೆನ್ನಿ :** ರೂಮೇಕೆ ಕೆಸರಾಗಿತ್ತು ?

**ಜೆಮ್ಸ್ :** ಕೆಸರಿನ ಗುರುತು ಅಡುಗೆಮನೆ ಕಡೆಯಿಂದ ಬಂದಿತ್ತು. ಅಲ್ಲಿಗೇಕೆ ಹೋದ ಅಂತ ನೋಡ್ತಾ ಹೋದೆ. ಹಿಂದೆ ಓಣಿಯಲ್ಲಿ ಏಣಿ ಬಿದ್ದಿತ್ತು. ಹತ್ತಿರ ಹೋದಾಗ ಗೊತ್ತಾಯ್ತು. ರಾತ್ರಿ ಚಳಿಯಲ್ಲಿ ನಡುಗ್ತಾ , ಮಳೇಲಿ ನೆನೆಯುತ್ತಾ , ಎಲೆಗಳೆಲ್ಲಾ ಉದುರಿಹೋದ ಬಳ್ಳಿಗೆ ಒಂದು ಎಲೆ ಬಿಡಿಸಿದ್ದ.

* * *

*ಇಂಗ್ಲಿಷ್ ಮೂಲ : 'ದಿ ಲಾಸ್ಟ್ ಲೀಫ್' – ಓ ಹೆನ್ರಿ ರಚಿತ ಸಣ್ಣ ಕಥೆ*
*ನಾಟಕ ರೂಪಕ್ಕೆ ಅಳವಡಿಸಿದವರು : ಎಸ್. ಎನ್. ಸ್ವಾಮಿ*


**ಎಸ್. ಎನ್. ಸ್ವಾಮಿ**
'ಶ್ರೀಶಕ್ತಿಕೃಪ', ೨ನೇ ಅಡ್ಡರಸ್ತೆ, ಕೆ. ಇ. ಬಿ. ರಸ್ತೆ, ಆರ್. ವಿ. ಕಾಲೋನಿ
ತುಮಕೂರು – ೫೭೨ ೧೦೨

ಕಾವ್ಯಲೋಕ



# ಹುತ್ತ ಮತ್ತು ಹಾವು

– ೧ –

**ಧ್ಯಾ**ನಸ್ಥ ಸ್ಥಿತಿಯಲ್ಲಿ ಅವುಗಳು ರಚಿಸಲಿಲ್ಲ ಕವಿಯಂತೆ
ಹುತ್ತಗಳನ್ನು ಆ ಗೆದ್ದಲು ಹುಳುಗಳು;
ಬದುಕು ಕಲಿಸಿತು ಪಾಠ
ಬೆಚ್ಚಗಿನ ಮನೆ ಕಟ್ಟಿ, ಮಳೆ, ಚಳಿಗಾಲ ಮತ್ತು ಬೇಸಗೆಯ ಶಕೆಯಿಂದ
ರಕ್ಷಿಸಿಕೊಳ್ಳಲು ತಮ್ಮನ್ನು ತಾವು, ಹಾಗೆಯೇ ಮಲಗಲು ವಾತಾಯನದ ತಂಪು ಕೋಣೆ,
ಆಹಾರ ಸಂಗ್ರಹಿಸಲು ಉಗ್ರಾಣ; ಅಲ್ಲಿಯೇ ತನ್ನ ವಂಶವೃದ್ಧಿಯನ್ನು ಮಾಡುವ ಬದುಕು ಮಾಡುವ ತೀರದ ಬಯಕೆ,
ಹಗಲು ರಾತ್ರಿ ವಾಸ್ತವದ ಅರಿವಿನಲ್ಲಿ ದುಡಿದೂ, ದುಡಿದೂ, ಕಟ್ಟಿಬಿಟ್ಟವು.
ನರನಾಡಿಯ ರಕ್ತ ಬಸಿದು, ಮಣ್ಣು ಹೊತ್ತು, ಎಂತದೋ ರಸಾಯನದಿಂದ ಮಣ್ಣನ್ನು ಅಂಟು ಅಂಟಾಗಿ ಮಾಡಿ
ಕಟ್ಟಿಯೆ ಬಿಟ್ಟವು ಎಂಥ ಚೆಂದಾದ ಬೆಟ್ಟದಂತೆ ದೇಗುಲದ ಗೋಪುರದಂತೆ, ಪುಟ್ಟ ಹುಳುಗಳು
ಕಟ್ಟಿಯೆ ಬಿಟ್ಟವು ತನ್ನ ಅರಮನೆಯನ್ನು.
ಆದರೆ ದುಡಿಯುವ ಕೈಗಳಿಗೆ ಅದನ್ನು ಉಣ್ಣುವ ಭಾಗ್ಯವಿರಲಿಲ್ಲ.
ದೂರದಿಂದಲೇ ಹುಳುಗಳ ಶ್ರಮವನ್ನು ನೋಡಿ, ಕಿಲಾಡಿ ನಗು ನಗುತ್ತಾ ಪಾಳೆಯಗಾರ
ಆ ಚೆಂದದ ಗೋಪುರದಂತಹ ಮನೆಗೆ ನುಗ್ಗಿಯೇ ಬಿಟ್ಟ.
ಹಾವೊಳಗಿನ ಹೂವಿನ ಜಾತಿಯ ದೊರೆ ನಾಗರಾಜ,
ಹೊರಗೆ ದಬ್ಬಿ, ಆ ಗೆದ್ದಲು ಹುಳುಗಳನ್ನು ಬೀದಿಪಾಲು ಮಾಡಿ
ನಡೆಯಿರಯ್ಯ! ನನ್ನ ಮನೆಗೆ ನಿಮ್ಮ ನೆರಳು ಬೀಳಕೂಡದು! ನಡೆಯಿರಾಚೆ!
ಅತ್ತವು, ಆದರೆ ಅವುಗಳ ಆ ಅಲಕ್ಷಿತ ಕ್ರಿಮಿಗಳ ಆಕ್ರಂದನವನ್ನು ಕೇಳುವವರಾರು?



– ೨ –

ಅಷ್ಟಕ್ಕೇ ಆ ಹುಳುಗಳ ಶ್ರಮದಲ್ಲಿ ಮನೆ ದಕ್ಕಿಸಿಕೊಂಡ ಪಾಳೆಯಗಾರ
ನಿಲ್ಲದೆ ತನ್ನ ಅಧಿಕಾರವನ್ನು ವಿಸ್ತರಿಸಿದ ಕಪ್ಪೆ ಮತ್ತು ಮೂಷಕಗಳ ಪ್ರಪಂಚಕ್ಕೆ,
ಮತ್ತೆ ಮರದಡಿಗೆ ಚೆಂದದ ಶಿಲ್ಪವಾಗಿ ಕುಳಿತ.
ಮನುಷ್ಯರ ವಂಚನೆಯ ದಾಳವಾಗಿ
ಜನಿವಾರ ತೊಡಿಸಿದರು, ಮತ್ತೆ ಪಾಪ, ಪುಣ್ಯಗಳನ್ನು ಅಂಟಿಸಿದರು.
ಮುಟ್ಟಾದವರು, ಹಾಗೂ ಮುಟ್ಟಬಾರದವರು ಹತ್ತಿರಕ್ಕೆ ಬಾರದಂತೆ
ಉದ್ಗ್ರಂಥಗಳನ್ನು ರಚಿಸಲು ಶುದ್ಧತೆಯನ್ನು ಹೊದಿಸಲು
ಮಡೆ ಮಡೆ ಸ್ನಾನವನ್ನು ಪುಣ್ಯ ಸಂಪಾದನೆಗೆಂದು ಶಾಸ್ತ್ರಗಳನ್ನು
ಮಾಡಲಾಯಿತು.
ಆದರೆ ದೂರ ದೂರವಿದ್ದ ಆ ಗೆದ್ದಲು ಹುಳುಗಳು, ಕಪ್ಪೆಗಳು
ಹಾಗೂ ಮೂಷಕಗಳು
ಒಟ್ಟಾಗಿ ಆ ದಿನ ದೂರವಿರಲಾರದಲ್ಲ
ಹುತ್ತವನ್ನು ಆ ಪಾಳೆಯಗಾರನ ಸಮಾಧಿಯನ್ನಾಗಿ ಮಾಡುವ
ಮತ್ತೆ ತಮ್ಮ ದುಡಿಮೆ ತಮಗೆ ಸಿಗುವ ಆ ದಿನಗಳು ಅಷ್ಟೊಂದು ದೂರವೇ?
ಎಂದು ತಮ್ಮಲ್ಲಿಯೇ ಕನಸಿನ ಗೂಡುಗಳನ್ನು ಕಟ್ಟಿಕೊಳ್ಳುತ್ತ
ಬೀದಿಪಾಲಾದವು; ಪ್ರತಿ ನಾಯಿಗೂ ಅದರದೇ ಆದ ದಿನವಿದೆ.

**ಉದಯಕುಮಾರ ಹಬ್ಬು**
ಕಿನ್ನಿಗೋಳಿ – ೫೭೪ ೧೫೦

# ನಿರ್ಭೀತ ಚಿಂತಕ : ಡಾ॥ ಎಂ. ಎಂ. ಕಲಬುರ್ಗಿ

ಡಾ॥ ಕಲಬುರ್ಗಿ ಅವರು ಉಪಕುಲಪತಿಗಳಾಗಿದ್ದಾಗ ದೆಹಲಿಗೆ ಕಾರ್ಯಾರ್ಥವಾಗಿ ಹೋದಾಗ ವಿಮಾನ ನಿಲ್ದಾಣದಿಂದ ಅವರು ಉಳಿದುಕೊಳ್ಳಬೇಕಾಗಿದ್ದ ಸರ್ಕಾರಿ ಅತಿಥಿಗೃಹಗಳಿಗೂ, ಹೋಟೆಲ್‌ಗಳ ತನಕ ಟ್ಯಾಕ್ಸಿಯಲ್ಲಿ ಹೋಗಬಹುದಾಗಿತ್ತು. ಆದರೆ ಅವರು ಸಾರ್ವಜನಿಕ ಸಾರಿಗೆಗಳಲ್ಲಿ ಅಥವಾ ಆಟೋರಿಕ್ಷಾದಲ್ಲಿ ಹೋಗುತ್ತಿದ್ದರಂತೆ. ಇದನ್ನು ಕಂಡ ಕರ್ನಾಟಕದ ಸಾಹಿತಿಗಳು, ಅಧಿಕಾರಿಗಳು 'ವೈಸ್ ಛಾನ್ಸೆಲರ್ ಆದವರು ಬಸ್ಸಿನಲ್ಲಿ ಏಕೆ ಬರುತ್ತೀರಿ ? ಟ್ಯಾಕ್ಸಿಯಲ್ಲಿ ಬರಬಹುದಿತ್ತಲ್ಲ' ಎಂದು ಕೇಳಿದಾಗ, 'ದೆಹಲಿಯಲ್ಲಿ ನನ್ನನ್ನು ವಿಶ್ವವಿದ್ಯಾಲಯದ ಕುಲಪತಿ ಎಂದು ಗುರುತಿಸುವವರು ಯಾರೂ ಇರುವುದಿಲ್ಲ. ನಾನು ಹೇಗೆ ಪ್ರಯಾಣ ಮಾಡಿದರೂ, ನನ್ನ ಗೌರವಕ್ಕೆ ಚ್ಯುತಿ ಇಲ್ಲ' ಎಂದು ನಕ್ಕುಬಿಡುತ್ತಿದ್ದರು.



ದಿನಾಂಕ ೩೦-೦೮-೨೦೧೫ ಕರ್ನಾಟಕ ಮತ್ತು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅತ್ಯಂತ ಕರಾಳ ದಿನವೆಂದು ಶಾಶ್ವತವಾಗಿ ದಾಖಲಾಗಿಹೋಯಿತು. ಅಂದು ಕನ್ನಡ ಸಾಹಿತ್ಯಲೋಕದ ದಿಗ್ಗಜ, ಅತ್ಯಂತ ಪ್ರಸಿದ್ಧ ಬರಹಗಾರ, ವಾಗ್ಮಿ, ವಿಚಾರವಂತ, ನಿರ್ಭೀತ ಸತ್ಯಪ್ರತಿಪಾದಕ, ಸಂಶೋಧಕ ಮತ್ತು ಕನ್ನಡ ವಿಶ್ವವಿದ್ಯಾನಿಲಯದ ಉಪಕುಲಪತಿ ಸ್ಥಾನವನ್ನು ಅಲಂಕರಿಸಿದ್ದ ಡಾ॥ ಎಂ. ಎಂ. ಕಲಬುರ್ಗಿ ಹಂತಕನ ಗುಂಡೇಟಿಗೆ ಬಲಿಯಾಗಿ ವಿಧಿವಶರಾದರು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಆಗಿಹೋದ ಯಾವ ಕ್ರಾಂತಿ ಕವಿ, ಬರಹಗಾರ, ಚಿಂತಕ, ಸಂಶೋಧಕನೂ ಇಂತಹ ದುರ್ಮರಣಕ್ಕೆ ತುತ್ತಾಗಿರಲಿಲ್ಲ. ಅವರ ಈ ದುರ್ಮರಣ ಕರ್ನಾಟಕದ ಪ್ರಜ್ಞಾವಂತರನ್ನೆಲ್ಲ ದುಃಖಕ್ಕೀಡುಮಾಡಿದೆ, ಭಯವನ್ನುಂಟುಮಾಡಿದೆ.

ಸಾಧಾರಣವಾಗಿ ಕಗ್ಗೊಲೆಯಂಥ ಹೀನ ದುಷ್ಕೃತ್ಯಗಳಿಗೆ ಹೆಣ್ಣು, ಮಣ್ಣು, ಹಣ ಪ್ರಮುಖ ಕಾರಣಗಳೆಂದು ಮುಂಬಯಿ ಉಚ್ಚನ್ಯಾಯಾಲಯದ ಅಧಿಕಾರಿಗಳು ಅಂಕಿ-ಸಂಖ್ಯೆಗಳ ಆಧಾರದ ಮೇಲೆ ನಿರ್ಧರಿಸಿದ್ದರು. ಸ್ವಾತಂತ್ರ್ಯಪೂರ್ವದ ಕಾಲಾವಧಿಯಲ್ಲಿ ಮುಂಬೈ ರಾಜ್ಯದಲ್ಲೆಲ್ಲ ಅತ್ಯಂತ ಹೆಚ್ಚು ಕೊಲೆಗಳಾಗುತ್ತಿದ್ದುದು ಬೆಳಗಾವಿ ಮತ್ತು ವಿಜಯಪುರ ಜಿಲ್ಲೆಗಳಲ್ಲಿ. ಅದಕ್ಕೇನು ಕಾರಣ ಎಂದು ನ್ಯಾಯಾಲಯಗಳ ಮುಂದೆ ಬಂದ ಮೊಕದ್ದಮೆಗಳ ಆಧಾರದ ಮೇಲೆ 'ಹೆಣ್ಣು, ಮಣ್ಣು, ಹಣ' ಮುಖ್ಯಕಾರಣಗಳೆಂದು ದಾಖಲಿಸಿದ್ದಾರೆ. ಡಾ॥ ಕಲಬುರ್ಗಿಯವರ ಹತ್ಯೆ ಮೇಲೆ ಕಾಣಿಸಿದ ಕಾರಣಗಳಿಂದಾಗಿ ಆಗಿರಲಿಕ್ಕಿಲ್ಲ. ಇದೊಂದು ಸ್ಥೂಲವಾದ, ಸತ್ಯಕ್ಕೆ ಹತ್ತಿರವಾದ ಭಾವನೆ ಎನ್ನಬಹುದು.

ಡಾ॥ ಕಲಬುರ್ಗಿಯವರ ಸಾಹಿತ್ಯಿಕ ಹಾಗೂ ಸಾರ್ವಜನಿಕ ಜೀವನ ವೃತ್ತಾಂತವನ್ನು ಬಲ್ಲವರು. ಹೆಣ್ಣು, ಮಣ್ಣಿನ ಕಾರಣಗಳಿಂದ ಅವರ ಪ್ರಾಣ ತೆಗೆಯುವಂತಹ ವೈರಿಗಳು ಅವರಿಗಿರಲಿಲ್ಲ. ಏನಾದರೂ ಹಣದ ವಿಚಾರದಲ್ಲಿ ವೈಮನಸ್ಸು ಬೆಳೆದಿರ ಬಹುದೇ ? ಎಂದರೆ ಅದೂ ಇರಲಿಕ್ಕಿಲ್ಲ. ಏಕೆಂದರೆ ಅವರು ಯಾವುದೇ ವ್ಯಾಪಾರ, ವ್ಯವಹಾರ, ಉದ್ದಿಮೆ... ಮುಂತಾದ ವ್ಯವಹಾರಗಳಲ್ಲಿ ತೊಡಗಿರಲಿಲ್ಲ. ಅವರಿಗೆ ತಮ್ಮ ಉದ್ಯೋಗದಿಂದಲೇ ಸಾಕಷ್ಟು ಧನಸಂಗ್ರಹ ಸಾಧ್ಯವಾಗಿತ್ತು. ವೃತ್ತಿಯಲ್ಲಿದ್ದಾಗ ಅವರಿಗೆ ನ್ಯಾಯವಾಗಿ ಸಲ್ಲಬಹುದಾಗಿದ್ದ, ಸಲ್ಲಬೇಕಾಗಿದ್ದ ಹಣವನ್ನು ಪ್ರಾಮಾಣಿಕವಾಗಿಯೇ ಪಡೆದಿದ್ದರು. ಅದಕ್ಕೆ ನನಗೆ ಗೊತ್ತಿರುವ ನಂಬಲರ್ಹ ವಾದವರಿಂದ ಕೇಳಿದ ಮಾಹಿತಿಯ ಪ್ರಕಾರ ಅವರಿಗೆ ಹಣದ ದಾಹವಿರಲಿಲ್ಲ. ಅವರು ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳನ್ನಾಗಿ ನೇಮಕ ಮಾಡಿದಾಗ ಕಚೇರಿಯ ಅಧಿಕಾರಿಗಳೊಬ್ಬರು ಉಪಕುಲಪತಿಗಳ ಕಾರ್ಯಾರ್ಥವಾಗಿ, ಸಂದರ್ಶನಾರ್ಥವಾಗಿ ಅಥವಾ ಕಚೇರಿಗೆ ಬಂದವರಿಗೆ ಕಾಫಿ, ತಿಂಡಿ, ಊಟೋಪಚಾರ ಮಾಡಲು ತಿಂಗಳಿಗೆ ಆಗಿನ ಕಾಲದಲ್ಲಿ ೧೦ ಸಾವಿರ ರೂಪಾಯಿಗಳ ಮೊತ್ತವನ್ನು ಒಟ್ಟಾಗಿ ವಿಶ್ವವಿದ್ಯಾಲಯದ ಉಪಕುಲಪತಿಗಳಿಗೆ ಸಂದಾಯ ಮಾಡುತ್ತಿತ್ತು. ಆ ಹಣದ ವೆಚ್ಚಕ್ಕೆ ಅವರೇನೂ ವಿವರಗಳನ್ನು ಕೊಡಬೇಕಾಗಿರಲಿಲ್ಲ. ಕಚೇರಿಯ ಅಧಿಕಾರಿಗಳು ಈ ನಿಯಮಾನುಸಾರ ಡಾ॥ ಕಲಬುರ್ಗಿಯವರಿಗೆ ಪ್ರತಿ ತಿಂಗಳು ಹತ್ತು ಸಾವಿರ ರೂಪಾಯಿಗಳನ್ನು ಸಂದಾಯ ಮಾಡಲು ಒಂದು ಅಧಿಕೃತ ಪತ್ರಕ್ಕೆ ಸಹಿ ಪಡೆಯಲು ಬಂದರು. ಡಾ॥ ಕಲಬುರ್ಗಿಯವರು ಅದಕ್ಕೆ ಸಹಿ ಮಾಡುವ

**ಕೋ. ಚೆನ್ನಬಸಪ್ಪ**

ಮುಂಚೆ, ಅಷ್ಟು ಹಣ ಏತಕ್ಕಾಗಿ ಎಂದು ವಿಚಾರಿಸಿದರು. ಸಂಬಂಧಿಸಿದ ಅಧಿಕಾರಿ ಮೇಲಿನ ವಿವರಗಳನ್ನು ತಿಳಿಸಿದರು. ಆಗ ಡಾ॥ ಕಲಬುರ್ಗಿಯವರು ಅಷ್ಟು ಮೊತ್ತವನ್ನು ಉಪಕುಲಪತಿಗಳಿಗೆ ಅನಾಮತ್ತಾಗಿ ಕೊಡುವುದು ಬೇಡ. ಅದಕ್ಕಾಗಬಹುದಾದ ಖರ್ಚನ್ನು ವಿಶ್ವವಿದ್ಯಾಲಯವೇ ಪಾವತಿ ಮಾಡಲಿ ಎಂದು ಅದಕ್ಕೆ ಸಹಿ ಮಾಡಲಿಲ್ಲ. ಒಂದುವೇಳೆ ಹಾಗೆ ಅವರು ಪ್ರತಿ ತಿಂಗಳು ಹತ್ತು ಸಾವಿರ ರೂಪಾಯಿಗಳನ್ನು ಅವರ ಅಧಿಕಾರದಲ್ಲಿದ್ದಷ್ಟು ಅವಧಿಯಲ್ಲಿ ಪಡೆಯ ಬಹುದಾಗಿತ್ತು. ಅದರಲ್ಲಿ ಎಷ್ಟು ಖರ್ಚಾಯಿತು, ಎಷ್ಟು ಉಳಿಯಿತು ಎಂದು ಅವರೇನು ಲೆಕ್ಕ ಕೊಡ ಬೇಕಾಗಿರಲಿಲ್ಲ. ಇನ್ನೊಂದು ನಿದರ್ಶನವೆಂದರೆ... ಅವರು ಉಪಕುಲಪತಿಗಳಾಗಿದ್ದಾಗ ದೆಹಲಿಗೆ ಕಾರ್ಯಾರ್ಥವಾಗಿ ಹೋದಾಗ ವಿಮಾನ ನಿಲ್ದಾಣದಿಂದ ಅವರು ಉಳಿದುಕೊಳ್ಳಬೇಕಾಗಿದ್ದ ಸರ್ಕಾರಿ ಅತಿಥಿಗೃಹಗಳಿಗೂ, ಹೋಟೆಲ್‌ಗಳ ತನಕ ಟ್ಯಾಕ್ಸಿಯಲ್ಲಿ ಹೋಗಬಹುದಾಗಿತ್ತು. ಆದರೆ ಅವರು ಸಾರ್ವಜನಿಕ ಸಾರಿಗೆಗಳಲ್ಲಿ ಅಥವಾ ಆಟೋರಿಕ್ಷಾದಲ್ಲಿ ಹೋಗುತ್ತಿದ್ದರಂತೆ. ಇದನ್ನು ಕಂಡ ಕರ್ನಾಟಕದ ಸಾಹಿತಿಗಳು, ಅಧಿಕಾರಿಗಳು 'ವೈಸ್ ಛಾನ್ಸೆಲರ್ ಆದವರು ಬಸ್ಸಿನಲ್ಲಿ ಏಕೆ ಬರುತ್ತೀರಿ ? ಟ್ಯಾಕ್ಸಿಯಲ್ಲಿ ಬರಬಹುದಿತ್ತಲ್ಲ' ಎಂದು ಕೇಳಿದಾಗ, 'ದೆಹಲಿಯಲ್ಲಿ ನನ್ನನ್ನು ವಿಶ್ವವಿದ್ಯಾಲಯದ ಕುಲಪತಿ ಎಂದು ಗುರುತಿಸುವವರು ಯಾರೂ ಇರುವುದಿಲ್ಲ. ನಾನು ಹೇಗೆ ಪ್ರಯಾಣ ಮಾಡಿದರೂ, ನನ್ನ ಗೌರವಕ್ಕೆ ಚ್ಯುತಿ ಇಲ್ಲ' ಎಂದು ನಕ್ಕುಬಿಡುತ್ತಿದ್ದರು. ಅವರು ಹಂಪಿ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದಾಗ ಅವರಿಗೆ ಸಂದ ವರಮಾನದಲ್ಲಿ

(೫೯ನೇ ಪುಟಕ್ಕೆ)



ರಾಜಪಕ್ಸೆ



ರಾನಿಲ್ ವಿಕ್ರಮ ಸಿಂಘೆ



ಮೈತ್ರಿಪಾಲ ಸಿರಿಸೇನ

## ಶ್ರೀಲಂಕಾದಲ್ಲಿ ಹೊಸ ಸರಕಾರ ಅಧಿಕಾರಕ್ಕೆ

ಶ್ರೀಲಂಕಾದಲ್ಲಿ ಇತ್ತೀಚೆಗೆ ಜರುಗಿದ ಪಾರ್ಲಿಮೆಂಟರಿ ಚುನಾವಣೆಗಳಲ್ಲಿ ಜನ ಸ್ಪಷ್ಟವಾಗಿ ಬದಲಾವಣೆಯ ಪರವಾಗಿ ಮತ ಚಲಾಯಿಸಿದ್ದಾರೆ. ಅಧ್ಯಕ್ಷೀಯ ಚುನಾವಣೆಗಳ ನಂತರ ಏಳು ತಿಂಗಳಾದ ಮೇಲೆ ಪಾರ್ಲಿಮೆಂಟಿಗೆ ನಡೆದ ಚುನಾವಣೆಗಳಲ್ಲಿ ಮಾಜಿ ರಾಷ್ಟ್ರಪತಿ ರಾಜಪಕ್ಸೆ ನೇತೃತ್ವದ ಶ್ರೀಲಂಕಾ ಫ್ರೀಡಮ್ ಪಾರ್ಟಿಯನ್ನು ತಿರಸ್ಕರಿಸಿದ್ದಾರೆ. ಹತ್ತು ವರ್ಷಗಳ ನಂತರ ಯುನೈಟೆಡ್ ನ್ಯಾಷನಲ್ ಪಾರ್ಟಿಯ ನಾಯಕ ರಾನಿಲ್ ವಿಕ್ರಮ ಸಿಂಘೆ ಮತ್ತೆ ಪ್ರಧಾನಿಯಾಗಿ ಆಯ್ಕೆಯಾಗಿದ್ದಾರೆ. ಅವರ ನಾಯಕತ್ವದ ಯುನೈಟೆಡ್ ನ್ಯಾಷನಲ್ ಫ್ರಂಟ್ ಪಾರ್ಟಿ ಪಾರ್ಲಿಮೆಂಟಿನಲ್ಲಿ ಬಹುಮತ ಪಡೆದು ಅಧಿಕಾರಕ್ಕೇರಿದೆ. ಜನರ ಅಪೇಕ್ಷೆಗಳೂ ಅಧಿಕವಾಗಿವೆ. ಮುಖ್ಯವಾಗಿ ದೇಶದ ಉತ್ತರ ಭಾಗದಲ್ಲಿ ಇರುವ ತಮಿಳರ ಸಮಸ್ಯೆಗೆ ಪರಿಹಾರವನ್ನು ನಿರೀಕ್ಷಿಸಲಾಗಿದೆ. ಅದನ್ನು ಹೊಸ ಸರಕಾರ ಎಷ್ಟು ಮಟ್ಟಿಗೆ ನೆರವೇರಿಸುತ್ತದೆಯೋ ನೋಡಬೇಕು. ಅಧ್ಯಕ್ಷೀಯ ಚುನಾವಣೆಗಳಲ್ಲಿ ಮೂಡಿಬಂದ ಮೈತ್ರಿ ಪಕ್ಷಗಳು (ಯುನೈಟೆಡ್ ಫ್ರಂಟ್ ಫಾರ್ ಗುಡ್ ಗವರ್ನೆನ್ಸ್ ) ಈಗ ಮತ್ತೊಮ್ಮೆ ಮಹಿಂದ ರಾಜಪಕ್ಸೆ ನೇತೃತ್ವದ ಶ್ರೀಲಂಕಾ ಫ್ರೀಡಮ್ ಪಾರ್ಟಿಯನ್ನು ಪರಾಜಯಗೊಳಿಸಿದೆ. ಅಧ್ಯಕ್ಷರಾಗಿ ಆಯ್ಕೆಯಾಗಿರುವ ಮೈತ್ರಿಪಾಲ ಸಿರಿಸೇನ ಸಾಕಷ್ಟು ಭರವಸೆಗಳನ್ನು ನೀಡಿದ್ದಾರೆ. ಈಗ ಪಾರ್ಲಿಮೆಂಟರಿ ಚುನಾವಣೆಗಳಲ್ಲಿ ತಮಗೆ ಅನುಕೂಲವಾದ ಜನಮತ ಪಡೆದಿರುವ ಹೊಸ ಸರಕಾರ ಅವನ್ನು ಪೂರೈಸುವ ದಿಶೆಯಲ್ಲಿ ಕಾರ್ಯೋನ್ಮುಖವಾಗಬೇಕಾಗಿದೆ.



ಹತ್ತು ವರ್ಷಗಳಿಂದ ಆಡಳಿತ ನಡೆಸುತ್ತಿದ್ದ ಮಹಿಂದ ರಾಜಪಕ್ಸೆ ಪಾರ್ಲಿಮೆಂಟ್ ಚುನಾವಣೆಗಳಲ್ಲಿ ಜಯಗಳಿಸಿ ಪ್ರಧಾನಿಯಾಗಿ ಅಧಿಕಾರ ವಹಿಸುವ ಕನಸು ಕಾಣುತ್ತಿದ್ದರು. ಜನ ಅವರಿಗೆ ಮತಪೆಟ್ಟಿಗೆಯಲ್ಲಿ ಸರಿಯಾದ ಪಾಠ ಕಲಿಸಿದ್ದಾರೆ. ಅಧಿಕಾರಾವಧಿಯಲ್ಲಿ ರಾಜಪಕ್ಸೆ ದರ್ಪ ಹಾಗೂ ದಬ್ಬಾಳಿಕೆ ನಡೆಸಿದ್ದಾರೆ. ಉತ್ತರದಲ್ಲಿ ತಮಿಳು ಈಳಂ ಜೊತೆ ನಡೆದ ಅಂತರ್ಯುದ್ಧದಲ್ಲಿ ಜಯಗಳಿಸಿದ್ದೇ, ಅವರ ಹೆಗ್ಗಳಿಕೆ. ಆದರೆ ಈ ಯುದ್ಧದಲ್ಲಿ ಮಿತಿಮೀರಿದ ದೌರ್ಜನ್ಯ ಎಸಗಿದ ಆರೋಪ ಅವರ ಮೇಲಿದೆ. ಸಾಕಷ್ಟು ದೀರ್ಘಕಾಲ ನಡೆದ ಸಮರದಲ್ಲಿ ನಡೆದ ನರಹತ್ಯೆಯನ್ನು ಕುರಿತು ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಆಯೋಗ ಕೂಡ ಆತಂಕ ವ್ಯಕ್ತಪಡಿಸಿದೆ. ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಆಯೋಗದ ವರದಿ ಈಚೆಗೆ ಪ್ರಕಟಗೊಂಡಿದೆ. ಅದು ಶ್ರೀಲಂಕಾ ತಮಿಳರ ಮೇಲೆ ದೌರ್ಜನ್ಯಗಳನ್ನು, ಸೇನೆ ನಡೆಸಿದ ಅತ್ಯಾಚಾರಗಳನ್ನು ಬಯಲಿಗೆಳೆದಿದೆ. ಈ ಬಗ್ಗೆ ಸ್ವತಂತ್ರ ಹಾಗೂ ನಿಷ್ಪಕ್ಷಪಾತವಾದ ತನಿಖೆ ನಡೆದು, ಅಪರಾಧ ಎಸಗಿದವರನ್ನು ಶಿಕ್ಷೆಗೆ ಗುರಿಪಡಿಸಬೇಕೆಂದು ಶಿಫಾರಸ್ಸು ಮಾಡಿದೆ. ಶ್ರೀಲಂಕಾ ಸರಕಾರ ಈ ಬಗ್ಗೆ ಸೂಕ್ತವಾದ ಕ್ರಮ ಕೈಗೊಳ್ಳುವುದು ಅಗತ್ಯ. ಭಾರತ ಸರಕಾರ ರಾಜತಾಂತ್ರಿಕ ಮೂಲಗಳಿಂದ ಒತ್ತಡ ತರಬೇಕಾಗಿದೆ. ರಾಜಪಕ್ಸೆ ಅಧಿಕಾರದಲ್ಲಿರುವವರೆಗೆ ದೌರ್ಜನ್ಯದ ಆರೋಪಗಳನ್ನು ನಿರಾಕರಿಸುತ್ತಿದ್ದರು.

ಅಂತರ್ಯುದ್ಧದ ಸಮಯದಲ್ಲಿ ದೇಶ ತ್ಯಜಿಸಿ ಹೋದ ತಮಿಳು ನಿರಾಶ್ರಿತರು ಹಲವು ಯೂರೋಪಿಯನ್ ದೇಶಗಳಲ್ಲಿ ನೆಲೆಸಿದ್ದಾರೆ. ಶ್ರೀಲಂಕಾದಲ್ಲೇ ವಸತಿ ಕಳೆದುಕೊಂಡ ನಿರಾಶ್ರಿತರು ಇನ್ನೂ ಶಿಬಿರಗಳಲ್ಲೇ ಕೊಳೆಯುತ್ತಿದ್ದಾರೆ. ಈ ಸಮಸ್ಯೆಯ ಬಗ್ಗೆ ಆಸ್ಥೆ ವಹಿಸಿ, ಅಧಿಕಾರ ಹಂಚಿಕೆಯನ್ನು ಬಗೆಹರಿಸದಿದ್ದುದೇ ರಾಜಪಕ್ಸೆ ಸೋಲಿಗೆ ಕಾರಣ ಎನ್ನಬಹುದು. ಶ್ರೀಲಂಕಾದ ತಮಿಳರ ಪ್ರಶ್ನೆ ಇಂದು ನಿನ್ನೆಯದಲ್ಲ. ಭಾರತ – ಶ್ರೀಲಂಕಾ ಎರಡೂ ದೇಶಗಳು ಸ್ವತಂತ್ರಗಳಿಸಿದಾಗಿನಿಂದಲೂ ಇದೆ. ಇದು ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಬಿಟ್ಟುಹೋಗಿರುವ ಪಳೆಯುಳಿಕೆ. ಭಾರತಕ್ಕೆ, ಮುಖ್ಯವಾಗಿ ತಮಿಳುನಾಡಿಗೆ ಶ್ರೀಲಂಕಾದ ತಮಿಳರ ಪ್ರಶ್ನೆ ಮುಖ್ಯವಾದುದಾಗಿದೆ. ತಲೆತಲಾಂತರದಿಂದ ತಮಿಳು ಜನ ದೊಡ್ಡ ಸಂಖ್ಯೆಯಲ್ಲಿ ಶ್ರೀಲಂಕಾದಲ್ಲಿ ನೆಲೆಸಿದ್ದಾರೆ. ತಮ್ಮ ಭಾಷೆ, ಸಂಸ್ಕೃತಿಯನ್ನು ಕಾಪಾಡಿಕೊಳ್ಳಲು ಅವರು ಬಯಸುತ್ತಿರುವುದು ಸಹಜವಾದುದೇ ಆಗಿದೆ. ಅವರಿಗೆ ಸ್ವಾಯತ್ತ ಅಧಿಕಾರ ನೀಡಲು ಶ್ರೀಲಂಕಾ ಸರಕಾರ ಹಿಂದು ಮುಂದು ನೋಡುತ್ತಿದೆ. ಶ್ರೀಲಂಕಾದ ಸಂವಿಧಾನದ ವ್ಯಾಪ್ತಿಯಲ್ಲೇ ಅಧಿಕಾರ ಹಂಚಿಕೆ ತಮಿಳರ ಮುಖ್ಯವಾದ ಬೇಡಿಕೆ. ಅದಕ್ಕೆ ಶ್ರೀಲಂಕಾ ಸರಕಾರ ಸೂಕ್ತವಾದ ಪರಿಹಾರ ಕಾಣಬೇಕಾಗಿದೆ. ಭಾರತ–ಶ್ರೀಲಂಕಾಗಳಿಗೆ ಇರಸು–ಮುರುಸಾಗಿರುವ ಈ ಸಮಸ್ಯೆ ಶೀಘ್ರವಾಗಿ ಇತ್ಯರ್ಥಗೊಳ್ಳಲಿ ಎಂದು ಹಾರೈಸೋಣ. ಹಾಗೆಯೇ ತಮಿಳು ಜನರ ಮೇಲೆ ನಡೆದ ದೌರ್ಜನ್ಯಗಳ ವಿಚಾರಣೆಯಾಗಬೇಕು. ಅದಕ್ಕೆ ಅಗತ್ಯವಾದ ಕ್ರಮಗಳನ್ನು ಹೊಸ ಸರಕಾರ ಕೈಗೊಳ್ಳಲಿ.

ಅಂತರ್ಯುದ್ಧ ಮುಗಿದು ಆರು ವರ್ಷಗಳಾದರೂ ತಮಿಳು ಅಲ್ಪಸಂಖ್ಯಾತರ ಸಮಸ್ಯೆಯನ್ನು ಬಗೆಹರಿಸಲು ಪ್ರಯತ್ನಿಸುವ ಬದಲು ಮಿಲಿಟರೀಕರಣಕ್ಕೇ ಹೆಚ್ಚು ಆದ್ಯತೆ ನೀಡಿದ್ದರು. ತನ್ನ ಅಧಿಕಾರವನ್ನು ಬಲಗೊಳಿಸಿಕೊಳ್ಳಲು ಅಧ್ಯಕ್ಷ ಪದದ ಅವಧಿಯನ್ನು ಎರಡು ಅವಧಿಗೆ ಸೀಮಿತಗೊಳಿಸುವುದನ್ನು ರಾಜಪಕ್ಸೆ ವಿರೋಧಿಸಿದ್ದರು. ಹೊಸ ಸರಕಾರಕ್ಕೆ ತಮಿಳು ಪಕ್ಷಗಳು ಬೆಂಬಲ ಸೂಚಿಸಿವೆ. ದೇಶದಲ್ಲಿ ಪ್ರಜಾಪ್ರಭುತ್ವ ಸಂಸ್ಥೆಗಳನ್ನು ಪುನರ್ ಸ್ಥಾಪಿಸಲು ಈಗಾಗಲೇ ಹೊಸ ಸರಕಾರ ಕೆಲವು ಕ್ರಮಗಳನ್ನು ಕೈಗೊಂಡಿದೆ. ತ್ವರಿತಗತಿಯಲ್ಲಿ ಸುಧಾರಣೆಗಳನ್ನು ಜಾರಿಗೆ ತರದೇ ಹೋದರೆ ಪರಿಸ್ಥಿತಿ ಕೈಮೀರಿ ಹೋಗಲೂ ಸಾಕು. ಚುನಾವಣೆಗಳಲ್ಲಿ ರಾಜಪಕ್ಸೆ ನೇತೃತ್ವದ ಪಾರ್ಟಿ ಸುಮಾರು ಶೇ. 43ರಷ್ಟು ಮತಗಳಿಸಿದೆ ಮತ್ತು ಸ್ಥಾನಗಳನ್ನು ಗಳಿಸಿದೆ. ಹಾಗಾಗಿ ಯಾವುದನ್ನೂ ಹಗುರವಾಗಿ ಪರಿಗಣಿಸಲಾಗದು. ಅದಲ್ಲದೆ ಸಿನ್ಹಲೀ ತೀವ್ರವಾದಿಗಳೂ

ಸೀಯಾರ್ಕೆ

ಪ್ರಬಲರಾಗಿದ್ದಾರೆ ಎಂಬುದನ್ನು ಗಮನಿಸಬೇಕು. ದೀರ್ಘ ಕಾಲದಿಂದ ಎಳೆದಾಡುತ್ತಿರುವ ಶ್ರೀಲಂಕಾ ತಮಿಳರ ಪ್ರಶ್ನೆ ಆದಷ್ಟು ಬೇಗನೆ ಬಗೆಹರಿಯಲಿ.

## ಚೀಣಾ ಸೃಷ್ಟಿಸಿದ ಆರ್ಥಿಕ ತಲ್ಲಣ

**ಚೀ**ಣಾದ ಷೇರು ಮಾರುಕಟ್ಟೆಯ ಭಾರಿ ಕುಸಿತ ಮತ್ತು ಅದರ ಕರೆನ್ಸಿಯ ದಿಢೀರ್ ಇಳಿಕೆ ಇಡೀ ಪ್ರಪಂಚದ ಅರ್ಥ ವ್ಯವಸ್ಥೆಯನ್ನು ಗಾಬರಿಗೊಳಿಸಿತು. ಆಗಸ್ಟ್ 24, 2015 ಚೀಣಿ ಮಾಧ್ಯಮಗಳ ಬಣ್ಣನೆಯಂತೆ ನಿಜವಾದ "ಕಪ್ಪು ಸೋಮವಾರ"ವಾಗಿ ಪರಿಣಮಿಸಿತು. 2007ರಿಂದೀಚೆಗೆ ಒಂದೇ ದಿನದಲ್ಲಿ ಷೇರು ಮಾರುಕಟ್ಟೆಯಲ್ಲಿ ಭಾರೀ ಕುಸಿತ ಕಂಡದ್ದು ಆ ಒಂದು ದಿನ. ಪದಾರ್ಥಗಳ ಬೆಲೆ 1999ರ ನಂತರ ತೀವ್ರವಾಗಿ ಇಳಿಯಿತು. ಚೀಣಿ ಆರ್ಥಿಕದಲ್ಲಿ ತಲೆದೋರಿದ ಈ ತಲ್ಲಣ ಪಾಶ್ಚಾತ್ಯ ದೇಶಗಳನ್ನೂ, ಅಭಿವೃದ್ಧಿಶೀಲ ದೇಶಗಳನ್ನೂ ಆತಂಕಕ್ಕೀಡುಮಾಡಿತು. ಪ್ರಪಂಚದ ಎಲ್ಲ ಷೇರುಮಾರುಕಟ್ಟೆಗಳೂ ಅಸಾಧಾರಣವಾದ ಏರುಪೇರುಗಳಿಗೆ ಈಡಾದುವು. ಭಾರತದ ಷೇರು ಮಾರುಕಟ್ಟೆಯ ಸೂಚ್ಯಂಕ 1,625ರಷ್ಟು ಕೆಳಗಿಳಿದು ಕೋಟಿಗಟ್ಟಲೆ ನಷ್ಟ ಸಂಭವಿಸಿತು. ಆರು ವರ್ಷಗಳಲ್ಲಿ ಸೂಚ್ಯಂಕ ಇಷ್ಟು ದೊಡ್ಡ ಪ್ರಮಾಣದಲ್ಲಿ ಕುಸಿದುಬಿಟ್ಟದ್ದು ಕಳೆದ ಆಗಸ್ಟ್ 24ರಂದು ಚೀಣಿ ಅರ್ಥವ್ಯವಸ್ಥೆಯ ಭಾರಿ ಕುಸಿತದಿಂದಾಗಿ. ಅದೇ ಸಮಯದಲ್ಲಿ ರೂಪಾಯಿನ ಮೌಲ್ಯ ಡಾಲರ್‌ಗೆ ಸಂಬಂಧಿಸಿದಂತೆ ರೂ 63.8ರಿಂದ 66.7ಕ್ಕೆ ಏರಿತು. ಭಾರತದ ಅರ್ಥವ್ಯವಸ್ಥೆ ಯಾವುದೇ ವೈಪರೀತ್ಯಗಳನ್ನು ಎದುರಿಸಲು ಸಮರ್ಥವಾಗಿದೆ ಎಂಬ ನಂಬಿಕೆಯನ್ನು ಅದು ಹುಸಿಯಾಗಿಸಿತು. ಉದಾರೀಕರಣ, ಜಾಗತೀಕರಣದ ನೀತಿಯಿಂದಾಗಿ ಭಾರತದ ಆರ್ಥಿಕ ಅಷ್ಟು ಸುರಕ್ಷಿತವೇನಲ್ಲ ಎನ್ನುವುದು ಸ್ಪಷ್ಟವಾಗಿದೆ.

ಒಂದೇ ದಿನದಲ್ಲಿ ಆರ್ಥಿಕ ವಲಯದಲ್ಲಿ ಪುನಶ್ಚೇತನ, ಲವಲವಿಕೆ ಕಂಡುಬಂದಿತಾದರೂ ಜಾಗತಿಕ ಅರ್ಥವ್ಯವಸ್ಥೆಯ ಶಿಥಿಲತೆಯನ್ನು ಅದು ಬಹಿರಂಗಗೊಳಿಸಿತು. ಚೀಣಿ ಅರ್ಥ ವ್ಯವಸ್ಥೆಯ ಬಗ್ಗೆ ಬಂಡವಾಳಶಾಹಿ ದೇಶಗಳಲ್ಲಿ ಬಲವಾದ ಆತಂಕ ಇತ್ತು. ಈಚೆಗೆ ಚೀಣಾದ ಬೆಳವಣಿಗೆ ತೀರಾ ಕಡಿಮೆಯಾಗಿತ್ತು. ಪ್ರಪಂಚದ ಎರಡನೇ ಅತಿದೊಡ್ಡ ಆರ್ಥಿಕ ವ್ಯವಸ್ಥೆಯೆಂದು ಹೆಸರು ಪಡೆದಿರುವ ಚೀಣಾ ಸೃಷ್ಟಿಸಿದ ತಲ್ಲಣ ತಳ್ಳಿಹಾಕುವಂಥದೇನಲ್ಲ. ಯಾವ ಸಂದರ್ಭದಲ್ಲೇ ಆದರೂ ಅದರ ಆರ್ಥಿಕ ವ್ಯವಸ್ಥೆ ಏರುಪೇರಾಗಲು ಸಾಧ್ಯವಿದೆ. ಹಾಗೆಂದ ಮಾತ್ರಕ್ಕೆ ಚೀಣಾದ ಆರ್ಥಿಕದಲ್ಲಿ ಬಿಕ್ಕಟ್ಟಿದೆ ಎಂದೇನಲ್ಲ. ಅಲ್ಲಿರುವ ರಾಜಕೀಯ ವ್ಯವಸ್ಥೆಯು ಎಂಥದೇ ಬಿಕ್ಕಟ್ಟನ್ನು ಅರಗಿಸಿಕೊಳ್ಳಬಲ್ಲದು ಎಂಬ ನಂಬಿಕೆ ಸರಿಯಲ್ಲ. ಮೇಲ್ನೋಟಕ್ಕೆ ಎಲ್ಲವೂ ಸಮರ್ಪಕ ಎಂದು ಕಂಡುಬಂದರೂ ಒಳಗೇ ಆರ್ಥಿಕ ಸಂಕಷ್ಟಗಳು ಇರುವುದು ಗೋಚರವಾಗುತ್ತಿದೆ. ಅಂತೂ ಚೀಣಾ ಸೃಷ್ಟಿಸಿದ ಆರ್ಥಿಕ ಕುಸಿತದ ಬಗ್ಗೆ ಎಚ್ಚರವಹಿಸುವುದು ಅಗತ್ಯ. ಬಂಡವಾಳಶಾಹಿ ಅರ್ಥ ವ್ಯವಸ್ಥೆಯಲ್ಲಿ ಚೀಣಿ ಆರ್ಥಿಕದಲ್ಲಿ ಸಂಭವಿಸಿದ ಭಾರಿ ಕುಸಿತದಂಥ ಸಂಭವಗಳು ಅನಿರೀಕ್ಷಿತವೇನಲ್ಲ. ಭಾರತದಂಥ ದೇಶಗಳು ಇಂಥ ಏರುಪೇರುಗಳನ್ನು ಎದುರಿಸುವ ಸಾಮರ್ಥ್ಯವನ್ನು ಬೆಳೆಸಿ ಕೊಳ್ಳುವುದು ಅನಿವಾರ್ಯ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

*(೫೭ನೇ ಪುಟದಿಂದ)*

ಮೂರು ಲಕ್ಷ ರೂಪಾಯಿಗಳ ಮೊತ್ತವನ್ನು ವಿಶ್ವವಿದ್ಯಾಲಯದ ಮಹಿಳಾ ಸಿಬ್ಬಂದಿಗಳ ಆರೋಗ್ಯ, ಮತ್ತಿತರ ವಿಶೇಷ ಅವಶ್ಯಕತೆಗಳನ್ನು ಪೂರೈಸಲು ಶ್ರೀಮತಿ ಉಮಾದೇವಿ ಕಲಬುರ್ಗಿ ಅವರ ಹೆಸರಿನಲ್ಲಿ ಒಂದು ಟ್ರಸ್ಟ್ ರಚಿಸಿ, ಆ ಟ್ರಸ್ಟಿನಿಂದ ಬರುವ ವರಮಾನವನ್ನು ಆ ಟ್ರಸ್ಟಿನ ಗೌರವ ಸದಸ್ಯರೇ ಮಹಿಳಾ ಸಿಬ್ಬಂದಿಗಳಿಗೆ ಸಹಾಯಮಾಡಬೇಕೆಂದು ನಿಗದಿಪಡಿಸಿದ್ದಾರೆ. ಅವರಿಗೆ ಪಂಪ ಪ್ರಶಸ್ತಿ ಕೊಟ್ಟಾಗ ಸರ್ಕಾರ ಕೊಟ್ಟ ಮೂರು ಲಕ್ಷ ರೂಪಾಯಿಗಳನ್ನು ಹಿಂದಕ್ಕೆ ಕೊಟ್ಟರು. ಈ ನಿದರ್ಶನಗಳನ್ನು ಗಮನಿಸಿದರೆ ಡಾ॥ ಕಲಬುರ್ಗಿಯವರಿಗೆ ಹಣದ ವ್ಯಾಮೋಹವಾಗಲಿ, ಧನಸಂಗ್ರಹದ ದುರಾಸೆಯಾಗಲೀ ಇರಲಿಲ್ಲ ಎಂದು ತಿಳಿಯುತ್ತದೆ. ಇಂಥವರು ಯಾವುದಾದರೂ ವೈಯಕ್ತಿಕ ವ್ಯಾಜ್ಯಗಳಿಗೆ ತೊಡಗಿದ್ದರೆ, ಹಂತಕರ ಗುಂಡಿಗೆ ಬಲಿಯಾಗುವಷ್ಟು ವೈರಿಗಳಂತೂ ಇರುವುದಿಲ್ಲ. ಆದ್ದರಿಂದ ಹಣವೂ ಈ ದುಷ್ಕೃತ್ಯಕ್ಕೆ ಕಾರಣ ಎಂದು ಹೇಳಲಾಗುವುದಿಲ್ಲ.

ಡಾ॥ ಕಲಬುರ್ಗಿಯವರ ಬರಹ, ಬಾಯಿಮಾತು, ವೈಚಾರಿಕತೆ ಅವರ ಹತ್ಯೆಗೆ ಪ್ರಬಲವಾದ ಕಾರಣವಾಗಿದ್ದಿರಬಹುದು ಎಂದು ಭಾವಿಸುವುದು ಸತ್ಯಕ್ಕೆ ಹತ್ತಿರ ಎಂದು ಹೇಳಬಹುದು. ಅವರು ಇತ್ತೀಚೆಗೆ ಕರ್ನಾಟಕದಲ್ಲಿ ಹಬ್ಬಿರುವ ಜಾತೀಯತೆ, ಕೋಮುದ್ವೇಷ, ಒಂದೇ ಮತಾವಲಂಬಿಗಳಲ್ಲಿರುವ ವಿಭಿನ್ನ ತದ್ವಿರುದ್ಧದ ಬಗ್ಗೆ ಅಭಿಪ್ರಾಯಗಳು, ತೀಕ್ಷ್ಣ ಪ್ರತಿಕ್ರಿಯೆಗೆ ಕಾರಣವಾಗಿದ್ದುದು ಗುಟ್ಟೇನೂ ಅಲ್ಲ. ಇಂಥ ಕಾರಣಗಳಿಂದ ಹಿಂದೆ ಅವರನ್ನು ಕೊಲೆ ಮಾಡಲು ಕೊಡಲಿ, ಬಡಿಗೆ, ಕತ್ತಿ ಹಿಡಿದು ಬಹಿರಂಗವಾಗಿ ಪ್ರಯತ್ನಿಸಲಾಗಿತ್ತು. ಅದರಲ್ಲೂ ಅವರು, ಇತ್ತೀಚೆಗೆ ವೀರಶೈವರು ಲಿಂಗಾಯಿತರಲ್ಲ, ಲಿಂಗಾಯಿತರು ಹಿಂದೂಗಳಲ್ಲ, ಲಿಂಗಾಯಿತ ಜಂಗಮರು, ಬೇಡ ಜಂಗಮರಲ್ಲ, ಮೂರ್ತಿಪೂಜಕರು ಧರ್ಮನಿಷ್ಠರಲ್ಲ, ಧರ್ಮದ ಹೆಸರಿನಲ್ಲಿ ಆಚರಿಸುತ್ತಿರುವ ಮೂಢನಂಬಿಕೆಗಳನ್ನು ದೇವರೆಂದು ಭಾವಿಸಿ ಕಲ್ಲು ಮೂರ್ತಿಗಳನ್ನು ಪೂಜಿಸುವುದನ್ನು ಖಂಡಿಸಿ, ದಿ। ಯು.ಆರ್. ಅನಂತಮೂರ್ತಿಗಳು ಇಂಥ ಮೂರ್ತಿಗಳ ಮೇಲೆ ಮೂತ್ರ ವಿಸರ್ಜನೆ ಮಾಡುವುದು ತಪ್ಪಲ್ಲ ಎಂದು ಹೇಳಿದ ಮಾತನ್ನು ಡಾ॥ ಕಲಬುರ್ಗಿ ಸಮರ್ಥಿಸಿ, ತೀಕ್ಷ್ಣ ಅಭಿಪ್ರಾಯಗಳನ್ನು ಕಠೋರ ಮಾತಿನಲ್ಲಿ ಹೇಳುತ್ತಿದ್ದುದು... ಹಾಗೆ ಮಾಡುತ್ತಿದ್ದವರನ್ನು ಬಹು ಕೆರಳಿಸಿತ್ತು. ಬಹುಶಃ ಇಂಥ ಮಾತನ್ನಾಡುವ ಡಾ॥ ಕಲಬುರ್ಗಿಯವರ ಬಾಯನ್ನು ಮುಚ್ಚಿಸಲು, ಬರಹವನ್ನು ನಿಲ್ಲಿಸಲು ಈ ಕೃತ್ಯವನ್ನು ಮಾಡಿರಬಹುದು. ಹೀಗೆ ಹಿಂದೆ ಬಸವಯುಗದ ಕಾಲದಲ್ಲಿ ಉಂಟಾದ ಕ್ರಾಂತಿಕಾಲದಲ್ಲಿ ಬಸವಣ್ಣನವರ ಹತ್ಯೆಯೂ ಆಗಿದ್ದಿರಬಹುದು. ಅದನ್ನು ಆಗಿನ ಜನ ಬಾಯ್ಬಿಟ್ಟು ಆಡದೆ, ಬಸವಣ್ಣ ಬಯಲಾದರು. ಸಂಗಮದಲ್ಲಿ ಐಕ್ಯರಾದರು, ಎಲ್ಲಿಯೋ ಮಾಯವಾದರು! ಎಂಬಿತ್ಯಾದಿ ಸುದ್ದಿಗಳನ್ನು ಹಬ್ಬಿಸಿದರು. ಕರ್ನಾಟಕದಲ್ಲಿ ಅವರ ಸಮಾಧಿಯ ಯಾವ ಗುರುತುಗಳು ಎಲ್ಲಿಯೂ ಇಲ್ಲ. ಇದನ್ನೆಲ್ಲ ಗಮನಿಸಿದರೆ ಕಲಬುರ್ಗಿಯವರನ್ನು ಕೊಂದ ಹಂತಕರು ಬಸವತತ್ವ ಕೊಲೆಗೈದ ಹಂತಕರಿಂದ ಸ್ಫೂರ್ತಿ ಪಡೆದಿರಬಹುದು.

ಕ್ರಾಂತಿಕಾರಿಗಳನ್ನು, ವಿಚಾರವಂತರನ್ನು, ಸತ್ಯಪ್ರತಿಪಾದಕರನ್ನು ದೈಹಿಕವಾಗಿ ಮುಗಿಸಿದರೂ ಅವರ ಚಿಂತನೆಗಳು, ಭಾವನೆಗಳು, ಪ್ರತಿಪಾದಿಸುತ್ತಿದ್ದ ತತ್ತ್ವಗಳು ನಾಶವಾಗುವುದಿಲ್ಲ. ಅದಕ್ಕೆ ಇತ್ತೀಚಿನ ನಿದರ್ಶನವೆಂದರೆ... ಗಾಂಧೀಜಿಯನ್ನು ಗುಂಡಿಕ್ಕಿ ಕೊಂದರೂ ಗಾಂಧೀಜಿಯ ಸತ್ಯ, ಅಹಿಂಸೆ, ಕೋಮು–ಸಾಮರಸ್ಯ ತತ್ತ್ವಗಳೇನೂ ಸತ್ತುಹೋಗಿಲ್ಲ. ತದ್ವಿರುದ್ಧವಾಗಿ ಆಗ ಗಾಂಧೀಜಿಯ ಸಿದ್ಧಾಂತಗಳಿಗಿದ್ದ ಪ್ರಚಾರ, ಪ್ರಭಾವಕ್ಕಿಂತಲೂ ಈಗ ಹೆಚ್ಚು ಪ್ರಚಾರದಲ್ಲಿ ಬಂದಿವೆ. ಅವರ ಪ್ರಭಾವ ಅವರಿಗೆ ಅತ್ಯಂತ ವಿರೋಧಿಗಳಾಗಿದ್ದ ಬ್ರಿಟನ್ನಿನಲ್ಲೂ ಉನ್ನತ ಸ್ಥಾನವನ್ನು ತಂದಿದೆ. ಹಿಂದೆ ಅವರ ಸಿದ್ಧಾಂತಗಳಿಗೆ ಯಾವ ಸ್ಥಾನವಿತ್ತೋ, ಅದು ಈಗ ಅದಕ್ಕಿಂತ ಅಗಣಿತ. ವ್ಯಾಪ್ತಿಯ ಅವಶ್ಯಕತೆ. ಗಾಂಧೀಜಿ ಹತ್ಯೆಯಾದ ದಿನ ಪಾಕಿಸ್ತಾನದ ಮುಸ್ಲಿಂ ಮಹಿಳೆಯರು ತಮ್ಮ ಆಭರಣಗಳನ್ನು ಕಳಚಿಟ್ಟು ಶೋಕಗ್ರಸ್ತರಾಗಿ ಇಡೀ ಇರುಳು ನಿದ್ರೆಯಿಲ್ಲದೆ ಕಣ್ಣೀರಿಟ್ಟರು ಎಂಬುದಾಗಿ ಪಾಕಿಸ್ತಾನದ ಬರಹಗಾರರೇ ಬರೆದಿದ್ದಾರೆ.

ಈಗ ನಾವು ಮಾಡಬಹುದಾದ ಕೆಲಸವೆಂದರೆ ಕಲಬುರ್ಗಿಯವರು ಒಬ್ಬರೇ ಹೇಳುತ್ತಿದ್ದ ಮಾತನ್ನು ನೂರು ಜನ ಹೇಳಬೇಕಾಗುತ್ತದೆ. ಅದು ಅವರ ತತ್ತ್ವಾದರ್ಶಗಳನ್ನು ಒಪ್ಪುವ ಚಿಂತಕರ ಕೆಲಸ. ಹತ್ಯೆಯಾದ ಒಬ್ಬ ಕಲಬುರ್ಗಿಯವರ ಸ್ಥಾನದಲ್ಲಿ ನೂರು ಜನ ಕಲಬುರ್ಗಿಗಳು ಹುಟ್ಟಿಬರಬೇಕು. ಅವರ ಅಭಿಮಾನಿಗಳ ಬಳಗ ಈ ಕರ್ತವ್ಯದಲ್ಲಿ ನಿರತರಾಗ ಬೇಕು. ಇದೇ ನಾವು ಅವರಿಗೆ ನೀಡಬಹುದಾದ ಗೌರವ.

**ಕೋ. ಚೆನ್ನಬಸಪ್ಪ**
ನಂ. ೧೨೭, ವೆಸ್ಟ್ ಆಫ್ ಕಾರ್ಡ್ ರೋಡ್
ರಾಜಾಜಿನಗರ, ಬೆಂಗಳೂರು – ೫೬೦ ೦೮೬

# ಮಾಧ್ಯಮದ ಪಲ್ಲಟನ ಮತ್ತು ಪ್ರಜಾತಾಂತ್ರಿಕ ರಾಜಕಾರಣ

**ಜಾಗತೀಕರಣದ ಲಾಭಕೋರತನದಿಂದಾಗಿ ಬಂಡವಾಳಶಾಹಿಯು ಪ್ರಜಾಪ್ರಭುತ್ವ, ಆಳುವ ವರ್ಗ, ರಾಜಕಾರಣಿಗಳು, ರಾಜಕೀಯ ಪಕ್ಷಗಳು, ಸಂಘ-ಸಂಸ್ಥೆಗಳು, ದುಡಿಯುವ ಮತ್ತು ಕಾರ್ಮಿಕ ವರ್ಗಗಳನ್ನು ಮಾತ್ರ ಖರೀದಿಸುತ್ತಿಲ್ಲ, ಅದು ಸಂವಿಧಾನದ ನಾಲ್ಕನೆಯ ಅಂಗವಾದ ಪತ್ರಿಕೋದ್ಯಮವನ್ನೇ ತನ್ನ ಬಲೆಗೆ ಕೆಡವಿಕೊಳ್ಳುತ್ತಿದೆ.**

**ಮಲ್ಲಿಕಾರ್ಜುನ ಗುಮ್ಮಗೋಳ**

ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನ ಕ್ಷೇತ್ರಗಳಲ್ಲಿ ಉಂಟಾದ ಅಭೂತಪೂರ್ವ ಕ್ರಾಂತಿಯಿಂದಾಗಿ ಪ್ರಜಾಪ್ರಭುತ್ವ ಮತ್ತು ಜನಾಭಿಪ್ರಾಯ ನಿರೂಪಣೆಯ ಪರಮೋಚ್ಚ ಸಾಧನವಾದ ಮಾಧ್ಯಮಗಳೂ ಸಹ ಜಾಗತೀಕರಣದ ಪ್ರಕ್ರಿಯೆಗೆ ಒಳಪಟ್ಟಿವೆ. ಆರ್ಥಿಕ, ಸಾಮಾಜಿಕ, ರಾಜಕೀಯ ಕ್ಷೇತ್ರದಲ್ಲಿ ಜಾಗತೀಕರಣ ಮಾಡಿದ ಪ್ರಭಾವ ಮಾಧ್ಯಮ ತಂತ್ರಜ್ಞಾನದ ಮೇಲೂ ಮಾಡಿದೆ. ಹೇಗೆ ಜಾಗತೀಕರಣದ ಈ ಸನ್ನಿವೇಶದಲ್ಲಿ ರಾಜಕೀಯ ಸಿದ್ಧಾಂತವು ಕಾಲಘಟ್ಟಗಳಲ್ಲಿ ಹಲವಾರು ಪ್ರಭಾವಗಳಿಗೆ ಒಳಗಾಗುತ್ತ ನಡೆದಿದೆ. ಅದರಲ್ಲೂ ಸಂಸದೀಯ ಪ್ರಜಾಪ್ರಭುತ್ವವು ದೇಶ, ಕಾಲ ಮತ್ತು ಸನ್ನಿವೇಶಗಳಿಗೆ ಅನುಗುಣವಾಗಿ ರೂಪಾಂತರ ಹೊಂದುತ್ತ ಬಂದಿದೆಯೋ, ಹಾಗೆಯೇ ಇಂಥ ರೂಪಾಂತರ ಮತ್ತು ಸ್ಥಿತ್ಯಂತರಗಳು ಪ್ರತಿಫಲಿಸುವ ವೇದಿಕೆಯಾಗಿ ಮಾಧ್ಯಮ ಜನಸಾಮಾನ್ಯರಿಗೆ ಮಾಹಿತಿ ಒದಗಿಸುವದರೊಂದಿಗೆ ಪ್ರಜಾಪ್ರಭುತ್ವದ ಸಂರಚನೆಗಳ ಸಂವರ್ಧನೆಗೂ ಕೊಡುಗೆ ನೀಡುತ್ತಿದೆ. ಮಾಧ್ಯಮ ತನ್ನ ರಚನಾತ್ಮಕ ಬದಲಾವಣೆಯೊಂದಿಗೆ ಕ್ರಿಯಾತ್ಮಕ ಬದಲಾವಣೆಗೂ ಒಳಪಡುತ್ತಿದೆ. ಆದರೆ ಈ ಜಾಗತೀಕರಣದ ದುಷ್ಪರಿಣಾಮದ ಛಾಯೆ ಅದರ ಮೇಲೂ ಆಗಿದೆ. ಪಶ್ಚಿಮ ಮಾದರಿಯ ಸೈದ್ಧಾಂತಿಕ ಪೊರೆಯನ್ನು ಹೊತ್ತುಕೊಂಡು ಅದು ನಲುಗುತ್ತಿದೆ. ಬಹು ಸಂಸ್ಕೃತಿಯ ಈ ದೇಶದ ನೆಲಮೂಲ ಸಿದ್ಧಾಂತಗಳನ್ನು ಮಾಧ್ಯಮ ಸೃಷ್ಟಿಸಿಕೊಳ್ಳಬೇಕಾಗಿದೆ.

ಪ್ರಜಾಪ್ರಭುತ್ವದ ಮೂಲತತ್ವಗಳಾದ ಸ್ವಾತಂತ್ರ್ಯ, ಸಮಾನತೆ ಮತ್ತು ನ್ಯಾಯ ಇವುಗಳನ್ನು ಎತ್ತಿಹಿಡಿಯುವಲ್ಲಿ ಮತ್ತು ಅವುಗಳ ಉಲ್ಲಂಘನೆಯಾದ ಸಂದರ್ಭದಲ್ಲಿ ಮಾಧ್ಯಮದ ಪ್ರತಿಕ್ರಿಯೆ ಅತ್ಯಂತ ಗಮನಾರ್ಹವಾದುದು. 'ಪತ್ರಿಕಾ ಸ್ವಾತಂತ್ರ್ಯವು ಜನರ ಹಕ್ಕುಗಳನ್ನು ರಕ್ಷಿಸುವ, ರೂಪಿಸುವ ಹಾಗೂ ದಿಗ್ದರ್ಶಿಸುವ ಪ್ರಮುಖ ಅಂಶ' ಎಂದು ಡಾ॥ ಬಿ. ಕೆ. ರವಿ ಅವರು ಹೇಳಿದ ಮಾತು ಅದಕ್ಕೆ ಪೂರಕವಾಗಿದೆ. ಆದರೆ ಸದ್ಯದ ಮಾಧ್ಯಮದ ಹಾದಿ ಮತ್ತು ಗುರಿಯನ್ನು ಅವಲೋಕಿಸಿದರೆ ಅದು ಪ್ರಜಾಸತ್ತಾತ್ಮಕ ಹೋರಾಟಕ್ಕಿಂತ ಹೆಚ್ಚಾಗಿ ಲಾಭದಾಯಕ ಉದ್ಯಮ ಸ್ಥಾಪನೆಯ ದಿಕ್ಕಿನೆಡೆಗೆ ಓಡುತ್ತಿದೆ.

ಪತ್ರಿಕೆಗಳು ಕೇವಲ ಸರಕಾರಿ ವಾರ್ತೆಗಳಾದ ಪಡಿತರ ವಿತರಣೆ, ಸಾರಿಗೆ-ಸಂಚಾರ ಮಾಹಿತಿ, ವಿದ್ಯುತ್, ನೀರು ಸರಬರಾಜು ಮಾಹಿತಿ, ಉದ್ಯೋಗ ವಾರ್ತೆ, ಅರ್ಜಿ ಆಹ್ವಾನ, ಪರೀಕ್ಷೆ ಫಲಿತಾಂಶ, ಪರೀಕ್ಷಾ ಮುಂದೂಡಿಕೆ, ನೇಮಕಾತಿ, ಸರಕಾರಿ ಕಾರ್ಯಕ್ರಮ ಮಾಹಿತಿ, ಮಂತ್ರಿಗಳ ಪ್ರವಾಸ, ಗಣ್ಯರ ಆಗಮನ-ನಿರ್ಗಮನ, ಅಧಿಕಾರಿಗಳ ವರ್ಗಾವಣೆ ಮುಂತಾದ ಸುದ್ದಿಗಳನ್ನು ಪ್ರಕಟಿಸುವ ಮೂಲಕ ನಾಗರಿಕರಿಗೆ ಮಾಹಿತಿ ರವಾನಿಸುವ ವೇದಿಕೆಗಳಾಗುತ್ತಿಲ್ಲ. ಪ್ರಜಾಪ್ರಭುತ್ವದಲ್ಲಿ ಪ್ರಜೆಗಳು ಮತ್ತು ಚುನಾಯಿತ ಪ್ರಭುಗಳ ನಡುವಿನ ಬಹುಮುಖಿ ಸಂಬಂಧಗಳನ್ನು ಸಂವರ್ಧಿಸುವಲ್ಲಿ ಪತ್ರಿಕೆಗಳಷ್ಟು ಪರಿಣಾಮಕಾರಿಯಾದ ಪಾತ್ರ ವಹಿಸುವ ಮತ್ತೊಂದು ಮಾಧ್ಯಮ ಇಲ್ಲವೆಂದೇ ಹೇಳಬಹುದು. ರಾಜಕೀಯ ಶಿಕ್ಷಣ ಹಾಗೂ ಸಂಪರ್ಕದ ನಿಯೋಗಿಯಾದ ಪತ್ರಿಕೆ ಮಹದೋದ್ದೇಶವನ್ನು ಹೊಂದಿದೆ. ಎಮ್. ವಿ. ಕಾಮತ್ ಅವರು ಹೇಳುವ ಹಾಗೆ, 'ಪತ್ರಿಕೆ ನಡೆಸುವ ಉದ್ದೇಶ ಆಳುವವರಿಗೆ ಆಳಲ್ಪಡುವವರ ಅಪೇಕ್ಷೆಗಳನ್ನು ಹಾಗೂ ಅವರ ನೋವುಗಳನ್ನು ಮನಗಾಣಿಸುವದು ಮತ್ತು ಜನರಲ್ಲಿ ಆಳುವವರ ಬಗ್ಗೆ ಇದ್ದ ಭಯವನ್ನು ಹೋಗಲಾಡಿಸುವದಾಗಿದೆ'. ಹಾಗೆಯೇ ಜನತೆಯಲ್ಲಿ ಪ್ರಜಾಪ್ರಭುತ್ವದ ಸಂರಚನೆಗಳಲ್ಲಿರುವ ದೋಷಗಳನ್ನು ನಿವಾರಿಸಿ ಅವುಗಳ ಮೂಲ ತತ್ವಗಳ ಬಗ್ಗೆ ನಂಬಿಕೆಯನ್ನುಂಟುಮಾಡಿ ರಾಜಕೀಯ ಸಮಾಜೀಕರಣ, ಸಂಸ್ಕೃತಿ, ಅಭಿವೃದ್ಧಿ ಮತ್ತು ಆಧುನೀಕರಣಗಳ ಪ್ರಕ್ರಿಯೆಗೆ ಒಳಪಡುವಂತೆ ಪ್ರೇರೇಪಿಸುವುದು ಪತ್ರಿಕೆಗಳ ಗುರುತರ ಜವಾಬ್ದಾರಿಯಾಗಿದೆ.

ಆದರೆ ಜಾಗತೀಕರಣದ ಲಾಭಕೋರತನದಿಂದಾಗಿ ಬಂಡವಾಳಶಾಹಿಯು ಪ್ರಜಾಪ್ರಭುತ್ವ, ಆಳುವ ವರ್ಗ, ರಾಜಕಾರಣಿಗಳು, ರಾಜಕೀಯ ಪಕ್ಷಗಳು, ಸಂಘ-ಸಂಸ್ಥೆಗಳು, ದುಡಿಯುವ ಮತ್ತು ಕಾರ್ಮಿಕ ವರ್ಗಗಳನ್ನು ಮಾತ್ರ ಖರೀದಿಸುತ್ತಿಲ್ಲ, ಅದು ಸಂವಿಧಾನದ ನಾಲ್ಕನೆಯ ಅಂಗವಾದ ಪತ್ರಿಕೋದ್ಯಮವನ್ನೇ ತನ್ನ ಬಲೆಗೆ ಕೆಡವಿಕೊಳ್ಳುತ್ತಿದೆ. ಉದ್ಯಮಪತಿಗಳು ಮಾಧ್ಯಮಪತಿಗಳಾಗುವ ಮೂಲಕ ಸಮಾಜಸೇವೆ ಎನ್ನಿಸಿಕೊಂಡಿದ್ದ ಮಾಧ್ಯಮ ಈಗ ಉದ್ಯಮವಾಗಿದೆ. ಈ ಪ್ರಕ್ರಿಯೆ ಸ್ವಾತಂತ್ರ್ಯಾನಂತರದಲ್ಲಿ ಬಹಳ ಪ್ರಖರವಾಗಿ ನಡೆಯಿತು. ಸ್ವಾತಂತ್ರ್ಯ ಪೂರ್ವದಲ್ಲಿ ಮಾಧ್ಯಮಗಳಿಗೆ ಭಾರತ ಸ್ವಾತಂತ್ರ್ಯ ಪಡೆಯಬೇಕು ಎಂಬ ಒಂದು ಅಂಶದ ಧ್ಯೇಯವಿತ್ತು. ಸ್ವಾತಂತ್ರ್ಯಾನಂತರದ ಅವಧಿಯಲ್ಲೂ ದೇಶದ ಅಭಿವೃದ್ಧಿ, ಸಾಮಾಜಿಕ ಸಮಾನತೆ, ಅನಿಷ್ಟ ಪದ್ಧತಿಗಳ ನಿರ್ಮೂಲನೆ, ರಾಜಕೀಯ ಶಿಕ್ಷಣದಂತಹ ಮಹತ್ತರ ಜವಾಬ್ದಾರಿಗಳಿದ್ದವು. ಅವುಗಳ ಪರವಾಗಿ ಮಾಧ್ಯಮಗಳು ಹೋರಾಟ ಮಾಡಿದ್ದು ಸಹ ನಿಜವೇ. ಆದರೆ ಯಾವಾಗ ಭಾರತದ ಮೊದಲ ಪ್ರಧಾನಮಂತ್ರಿ ಜವಾಹರಲಾಲ ನೆಹರು ಅವರು

ಕೈಗಾರೀಕರಣಕ್ಕೆ ಹೆಚ್ಚು ಒತ್ತು ನೀಡ ತೊಡಗಿದರೋ ಆಗ ಉದ್ಯಮಿಗಳು ಸರ್ಕಾರದ ಮೇಲೆ ಪ್ರಭಾವಬೀರಿ ತಾವು ಹೆಚ್ಚು ಬಂಡವಾಳ ಹೂಡುವ ಮತ್ತು ಲಾಭ ಪಡೆಯುವ ಯತ್ನವನ್ನು ಮಾಡತೊಡಗಿದರು. ಅಂದಿನ ಜನಪ್ರತಿನಿಧಿಗಳು ಹೆಚ್ಚು ಭ್ರಷ್ಟರಾಗಿರಲಿಲ್ಲ. ಹೀಗಾಗಿ ಉದ್ಯಮಿಗಳಿಗೆ ಅವರನ್ನು ಖರೀದಿಸಲು ಸಾಧ್ಯವಾಗಲಿಲ್ಲ. ಸರ್ಕಾರದ ನಾಲ್ಕನೆಯ ಅಂಗ ಎಂದು ಕರೆಯಲಾಗುವ ಮಾಧ್ಯಮವು ಸಹ ಸರ್ಕಾರದ ನೀತಿ ನಿರೂಪಣೆ ಮತ್ತು ಧ್ಯೇಯ ಧೋರಣೆಗಳ ಮೇಲೆ ಪ್ರಭಾವಬೀರುವ ಒಂದು ಪ್ರಬಲ ಅಂಗ. ಅದು ಒಂದು ರೀತಿ ತೆರೆದ ಬಾಗಿಲು ಇದ್ದಂತೆ. ಇಂತಹ ಮಾಧ್ಯಮಗಳ ಮೂಲಕ ಸರ್ಕಾರದ ಮೇಲೆ ಪ್ರಭಾವ ಬೀರುವ ದಾರಿಯನ್ನು ಬಂಡವಾಳ ಶಾಹಿಗಳು ಕಂಡುಕೊಂಡರು. ಕಲ್ಕತ್ತದಲ್ಲಿ ನ್ಯೂ ಸೆಂಟ್ರಲ್ ಜ್ಯೂಟ್ ಮಿಲ್ ನಡೆಸುತ್ತಿದ್ದ ಶಾಹು ಜೈನ್ ಕುಟುಂಬ 'ಟೈಮ್ಸ್ ಆಫ್ ಇಂಡಿಯಾ' ಪತ್ರಿಕೆಯನ್ನು ಆರಂಭಿಸಿತು. ಈ ಪತ್ರಿಕೆಯನ್ನು ನೆಹರೂ ಅವರು 'ಜ್ಯೂಟ್ ಪ್ರೆಸ್' ಎಂದು ವ್ಯಂಗ್ಯವಾಗಿ ಕರೆಯುತ್ತಿದ್ದರು. ಸ್ಟೀಲ್ ಉದ್ಯಮ ನಡೆಸುತ್ತಿದ್ದ ಟಾಟಾ ಕಂಪನಿಯು 'ಸ್ಟೇಟ್ಸ್‌ಮನ್' ಪತ್ರಿಕೆಯ ಮಾಲೀಕತ್ವವನ್ನು ಹೊಂದಿತ್ತು. ಈ ಪತ್ರಿಕೆಯನ್ನು ನೆಹರು 'ಸ್ಟೀಲ್ ಪ್ರೆಸ್' ಎಂದು ವ್ಯಂಗ್ಯವಾಗಿ ಕರೆಯುತ್ತಿದ್ದರು. ೧೯೨೪ರಲ್ಲಿ ಅಕಾಲಿಗಳು ಅಮೃತಸರದಲ್ಲಿ ಆರಂಭಿಸಿದ್ದ 'ಹಿಂದೂಸ್ಥಾನ್ ಟೈಮ್ಸ್' ಎಂಬ ಪತ್ರಿಕೆಯನ್ನು ಆರಂಭಿಸಿದ್ದರು. ಅಕಾಲಿಗಳ ಕನಸಿನ ಕೂಸಾಗಿದ್ದ ಈ ಪತ್ರಿಕೆಯನ್ನು ಸ್ವಾತಂತ್ರ್ಯ ಹೋರಾಟಗಾರ, ಮಾನವತಾವಾದಿ ಎಂದೇ ಹೆಸರಾಗಿದ್ದ ಜಿ. ಡಿ. ಬಿರ್ಲಾ ಎಂಬ ಒಬ್ಬ ಯಶಸ್ವಿ ಉದ್ಯಮಿ ಖರೀದಿಸಿದರು. ಹಾಗೆಯೇ ದಕ್ಷಿಣದಲ್ಲಿ ೧೮೭೮ರಲ್ಲಿ ಆರಂಭವಾಗಿದ್ದ 'ದಿ ಹಿಂದು' ಪತ್ರಿಕೆಯನ್ನು ಒಬ್ಬ ರಾಜಕೀಯ ಮಹತ್ವಾಕಾಂಕ್ಷೆಯನ್ನು ಹೊಂದಿದ್ದ ಎಸ್. ಕಸ್ತೂರಿರಂಗ ಅಯ್ಯಂಗಾರು ಎಂಬ ವಕೀಲರು ಖರೀದಿಸಿದರು. ಪಶ್ಚಿಮ ಭಾರತದಲ್ಲಿ ಪ್ರಬಲವಾಗಿದ್ದ 'ಟೈಮ್ಸ್ ಆಫ್ ಇಂಡಿಯಾ', ಉತ್ತರ ಭಾರತದಲ್ಲಿ ಪ್ರಬಲವಾಗಿದ್ದ 'ಹಿಂದೂಸ್ಥಾನ್ ಟೈಮ್ಸ್', ಪೂರ್ವ ಭಾರತದಲ್ಲಿ ಪ್ರಬಲವಾಗಿದ್ದ 'ಸ್ಟೇಟ್ಸ್‌ಮನ್' ಹಾಗೂ ದಕ್ಷಿಣ ಭಾರತದಲ್ಲಿ ಪ್ರಬಲವಾಗಿದ್ದ 'ದಿ ಹಿಂದು' ಹೀಗೆ ಈ ನಾಲ್ಕೂ ಪತ್ರಿಕೆಗಳನ್ನು ಬೃಹತ್ ಉದ್ಯಮಿಗಳು ತಮ್ಮ ತೆಕ್ಕೆಗೆ ತೆಗೆದುಕೊಂಡರು. ಇಲ್ಲಿ ಬಹುಮುಖ್ಯವಾದ ಪ್ರಶ್ನೆ ಎಂದರೆ, ಕೈಗಾರಿಕೆಗಳು ನಡೆಸುವ ವ್ಯವಹಾರ, ಲಾಭಕೋರತನ, ಖನಿಜ ಸಂಪತ್ತಿನ ಲೂಟಿ, ಕಾರ್ಮಿಕರ ಶೋಷಣೆ, ಪರಿಸರ ನಾಶ ಹೀಗೆ ಮುಂತಾದ ಜನ ವಿರೋಧಿ ಚಟುವಟಿಕೆಗಳನ್ನು ಉದ್ಯಮಿಗಳ ಹಿಡಿತದಲ್ಲಿರುವ ಈ ಮಾಧ್ಯಮಗಳು ವಿರೋಧಿಸಲು, ಖಂಡಿಸಲು, ಜನಜಾಗೃತಿ ಮೂಡಿಸಲು ಅಥವಾ ಕನಿಷ್ಠ ಪಕ್ಷ ಅವುಗಳ ವಿರುದ್ಧ ವರದಿಯಾದರೂ ಮಾಡಲು ಸಾಧ್ಯವೆ ? ಈ ರೀತಿ ಮಾಧ್ಯಮಗಳು ಉದ್ಯಮಿಗಳ ಕೈಗೆ ಸಿಗುವುದರಿಂದ ಪ್ರಜಾಪ್ರಭುತ್ವದ ಸಂರಚನೆಗಳ ಹಾಗೂ ಜನಸಾಮಾನ್ಯರ ಮೇಲೂ ಕೆಟ್ಟ ಪರಿಣಾಮ ಉಂಟಾಗುತ್ತಿದೆ.

'ಸಾರ್ವಜನಿಕ ಹಿತಕ್ಕಾಗಿ ಮಾಧ್ಯಮವನ್ನು ಖಾಸಗಿ ಹಿತಕ್ಕಾಗಿ ಸಿಮೆಂಟ್, ಸ್ಟೀಲ್, ಜ್ಯೂಟ್, ಶುಗರ್ ಇಂತಹ ಮಹತ್ವದ ಉದ್ಯಮಗಳನ್ನು ನಡೆಸುವವರಲ್ಲಿ ಈ ಸಾರ್ವಜನಿಕ ಮತ್ತು ಖಾಸಗಿ ಎಂಬ ಎರಡು ವಿರುದ್ಧ ಹಿತಾಸಕ್ತಿಗಳ ಸಂಘರ್ಷ ಏರ್ಪಡುತ್ತದೆ. ಬಿರ್ಲಾ, ಜೈನ್ಸ್, ಟಾಟಾ, ಅಂಬಾನಿ ಇಂತಹ ಅನೇಕರು ಮಾಧ್ಯಮವನ್ನು ತಮ್ಮ ವ್ಯವಹಾರ ಉತ್ತೇಜನಕ್ಕಾಗಿ, ತಮ್ಮ ಬಂಡವಾಳ ಶಾಹಿ ಸಿದ್ಧಾಂತವನ್ನು ಪ್ರಚೋದಿಸುವದಕ್ಕಾಗಿ ಬಳಸುತ್ತಾರೆ. ಎಂದು ಖ್ಯಾತ ಪತ್ರಕರ್ತ ದಿವಂಗತ ವಿನೋದ ಮೆಹತಾ ತಮ್ಮ 'ಎಡಿಟರ್ ಅನ್‌ಪ್ಲಗ್ಡ್ – ಮಿಡಿಯಾ, ಮ್ಯಾಗ್‌ನೇಟ್ಸ್, ನೇತಾಸ್ ಆಂಡ್ ಮಿ' ಎಂಬ ಕೃತಿಯಲ್ಲಿ ಮಾಧ್ಯಮ ಲೋಕದ ಕಟುಸತ್ಯವನ್ನು ತೆರೆದಿಡುತ್ತಾರೆ. ಉದ್ಯಮಿಗಳು ಪತ್ರಿಕೆ ಓದುಗರನ್ನು ತಮ್ಮ ಉತ್ಪನ್ನಗಳನ್ನು ಖರೀದಿಸುವ ಗ್ರಾಹಕರನ್ನಾಗಿ ಮಾಡುವ ಎಲ್ಲ ಯತ್ನವನ್ನೂ ಮಾಡುತ್ತಾರೆ. ತಮ್ಮ ಉತ್ಪನ್ನಗಳ ಮಾರಾಟಕ್ಕೆ ಅನುಕೂಲವಾಗಲೆಂದೇ ಹಲವಾರು ಉದ್ಯಮಿಗಳು ಮಾಧ್ಯಮ ಸಂಸ್ಥೆಗಳನ್ನು ಸ್ಥಾಪಿಸುವ ಹಾಗೂ ಖರೀದಿಸುವ ಕೆಲಸವನ್ನು ಮಾಡುತ್ತಿದ್ದಾರೆ. ಆನಂದ ಬಜಾರ್‌ಗ್ರೂಪ್ 'ಟೆಲಿಗ್ರಾಫ್' ಪತ್ರಿಕೆಯನ್ನು ವಶಕ್ಕೆ ಪಡೆದ ಜೆ.ಕೆ. ಗ್ರೂಪ್‌ನ ವಿಜಯಪಥ್ ಸಿಂಘಾನಿಯ 'ಇಂಡಿಯನ್ ಪೋಸ್ಟ್' ಎಂಬ ಮತ್ತೊಂದು ಪತ್ರಿಕೆ ಸ್ಥಾಪಿಸಿದರು. ಧೀರೂಭಾಯ್ ಅಂಬಾನಿ 'ಸಂಡೆ ಅಬ್ಸರ್ವರ್' ಎಂಬ ಪತ್ರಿಕೆ ಆರಂಭಿಸಿದರು. ಅಂಬಾನಿ ಅವರು 'ಮಾಹಿತಿ ಎಂಬುದು ಶಕ್ತಿ. ಆ ಶಕ್ತಿಯನ್ನು ಪಡೆಯುವದಕ್ಕಾಗಿ ನಾನು ವಿಶಾಲವಾದ ಮಾಧ್ಯಮ ಸಾಮ್ರಾಜ್ಯವನ್ನು ಸ್ಥಾಪಿಸುತ್ತಿದ್ದೇನೆ' ಎಂದು ಹೇಳಿದ ಮಾತು ಮಾಧ್ಯಮದ ದಿಕ್ಕುದೆಸೆ ಬದಲಾಗುತ್ತಿರುವದನ್ನು ತೋರಿಸುತ್ತದೆ.

ಇತ್ತೀಚೆಗಂತೂ ಉದ್ಯಮಿಗಳು ಮಾಧ್ಯಮ ಸಂಸ್ಥೆಗಳಲ್ಲಿ ಪಾಲುದಾರಿಕೆ ಹೊಂದುವದು ಅಥವಾ ಅವುಗಳ ಒಡೆತನವನ್ನು ಹೊಂದುವದು ಹೆಚ್ಚಾಗುತ್ತಿದೆ. 'ಉದ್ಯಮಿ ಕಾಂಗ್ರೆಸ್ ಎಂ.ಪಿ ನವೀನ ಜಿಂದಾಲ್ ತನ್ನ ಓಸ್ವಾಲ್ ಗ್ರೀನ್ ಟೆಕ್






# ಒಂದು ಕನಸು

ನುಗ್ಗಿಬರುತಿವೆ ಆನೆ ಕಬ್ಬು ಗದ್ದೆಗೆ ಎನುವ
ಸುದ್ದಿ ಪತ್ರಿಕೆ ಓದಿ – ಮಲಗಿದ್ದೆ.

* * *

ಧುತ್ತೆಂದು ಎದುರಾಯ್ತು ವ್ಯಾಘ್ರ.
ನಡುಗತೊಡಗಿದೆ
ಕೈಕಾಲುಗಳು ಆಡದೆ
ನಾಲಗೆ ಕೂಡ ಸ್ತಬ್ಧವಾಗಿ
ಸಂತೈಸತೊಡಗಿತು ವ್ಯಾಘ್ರ –
ದಿಗಿಲುಪಡಬೇಡಣ್ಣ
ನೋಡು, ಕಣ್ತೆರೆದು ಚೆನ್ನಾಗಿ ನನ್ನನ್ನು
ದವಡೆ ಹಲ್ಲುಗುರ್‌ಗಳಿಗೆ
ಬೆದರಬೇಕಾಗಿಲ್ಲ,
ಬಣ್ಣಬಣ್ಣದ ಪಟ್ಟೆಗಳಿಗು.
ಅರ್ಥವಾಗದೆ ಮುಖವನ್ನೆ
ಮೇಲು ಕೆಳಗೆ ಮಾಡುತ್ತಿದ್ದಾಗ
ಹುಲಿಯೆ ಹೇಳಿತು :
ಕಡವೆ ಜಿಂಕೆಗಳಿರುವ
ಕಾಡುಗಳೆ ಈಗಿಲ್ಲ
ವೆನ್ನುವುದು ಏನನ್ನು ?
ನಾಲ್ಕು ದಿನದಿಂದಲೂ ಹಸಿದು ಕಂಗಾಲಾಗಿ
ದಣಿದು ಹೊಕ್ಕಿದ್ದೇನೆ ನಿನ್ನ ತೋಟದ ಮನೆಯನ್ನು
ತೋಳ ನರಿ ಕಾಡೆಮ್ಮೆಗಳನೆಲ್ಲ
ಹಿಡಿದು ಪಳಗಿಸಿಕೊಂಡೆ
ಮಾಡಿಕೊ ನಿನ್ನಾಳಾಗಿ ಎನ್ನನ್ನು,
ಕಾವಲಾಗಿರುವೆ ನಿನಗೆ
ದಿನದಿನಕ್ಕಿಷ್ಟಿಷ್ಟು
ಕೂಳ ನೀಡು ಸಾಕು –
ಆಶ್ಚರ್ಯ ಗಾಬರಿಗಳಾಗಿ
ಎಚ್ಚರಾಯಿತು ನನಗೆ.

**ಪಿ. ಎಸ್. ಸಿದ್ದಲಿಂಗಯ್ಯ**
ನಂ. ೨೦೩, 'ಲಲಿತ ಕೃಪ', ೭ನೇ 'ಎ' ಮುಖ್ಯರಸ್ತೆ,
ಆರ್.ಪಿ.ಸಿ. ಬಡಾವಣೆ, ವಿಜಯನಗರ
ಬೆಂಗಳೂರು – ೫೬೦ ೦೪೦

ಕಂಪನಿಯ ಮೂಲಕ ಎನ್‌ಡಿಟಿವಿಯಲ್ಲಿ ಪಾಲುದಾರಿಕೆಯನ್ನು ಹೊಂದಿದ್ದಾರೆ. ಈಗ ಗೌತಮ ಅದಾನಿ ಎಂಬ ಮತ್ತೊಬ್ಬ ಉದ್ಯಮಿ ಅದನ್ನು ಖರೀದಿಸುತ್ತಿದ್ದಾರೆ ಎಂದು ಹೇಳಲಾಗಿದೆ. ರಿಲಯನ್ಸ್ ಇಂಡಸ್ಟ್ರೀಸ್ ಲಿ. ಮಾಲಿಕ ಮುಖೇಶ್ ಅಂಬಾನಿ ಅವರು ಟಿವಿ ೧೮, ಸಿಎನ್‌ಎನ್, ಐಬಿಎನ್, ಈನಾಡು ಇವುಗಳ ಒಡೆತನವನ್ನು ಹೊಂದಿದ್ದಾರೆ. ಸನ್ ಟಿವಿ ಕಲಾನಿಧಿ ಮಾರನ್ ಅವರ ಒಡೆತನದಲ್ಲಿದೆ. ಸುಭಾಶ್ ಚಂದ್ರ ಅವರ ಒಡೆತನದಲ್ಲಿ ಝೀ ಟಿವಿ ಇದೆ. ಹೀಗೆ ಹೇಳುತ್ತ ಹೋದರೆ ಪಟ್ಟಿ ಬೆಳೆಯುತ್ತ ಹೋಗುತ್ತದೆ. ಬಹುಪಾಲು ಮಾಧ್ಯಮಗಳು ಉದ್ಯಮಿಗಳ ಅಥವಾ ರಾಜಕಾರಣಿಗಳ ಹಿಡಿತದಲ್ಲಿವೆ' ಕನ್ನಡದ ಪ್ರಜಾವಾಣಿ ಸಂಸ್ಥಾಪಕರು ಸಹ ಬಳ್ಳಾರಿ ಮೂಲದ ತೆಲುಗು ಭಾಷಿಕರಾದ ಮದ್ಯದ ದೊರೆಗಳು. ಹಾಗೆಯೇ ವಿಜಯಕರ್ನಾಟಕ ಪತ್ರಿಕೆಯು ಬೆನೆತ್ ಆಂಡ್ ಕೋಲ್ಮನ್ ಕಂಪನಿಯ ಸಾಹು ಜೈನ್ ಒಡೆತನದಲ್ಲಿದೆ. ವಿಜಯವಾಣಿ ಪತ್ರಿಕೆಯ ಒಡೆಯ ಸಾರಿಗೆ ಉದ್ಯಮಿ ವಿಜಯ ಸಂಕೇಶ್ವರ. ಕನ್ನಡಪ್ರಭ ರಾಜೀವ ಚಂದ್ರಶೇಖರ್ ಇವರ ಒಡೆತನದಲ್ಲಿವೆ.

ಈ ರೀತಿಯ ಬಂಡವಾಳಶಾಹಿಗಳ ಹಿಡಿತ ಮಾಧ್ಯಮದ ದಿಕ್ಕುದೆಸೆಯನ್ನು ಬದಲಾಯಿಸಿದೆ. ವಾಣಿಜ್ಯ ಸಂಸ್ಥೆಗಳಾಗಿ ಬೆಳೆಯುತ್ತಿರುವ ಮಾಧ್ಯಮಗಳು 'ದೇಶದ ಆರ್ಥಿಕ ಸುಧಾರಣೆಯ ಕುರಿತು ಹೆಚ್ಚು ಯೋಚಿಸುತ್ತಿವೆ. ಆರ್ಥಿಕ ಸುಧಾರಣೆಯಿಂದ ಮಾಧ್ಯಮ ಸಂಸ್ಥೆಗಳಿಗೆ ವ್ಯಾವಹಾರಿಕ ಲಾಭವಾಗುತ್ತದೆ. ಆದರೆ ಈ ರೀತಿಯ ಉದ್ದೇಶದಿಂದ ಗ್ರಾಮೀಣ ಭಾರತದ ಮೂಲಭೂತ ಸಮಸ್ಯೆಗಳಿಗೆ ಯಾವ ಅನುಕೂಲವೂ ಆಗುತ್ತಿಲ್ಲ. ಶಹರ ವಾಸಿಗಳಾದ ಉಪಭೋಗ ವರ್ಗವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಮಾಧ್ಯಮಗಳು ಕೆಲಸ ಮಾಡುತ್ತಿವೆ. ಬಹು ಸಂಖ್ಯಾತರಾದ ಗ್ರಾಮೀಣ ಜನರ ಧ್ವನಿಗೆ ಹೆಚ್ಚು ವೇದಿಕೆಯಾಗಬೇಕಾದ ಮಾಧ್ಯಮ ಅವರನ್ನು ಕಡೆಗಣಿಸಿದೆ' ಎಂದು ಮಾಧ್ಯಮ ವಿಶ್ಲೇಷಕ ಪ್ರಂಜೋಯ್ ಗುಹಾ ಥಾಕುರ್ತಾ 'ಕರ್ಬಿಂಗ್ ಮೀಡಿಯಾ ಮೊನೊಪಲೀಸ್' (ಎಕನಾಮಿಕ್ ಆಂಡ್ ಪೊಲಿಟಿಕಲ್ ವೀಕ್ಲಿ, ಏಪ್ರಿಲ್ ೨೦, ೨೦೧೩. ಪುಟ-೧೨) ಎಂಬ ತಮ್ಮ ಲೇಖನದಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯ ಸಾರ್ವತ್ರಿಕ ಸತ್ಯವಾಗಿದೆ.

ಉದ್ಯಮದ ಏಕಸ್ವಾಮಿತ್ವದಿಂದಾಗಿ ಜಾಹಿರಾತುಗಳು ಸಹ ಸುದ್ದಿಯಂತೆ ಪ್ರಕಟವಾಗುತ್ತಿವೆ. ಯಾವುದು ಸುದ್ದಿ ಯಾವುದು ಜಾಹಿರಾತು ಎಂದು ತಿಳಿಯದಂತಹ ವಾತಾವರಣ ನಿರ್ಮಾಣ ಆಗುತ್ತಿದೆ. ಇದು ಓದುಗರನ್ನು ವಂಚಿಸಿ ಲಾಭಮಾಡಿಕೊಳ್ಳುವ ತಂತ್ರ ಅಷ್ಟೆ. ಆದರೆ 'ಸಮಾಜದ ಬೆಳವಣಿಗೆಯಲ್ಲಿ ನಾಗರಿಕರು ಹೇಗೆ ತೊಡಗಿಸಿಕೊಳ್ಳುತ್ತಾರೆ ಹಾಗೂ ಭಾಗಿಗಳಾಗುತ್ತಾರೆ ಎಂಬುದು ಸುದ್ದಿ ಉದ್ಯಮದ ಭವಿಷ್ಯವನ್ನು




**ನಾನು ಓಟು ಕೇಳಲು ಬಂದಾಗಲೆಲ್ಲಾ ಇಲ್ಲೇ ಆರಾಮಾಗಿ ಸಂಸಾರ ಮಾಡ್ತಾ ಇದ್ದೀಯ ಕಣಯ್ಯ...!**

ನಿರ್ಧರಿಸಲಿದೆ. ಮಾರುಕಟ್ಟೆ ಛಿದ್ರೀಕರಣವು ಸದ್ಯದ ಪಾರಂಪರಿಕ ವೃತ್ತಪತ್ರಿಕೆ ಉದ್ಯಮ ಮಾದರಿಗೆ ಸವಾಲಾಗಿದೆ. ಆದರೆ ಇದು, ಅಗತ್ಯ ಸುದ್ದಿ ಹಾಗೂ ಮಾಹಿತಿ ಒದಗಿಸಿ ನಾಗರಿಕರನ್ನು ಸಶಕ್ತಗೊಳಿಸುವ ಮೂಲ ಗುರಿ ಹಾಗೂ ಮೌಲ್ಯಗಳಿಗೆ ಹಿಂದಿರುಗಲು ಸೃಷ್ಟಿಯಾದ ಅವಕಾಶವೂ ಆಗಿದೆ' ಎಂದು ಹಿರಿಯ ಪತ್ರಕರ್ತ ಪದ್ಮರಾಜ ದಂಡಾವತಿ ಅವರು ಹೇಳಿದ ಮಾತು ಮಾಧ್ಯಮದ ಮುಂದೆ ಎಂತಹ ಸವಾಲಿದೆ ಎಂಬುದನ್ನು ಸೂಚ್ಯವಾಗಿ ಹೇಳುತ್ತದೆ.

ಬಂಡವಾಳಶಾಹಿಗಳು, ರಾಜಕಾರಣಿಗಳು ಮಾಧ್ಯಮ ಸಂಸ್ಥೆಗಳ ಒಡೆಯರಾಗುತ್ತಿರುವದರಿಂದ ಅದು ಸಾಮಾಜಿಕ ಸೇವೆಯಾಗದೆ ಲಾಭ ತರುವ ಉದ್ಯಮವಾಗುತ್ತಿದೆ ಎಂಬ ಅಭಿಪ್ರಾಯ ಎಲ್ಲೆಡೆ ಕೇಳಿಬರುತ್ತಿದೆ. ಜಾಹಿರಾತು ಉದ್ಯಮಕ್ಕೆ ಮಾಧ್ಯಮವು ಅಸ್ತಿಭಾರವಾಗಿದೆ. ಹಾಗೆಯೇ ಮಾಧ್ಯಮದ ಜೀವಂತಿಕೆಗೆ ಜಾಹಿರಾತು ಅನಿವಾರ್ಯವಾಗಿದೆ. ಜಾಹಿರಾತುಗಳಿಲ್ಲದ ಒಂದು ದಿನಪತ್ರಿಕೆಯ ಬೆಲೆ ೨೦ರಿಂದ ೩೦ ರೂಪಾಯಿ ಆಗುತ್ತದೆ. ಅಷ್ಟು ಹಣ ಕೊಟ್ಟು ಜನಸಾಮಾನ್ಯರು ಪತ್ರಿಕೆ ಕೊಂಡು ಓದಲು ಸಾಧ್ಯವೆ ? ಇಂತಹ ಸನ್ನಿವೇಶದಲ್ಲಿ ಸತ್ಯ, ಸಾಮಾಜಿಕ ಕಳಕಳಿ ಮತ್ತು ವೃತ್ತಿ ಬದ್ಧತೆಗಳು ಕೇವಲ ಬಾಯಿ ಮಾತಿನ ಉಪಚಾರಗಳಾಗುತ್ತವೆ. ಈ ಹಿನ್ನೆಲೆಯಲ್ಲಿ 'ಪ್ರಜಾಪ್ರಭುತ್ವದ ಸಂರಚನೆಗಳ ಸಂವರ್ಧನೆಗೆ ಪತ್ರಿಕೆಗಳು ನೀಡಬಹುದಾದ ಕೊಡುಗೆಯು ಎಷ್ಟರಮಟ್ಟಿಗೆ ಮೌಲ್ಯಯುತ ವಾಗಿರುತ್ತದೆ ಎಂಬುದು ಸಂದೇಹಾಸ್ಪದ ಜಿಜ್ಞಾಸೆಯಾಗಿದೆ.

ಇಂತಹ ಸಂದಿಗ್ಧ ಸನ್ನಿವೇಶದಲ್ಲೂ ಪ್ರಜಾಪ್ರಭುತ್ವದಲ್ಲಿ ಪ್ರಜೆಗಳು ಮತ್ತು ಚುನಾಯಿತ ಪ್ರಭುಗಳ ನಡುವಿನ ಬಹುಮುಖಿ ಸಂಬಂಧಗಳನ್ನು ಸಂವರ್ಧಿಸುವಲ್ಲಿ ಪತ್ರಿಕೆಗಳಷ್ಟು ಪರಿಣಾಮಕಾರಿಯಾದ ಪಾತ್ರವನ್ನು ವಹಿಸುವ ಮತ್ತೊಂದು ಮಾಧ್ಯಮ ಇಲ್ಲವೆಂದೇ ಹೇಳಬಹುದು. ರಾಜಕೀಯ ಶಿಕ್ಷಣ ಹಾಗೂ ಸಂಪರ್ಕದ ನಿಯೋಗಿಯಾದ ಪತ್ರಿಕೆಗಳು ಮಹದೋದ್ದೇಶವನ್ನು ಹೊಂದಿರಬೇಕು. ಪತ್ರಿಕೆ ನಡೆಸುವ ಉದ್ದೇಶ ಆಳುವವರಿಗೆ, ಆಳಲ್ಪಡುವವರ ಅಪೇಕ್ಷೆಗಳನ್ನು ಹಾಗೂ ಅವರ ನೋವುಗಳನ್ನು ಮನಗಾಣಿಸುವದು ಮತ್ತು ಜನರಲ್ಲಿ ಆಳುವವರ ಬಗ್ಗೆ ಇದ್ದ ಭಯವನ್ನು ಹೋಗಲಾಡಿಸುವುದೇ ಆಗಿದೆ. ಹಾಗೆಯೇ ಜನತೆಯಲ್ಲಿ ಪ್ರಜಾಪ್ರಭುತ್ವದ ಸಂರಚನೆಗಳಲ್ಲಿರುವ ದೋಷಗಳನ್ನು ನಿವಾರಿಸಿ ಅವುಗಳ ಮೂಲತತ್ವಗಳ ಬಗ್ಗೆ ನಂಬಿಕೆ ಉಂಟುಮಾಡಿ ರಾಜಕೀಯ ಸಮಾಜೀಕರಣ, ಸಂಸ್ಕೃತಿ, ಅಭಿವೃದ್ಧಿ ಮತ್ತು ಆಧುನೀಕರಣದ ಪ್ರಕ್ರಿಯೆಗೆ ಒಳಪಡುವಂತೆ ಪ್ರೇರೇಪಿಸುವುದು ಪತ್ರಿಕೆಗಳ ಗುರುತರ ಜವಾಬ್ದಾರಿಯಾಗಿದೆ.

ಭಾರತದಲ್ಲಿ ಸುಮಾರು ೧,೦೦೦ ರಾಷ್ಟ್ರೀಯ ಹಾಗೂ ಪ್ರಾದೇಶಿಕ ದಿನಪತ್ರಿಕೆಗಳಿವೆ. ಸುಮಾರು ೧೫೦ ಸುದ್ದಿ ವಾಹಿನಿಗಳಿವೆ. ಅಗಾಧ ಸಂಖ್ಯೆಯ ಈ ಪತ್ರಿಕೆಗಳು ಹಾಗೂ ಸುದ್ದಿ ವಾಹಿನಿಗಳು ಒಂದು ಕಡೆ ಪತ್ರಿಕೆ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯದ ವೈವಿಧ್ಯಮಯ ವಿಸ್ತರಣೆಯನ್ನು ಸಾಕ್ಷೀಕರಿಸಿದರೆ ಇನ್ನೊಂದು ಕಡೆ ಪ್ರಜಾಪ್ರಭುತ್ವದಲ್ಲಿ ಅವುಗಳಿಗಿರುವ ಬೇಡಿಕೆ ಮತ್ತು ಬೆಲೆಯನ್ನು ದೃಢಪಡಿಸುತ್ತದೆ. ಪ್ರಜಾಪ್ರಭುತ್ವವಾದಿ ಸರಕಾರಗಳ ಸಿದ್ಧಾಂತ ಒಂದೇ ಆಗಿದ್ದರೂ ಸಂರಚನೆ, ಕಾರ್ಯಾಚರಣೆ, ರಾಜಕೀಯ ಸಂಸ್ಕೃತಿ ಮತ್ತು ರಾಜಕೀಯ ಸಂಪರ್ಕಗಳಲ್ಲಿ ವೈವಿಧ್ಯತೆ ಕಂಡುಬರುತ್ತದೆ. ಅದರಂತೆಯೇ ಮಾಧ್ಯಮಗಳ ಸಂರಚನೆ ಹಾಗೂ ಕಾರ್ಯವ್ಯಾಪ್ತಿಗಳಲ್ಲೂ ಭಿನ್ನತೆಯಿದೆ.

ಪ್ರಜಾಪ್ರಭುತ್ವದ ಆಧಾರಸ್ತಂಭಗಳಾದ ಪತ್ರಿಕೆಗಳು ಮತ್ತು ಪ್ರಜಾತಾಂತ್ರಿಕ ಸಂರಚನೆಗಳು ರಾಷ್ಟ್ರದ ನರಮಂಡಲಗಳಾಗಿವೆ. ಇವು ಜನತೆಯ ಸಹಭಾಗಿತ್ವದಿಂದಲೇ ಜೀವಂತಿಕೆಯನ್ನು ಪಡೆಯುತ್ತವೆ. ಇವುಗಳಿಂದಲೇ ಸಕ್ರಿಯಗೊಳ್ಳುವ ಪ್ರಜಾಪ್ರಭುತ್ವದ ಪ್ರಕ್ರಿಯೆಯು ಕೇವಲ ಚುನಾವಣೆಯಲ್ಲಿ ಮತದಾನ ಮಾಡುವದಕ್ಕೆ ಮತ್ತು ಸ್ಪರ್ಧಿಸುವುದಕ್ಕೆ ಮಾತ್ರ ಸೀಮಿತವಾಗಿಲ್ಲ. ಪ್ರತಿನಿತ್ಯದ ರಾಜಕೀಯ ಆಗುಹೋಗುಗಳನ್ನು ಅವಲೋಕಿಸುವ ಹಾಗೂ ಜವಾಬ್ದಾರಿಯುತ ಪೌರ ಕರ್ತವ್ಯಗಳನ್ನು ನಿಭಾಯಿಸುವ ಹಕ್ಕನ್ನು ದೃಢಪಡಿಸುವ ಕಾರ್ಯದಲ್ಲಿ ನಿರತವಾಗಿರುವ ಪತ್ರಿಕೆಗಳು ಪ್ರಜಾಪ್ರಭುತ್ವದ ಸಂರಚನಾತ್ಮಕ ಪ್ರಕ್ರಿಯೆಯಲ್ಲಿ ಪ್ರಚೋದನಾತ್ಮಕ ಮತ್ತು ಸ್ಪಂದನಾತ್ಮಕ ಅಂಶಗಳಾಗಿವೆ. ಆದ್ದರಿಂದ ಪ್ರಜಾಪ್ರಭುತ್ವದ ಸಂರಚನೆಗಳನ್ನು ಪತ್ರಿಕೆಗಳ ದೃಷ್ಟಿಕೋನದಿಂದಲೂ ಮತ್ತು ಪತ್ರಿಕೆಗಳ ಪಾತ್ರವನ್ನು ಪ್ರಜಾಪ್ರಭುತ್ವದ ಸಂರಚನೆಗಳ ಸಂವರ್ಧನೆಯ ದೃಷ್ಟಿಕೋನದಿಂದಲೂ ಅವಲೋಕಿಸಬೇಕಾಗಿದೆ.

**ಮಲ್ಲಿಕಾರ್ಜುನ ಗುಮ್ಮಗೋಳ**
ಕೇರಾಫ್. ಎಸ್. ಎಸ್. ಕುಲಕರ್ಣಿ, 'ಶಿವಗಿರಿ ನಿವಾಸ'
೨ನೇ ಕ್ರಾಸ್, ಸಾಧನಕೇರಿ, ಧಾರವಾಡ – ೫೮೦ ೦೦೮

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

**HOSATHU** Kannada Monthly / OCTOBER 2015 / ₹ 15 (No. of Pages 64)
RNI Regd. KARKAN / 1999 / 614. Karnataka Regd. KARN/BGE/07/2015-17
Licenced to post without prepayment. WPP No.14.
Posted at BENGALURU PSO, MYSORE ROAD, BENGALURU-560 026 on the 28th of every month.